ಸತೀಹಿತೈಷಿಣೀ ಗ್ರಂಥಮಾಲಾ, ಮಣಿಸಂಖ್ಯೆ ೮.

# ವಿಕ್ರಮ

'ಸತೀಹಿತೈಷಿಣೀ' ಮಾತೃಮಂದಿರ,
ನಂಜನಗೂಡು.

ತೃತೀಯ ಮುದ್ರಣ ೩೦೦೦ ಪ್ರತಿಗಳು.

ಧಾರವಾಡ ಶ್ರೀಕೃಷ್ಣ ಮುದ್ರಾಯಂತ್ರದಲ್ಲಿ
ಮುದ್ರಿತವಾಯಿತು.

೧೯೩೧

ಬೆಲೆ ೧-೪-೦ ಹಾಸಲು ಬೇರೆ

॥ ಶ್ರೀಃ ॥

ಅಲಮೇಲಮಂಗಾಸಮೇತ

॥ ಶ್ರೀವೆಂಕಟೇಶಪ್ರಸನ್ನ ॥

# ಸಮರ್ಪಣೆ.

---

ಪೂಜ್ಯಪಾದರೂ, ಭಗವದ್ಭಕ್ತರೂ, ಉದಾತ್ತಪುರುಷರೂ, ದಯಾಪೂರ್ಣರೂ

ಶ್ರೀಯುಕ್ತ ವೆಂಕಟಕೃಷ್ಣಯಂಗಾರ್ಯ

ನಾಮಾಂಕಿತರೂ ಆಗಿರುವ

ನನ್ನ

ಪಿತೃದೇವರ ಘನಸನ್ನಿಧಾನದಲ್ಲಿ

ಅವರ

ಅವ್ಯಾಜಮನೋಹರ ವಾತ್ಸಲ್ಯರೂಪದ ಅನುಗ್ರಹವನ್ನು ಹೊಂದಿ

ಈ ವಿಕ್ರಮನಾಮಕ ಗ್ರಂಥಕುಸುಮವನ್ನು

ಭಕ್ತಿಪುರಸ್ಸರವಾಗಿ
ಸಮರ್ಪಿಸಿರುವೆನು.

---

# ವಿಜ್ಞಾಪನೆ.

ಸುಹೃದರೆ!

ಈ ವಿಕ್ರಮದ ಕಲ್ಪನೆಗೆ ಪ್ರೇರಕರೂ, ಪ್ರೋತ್ಸಾಹಕರೂ ನಮ್ಮ ಪೂಜ್ಯಪಾದರಾದ ಪಿತೃದೇವರಾಗಿರುವರು. ಅವರ ಆಶೀರ್ವಾದರೂಪದ ಸುಶಿಕ್ಷಣೆ, ಕಾಲೋಚಿತ ಹಿತಸೂಚನೆಗಳ ಬಲದಿಂದಲೇ ನಾವು ಈ ಗ್ರಂಥ ಲೇಖನ ಪರಿಚಾಲನಪ್ರವೃತ್ತಿಯನ್ನವಲಂಬಿಸಿ, ತನ್ಮೂಲಕ ದೇಶಭಾಷಾಸೇವೆ ಯಿಂದ ಇಹಜನ್ಮಧಾರಣೆಯಲ್ಲಿ ಕೃತಾರ್ಥತೆಯನ್ನು ಹೊಂದಲು ಯಥೋ ಚಿತವಾಗಿ ಪ್ರಯತ್ನವನ್ನು ಕೈಕೊಂಡಿರುವೆವು. ಮುಂದಿನ ಸೇವಾ ಕಾರ್ಯವು ಸರ್ವತೋಮುಖದಿಂದ ಶ್ಲಾಘನೀಯವಾಗಿ, ಮತ್ತು ಹಿತಕಾರಿ ಯಾಗಿ ಪರಿಣಮಿಸುವಂತಾಗಬೇಕಾದರೂ ಅವರ ಪರತರಾನುಗ್ರಹವೇ ಆಧಾರವಾಗಿರುವುದೆಂದು ದೃಢವಾಗಿ ಹೇಳಬಲ್ಲೆವು.

ಇರಲಿ, ಗ್ರಂಥಮಾಲೆಯಲ್ಲಿ ಪ್ರಥಮವರ್ಷದಲ್ಲಿ ಪ್ರಚುರವಾದ ನಾಲ್ಕು ಗ್ರಂಥಗಳೂ ಬರಿಯ ವೈರಾಗ್ಯನೀತಿಯೆಂದೂ, ನಮ್ಮ ಸೋದರೀ ಸೋದರರ ಮನಸ್ಸನ್ನು ಅಷ್ಟಾಗಿ ಉತ್ಸಾಹಪಡಿಸುವಂತಿಲ್ಲವೆಂದೂ ತಿಳಿದುದರಿಂದ, ಮತ್ತು 'ಪತ್ತೇದಾರಿಯ' ಕಾದಂಬರಿಗಳಲ್ಲಿ ನಮ್ಮವರ ಮನಸ್ಸು ಸೋತಿದೆ ಯೆಂದು ತಿಳಿದುದರಿಂದ, ಹೀಗೆ "ದಕ್ಷಕನ್ಯಾ" ಮತ್ತು "ವಿಕ್ರಮ" ಎಂಬ ಕಾದಂಬರಿಗಳ ಲೇಖನಗಳಲ್ಲಿ ಪಿತೃ, ಭ್ರಾತೃ, ಸುಹೃದ್ವರ್ಗಗಳಿಂದ ಪ್ರೇರಿತಳಾಗಿ ಕೈಹಾಕಿದುದಾಯ್ತು. ಆದರೆ ಬರಿಯ 'ಪತ್ತೆದಾರಿಗೆ' ಸಂಬಂಧಿ ಸಿದ ಸಾಹಸ, ಚಮತ್ಕಾರ, ಶೃಂಗಾರ, ವೀರ, ಹಾಸ್ಯ, ಅದ್ಭುತ ವಿಷಯ ಗಳನ್ನು ವಿವರಿಸುವುದರಿಂದ ನಮ್ಮ ಉದ್ದೇಶವೂ ಸತೀಹಿತೈಷಿಣೀ ನಾಮ ಧಾರಣವೂ ಸಾರ್ಥಕ್ಯವಾಗಲಾರವೆಂದೆಣಿಸಿ, ಅಲ್ಲಲ್ಲಿ ಸ್ತ್ರೀಸಮುದಾಯಕ್ಕೆ ಅತ್ಯಾವಶ್ಯಕವಾಗಿರಬೇಕಾದ ವಿಚಾರಗಳನ್ನು, ಪಾತ್ರಗಳ ಮೂಲಕವಾಗಿ ಚರ್ಚಿಸಿ, ಅದರಿಂದ ನಮ್ಮವರ ಮನಸ್ಸಿಗೆ ಹಿಡಿವಂತೆ ಮಾಡಿದೆಯಲ್ಲದೆ, ಉಚ್ಚತರಗತಿಯಲ್ಲಿ ಸುಶಿಕ್ಷಿತಳಾದ ಎಂದರೆ, ಸಾಮಾಜಿಕ ಶಿಕ್ಷಣ, ಗೃಹ ಶಿಕ್ಷಣಗಳನ್ನು ಹೊಂದಿ, ಪತಿಯ ಪೂರ್ಣಾನುಗ್ರಹಕ್ಕೂ ಪಾತ್ರಳಾದ ಸತೀ ಮಣಿಯು ವಿಶ್ವಸೇವೆಯಲ್ಲಿ ಪತಿಗೆ ಹೇಗೆ ಆದಿಶಕ್ತಿಯಾಗಿ ಸಹಕರಿಸುವ

ಳೆಂಬುದನ್ನೂ, ಸಾಮಾನ್ಯಶಿಕ್ಷಣದ ಸಹಾಯವೆಷ್ಟರಮಟ್ಟಿಗೆ ಸಹಕರಿಸಬಹು ದೆಂಬುದನ್ನೂ, ನೈತಿಕಶಿಕ್ಷಣವೂ, ಗೃಹಶಿಕ್ಷಣವೂ ಇಲ್ಲದ ಬರಿಯ ಭಾಷಾ ಶಿಕ್ಷಣದ ಪರಿಣಾಮವೆಷ್ಟೆಂಬುದನ್ನೂ ತಕ್ಕಮಟ್ಟಿಗೆ ಇದರಲ್ಲಿ ಪಾತ್ರಗಳ ಮೂಲಕ ತಿಳಿಸಿರುವುದು. ಮತ್ತು ದಕ್ಷಕನ್ಯೆಯಲ್ಲಿದ್ದಂತೆಯೇ ನ್ಯಾಯ ಸಭೆಯ ವಿಚಾರಣೆಯು ಇದರಲ್ಲಿದ್ದರೆ, ಸಮಾಜದ ಘನತೆಗೆ ಕೊರತೆಯೆಂದೂ, ಸಮಾಜದ ಘನತೆಯನ್ನೂ ಸಮಾಜಸೇವಕರಾದ ಸತ್ಪುರುಷರ ಸತ್ಸಂಕಲ್ಪ ವನ್ನೂ ಪ್ರದರ್ಶಿಸಿ, ಅಪರಾಧಿಗಳನ್ನು ಹಿತಬೋಧೆಯಿಂದೆಚ್ಚರಿಸಿ, ಸಮಾಜದ ದಯಾಶಿಕ್ಷೆಯಿಂದಲೇ ಪಶ್ಚಾತ್ತಾಪದ ಮಹತ್ತರವಾದ ತಾಪಕ್ಕೆ ಗುರಿಮಾಡಿ, ಪರಿಷ್ಕರಿಸಿ, ಮನ್ನಿಸಿದಂತೆ ತೋರಿಸಿದೆ. ಇದನ್ನೂ ಆಕ್ಷೇಪಿಸುವರಾದರೆ ನಾವೇನುಮಾಡುವ? ದಯೆಯಿಟ್ಟು ಕ್ಷಮಿಸಿ, ತಾಳ್ಮೆಯಿಂದ ಸಮಾ ಲೋಚಿಸಿ, ಸಮಾಜದ ಭದ್ರತೆಯನ್ನು ಹೇಗೆ ಕಾಪಾಡಬಹುದೆಂಬುದನ್ನು ತಿಳಿಯಹೇಳಿದರೆ, ಅದರಂತೆ ನಡೆವುದಕ್ಕೂ ಸಿದ್ಧರಾಗಿರುವೆವೆಂದು ಪ್ರಾರ್ಥಿ ಸುವುದುಮಾತ್ರವೇ ಮಾಡಬೇಕಾದುದಲ್ಲವೆ? ಆಗಲಿ.

ಪ್ರಭವಸಂ॥ ವೈಶಾಖ
ಮಾತೃಮಂದಿರಂ, ನಂಜನಗೂಡು.

**ಇತಿ ಹಿತೈಷಿಣಿ.**

# ದ್ವಿತೀಯ ಮುದ್ರಣದ ನಿವೇದನ.

ದೈವಾನುಗ್ರಹ, ದೇಶಬಾಂಧವರ ಆಶ್ರಯಗಳಿಂದ ಈ ಪುಸ್ತಕದ ಪ್ರಥಮ ಮುದ್ರಣದ ೫೦೦೦ ಪ್ರತಿಗಳೂ ಮುಗಿದುಹೋಗಿ, ಈಗ ಈ ಪುಸ್ತಕವನ್ನು ನಮ್ಮ ಘನತೆಹೊಂದಿದ ವಿದ್ಯಾಂಗದವರು ನಮ್ಮ ಪ್ರಾಂತದ V ಧಾರಂ ಪಠ್ಯಪುಸ್ತಕವಾಗಿ ನಿಯಮಿಸಿ ಪ್ರೋತ್ಸಾಹಿಸಿದುದರಿಂದ ಈಗ ದ್ವಿತೀಯ ಮುದ್ರಣವಾಗುವಂತಾಯಿತು. ಇದಕ್ಕಾಗಿ ನಮ್ಮ ಘನಸರ್ಕಾರದ, ವಿದ್ಯಾಂಗದವರ ಮತ್ತು ಪುಸ್ತಕಪರೀಕ್ಷಕರ ಅಭ್ಯುದಯವನ್ನು ಕೋರುವೆವು.

ಈ ಮುದ್ರಣದಲ್ಲಿ ನಮ್ಮ ಹಿತೈಷಿಗಳ ಸಲಹೆಯಂತೆ ತಕ್ಕಮಟ್ಟಿಗೆ ಸವರಿಸಿರುವೆವು.

೨೦-೮-೨೭
ಮುಕ್ಕಾಂ ಧಾರವಾಡ }

ಇತಿ—
ಹಿತೈಷಿಣಿ.

# ತೃತೀಯ ಮುದ್ರಣ.

ಈ ಪುಸ್ತಕದ ದ್ವಿತೀಯ ಮುದ್ರಣವು ೧೯೨೭ ನೆ ಜೂನ್ ತಿಂಗಳಲ್ಲಾಗಿ, ೧೯೨೯ ನೇ ಜುಲೈ ತಿಂಗಳೊಳಗಾಗಿ ೨೫೦೦ ಪ್ರತಿಗಳೂ ಮುಗಿದು ಹೋಗಿ ಇಂದಿನವರೆಗೂ ಪುಸ್ತಕವಿಲ್ಲದಿದ್ದುದು, ನಮ್ಮ ಘನಸರ್ಕಾರದವರ ಉದಾರಾಶ್ರಯ ಬಲದಿಂದ ಈಗ ತೃತೀಯ ಮುದ್ರಣವಾಗುವಂತಾದುದು. ಇದರಂತೆಯೇ-ದಕ್ಷಕನ್ಯಾ, ಪೂರ್ಣಕಲಾ, ಗಿರಿಜಾಬಾಯಿ ಈ ಮೂರು ಗ್ರಂಥಗಳ ದ್ವಿತೀಯ ಮುದ್ರಣವೂ ಆಗುವದು. ಮತ್ತು ಹೊಸ ಪುಸ್ತಕಗಳ ಮುದ್ರಣವೂ ನಡೆಯುವವೆಂದು ಸಂತೋಷದಿಂದ ನಿವೇದಿಸುವೆವು.

೭-೮-೩೧
ಮುಕ್ಕಾಂ ಧಾರವಾಡ. }

ಇತಿ—
ಹಿತೈಷಿಣಿ.

# ವಿಷಯಾನುಕ್ರಮಣಿಕಾ.



ವಿ. ಸೂ. ಪ್ರಥಮ ಮುದ್ರಣದ ಪುಟಸಂಖ್ಯೆಗೂ ಈಗಿನ ಪುಟ ಸಂಖ್ಯೆಗೂ ಹೆಚ್ಚುಕಡಿಮೆಯಾಗಿರುವುದಾದರೂ ಕಥಾವಸ್ತು, ವಿಚಾರ ವಿಮರ್ಶೆ ಇವೆಲ್ಲವೂ ಹಾಗೆಯೇ ಇರುವವು. 'ಭೈರವೀಪ್ರಸಾದ' ಎಂದಿದ್ದುದು 'ದುರ್ಗಾಪ್ರಸಾದ' ಎಂದು ಬದಲಾಯಿಸಲ್ಪಟ್ಟಿರುವುದು.

---

॥ ಶ್ರೀಃ ॥

॥ ಶ್ರೀ ಲಕ್ಷ್ಮೀ ಕೇಶವ ಪ್ರಸನ್ನ ॥

# ವಿಕ್ರಮ.

ಸಿದ್ಧಿಂ ಸರ್ವಾಣಿ ಭೂತಾನಿ ಭೂತಾನಾಂ ಚೈವಯ ಪ್ರಭು ।
ದೂಸ್ಸನ್ತಿ ಮನು ಯೇಬುನ್ಯೇ ಪ್ರದೃಷ್ಟ್ವಾ ಪದಿ ಗೋಚರಾ ॥

( ಸುಂ ಸ 13 ಶ್ಲೋ॥ 68)

## ಪ್ರಥಮ ಪರಿಚ್ಛೇದ.

॥ಕಂದ॥ ಸಿರಿಗೆನ್ನದೆ ಸೊಗನ್ನದೆ ।
ನೇನಂಜಿದ ಪೆಂಡಿರು ಭಾಪ್ಪೊಡೆ ಸುತರ ॥
ಚರಿಪುದಕೇರ್ಕಶದಿನೆನು ।
ಕೂರದಪರಿಂ ಕಷ್ಟ ದಾಸ್ಯಮೇಂ ಪರಿಹಾರ್ಯಂ ॥

( ಸೂಕ್ತಿ )

### (ಸೇವಾವೃತ್ತಿ)

ಬೇಸಿಗೆಯಕಾಲ, ನಡುಹಗಲು, ಸೂರ್ಯದೇವನು ನೆತ್ತಿಯ ಮೇಲಕ್ಕೆ ಬಂದು ತಪಿಸುತ್ತಿದ್ದನು ಇಂತಹ ವೇಳೆಯಲ್ಲಿ ಬಿಸಲ ಜಳದಿಂದ ಕೆಂಪಗೆಕಾಯ್ದು ಸೀದುಹೋಗುತ್ತಿರುವ ನೆಲದಮೇಲೆ ಕಾಲಿಡುವುದೆಂದರೆ, ಆರ ಮನಸ್ಸು ಹಿಂದೆಗೆವುದಿಲ್ಲ? ಅದರಲ್ಲಿಯೂ ಕಲ್ಯಾಣನಗರದ ಹೆದ್ದಾರಿಯ (*High-road*) ವಿಷಯವಾಗಿ ಹೇಳಬೇಕೇ! ಕಲ್ಲು, ಮಳಲು, ಇಟ್ಟಿಗೆ, ಮಣ್ಣು ಇವೆಲ್ಲವುಗಳಿಂದೆಯೂ ಚನ್ನಾಗಿ ದಟ್ಟಿಸಲ್ಪಟ್ಟಿರುವುದು. ಮೊದಲೇ ಗಟ್ಟಿಯಾದ ನೆಲವು, ಸಾಲದುದಕ್ಕೆ ಬಿಸಲಜಳದಿಂದ ಕಾದ ಕಬ್ಬಿಣದಂತೆ ಕಾಯುತ್ತಿದ್ದರೆ ಮತ್ತೇನುಹೇಳಬೇಕು? ಒಮ್ಮೆ ಕಾಲಿಟ್ಟಮಾತ್ರಕ್ಕೆ ಸಾಕು,- ಅಂಗಾಲಲ್ಲಿ ಗುಳ್ಳೆಗಳೇಳುವುವು. ಇನ್ನು ಉದ್ದಕ್ಕೂ ಕಾಲುನಡೆಯಿಂದ ಮೂಟೆಗಳನ್ನೂ ಹೊತ್ತು ನಡೆದುಹೋಗ

ಬೇಕೆಂದರೆ ಮನಸ್ಸು ಹಿಂದೆಗೆಯಲೊಲ್ಲದೇನು? ಮನಸ್ಸು ಹಿಂದೆಗೆದ ಮಾತ್ರಕ್ಕೇ ಬಿಟ್ಟು ತೀರುವುದೇ? ಕಾಲಿಟ್ಟೂ ಇಡಬೇಕು, ದೂರವನ್ನು ನಡೆದೂ ಹೋಗಬೇಕು. ಕೆಲಸಗಾರರೂ ಗೂಳಿಗದವರೂ ಬೇಸಿಗೆಯ ಬಿಸಿಲು-ಬಸವಳಿಕೆ, ಎಂದೇನಾದರೂ ಕಳಿತಿರಲಾಗುವುದೋ? ಮಾಡತಕ್ಕುದನ್ನು ಆಗಾಗಲೇ ಮಾಡಿಕೊಂಡು ಬರುತ್ತ ತಮ್ಮ ಮುಂದಿನ ಪಾಡು ಏನಾಗುವುದೋ ನೋಡಿಕೊಳ್ಳಬೇಕು. ಇಲ್ಲದಿದ್ದರ ಅವರಿಗೆ ಉಳಿವಿಲ್ಲ.

ಪಾಪ! ಈ ವೇಳೆಯಲ್ಲಿ, ಈ ಹೆದ್ದಾರಿಯಲ್ಲಿ, ಕಾಗದಗಳ ಗಂಟನ್ನು ಹೊತ್ತು ಕೊಂಡು ಓಡುತ್ತಿರುವ ರಾಜಕೀಯ ಸೇವಕನನ್ನು ನೋಡಿದರೆ, ಮನಸ್ಸು ಕರಗಿಹೋಗುತ್ತಿರುವುದು. ಒಂದೇ ಓಟದಲ್ಲಿ ಸಾಗಿಯುತ್ತಿರುವುದರಿಂದ, ಬಹುಳವಾದ ಬಳಲಿಕೆಯುಂಟಾಗಿ ಅಡಿಗಡಿಗೂ ನಿಟ್ಟುಸಿರು ಹೊರಡುತ್ತಿರುವುದು, ಮುಖದಲ್ಲಿ ಧಾರೆಧಾರೆಯಾಗಿ ಬೆವರು ಸುರಿಯುತ್ತಿರುವುದು, ತುಟಿನಾಲಗೆಗಳು ಒಣಗಿಹೋಗಿರುವುವು ಇಷ್ಟಾದರೂ ನಡುವೆ ಒಂದೆಡೆಯಲ್ಲಿ ಕುಳಿತು, ಒಂದೆರಡು ನಿಮಿಷವಾದರೂ ಸುಧಾರಿಸಿಕೊಂಡಿದ್ದು ನಡದೇನೆಂದರೆ, ಅವನಿಗೆ ಅಷ್ಟರ ಅವಕಾಶವು ಇಲ್ಲ, ಕುಳಿತುಕೊಳ್ಳುವಂತಹ ನೆಳಲುಳ್ಳ ಎಡೆಯೂ ಇರುವುದಿಲ್ಲ ಮತ್ತೇನು ಮಾಡುವನು? ಸೇವಾವೃತ್ತಿಯು ಮಹಿಮೆ ಇದು!

ಸೇವಕನು ಮುಂದೆ ನಡೆಯಲಾರದವನಾಗಿ, ಬೆದರಿಕೆಯಿಂದ ಅಡಿಗಡಿಗೆ ಹಿಂದಿರುಗಿ ನೋಡುತ್ತ ನಾಲ್ಕಾರು ಹೆಜ್ಜೆಗಳನ್ನಿಟ್ಟು, ಮುಂದೆ ಅದೂ ಸಾಗದೆ ಆದುದಾಗಲೆಂದು ಕೈಯಲ್ಲಿದ್ದ ಗಂಟನ್ನು ನೆಲದಮೇಲಿಟ್ಟು, ಹೊದ್ದಿದ್ದ ಬಟ್ಟೆಯನ್ನು ನೆಲದಮೇಲೆ ಹಾಸಿ, ಅದರ ಮೇಲೆ ಕುಳಿತು ಆಯಾಸದಿಂದ—“ಸಾಕಪ್ಪಾ ಸಾಕು! ಈ ಪಾಡು ಸಾಕು! ಹೊಟ್ಟೆಗಿಲ್ಲವೆಂದು ಹೀಗೆ ಒದ್ದಾಡಿ ಸಾಯಬೇಕು, ಮನೆ-ಹೆಂಡಿರು-ಮಕ್ಕಳು ಇದನ್ನು ಕಟ್ಟಿಕೊಂಡುದಕ್ಕೆ ಹೊಟ್ಟೆಗಿಲ್ಲದೆ ಸಾಯುತ್ತಿರುವ ಅವರನ್ನು ನೋಡಲಾರದೆ ಎಷ್ಟಾದರೂ ಸತ್ತು ಸುಣ್ಣವಾಗಲೇಬೇಕು. ಇಲ್ಲದಿದ್ದರೆ ಇದೊಂದೂ ಅಗತ್ಯವಿರುತ್ತಿರಲಿಲ್ಲ.” ಎಂದು ಹೇಳುತ್ತ ಹೇಳುತ್ತ ಹೆದರಿಕೆಯಿಂದ ಹಿಂದಿರುಗಿ ನೋಡಿದನು. ಬಹುದೂರದಲ್ಲಿ ಹೊಗೆಯುಗುಳುತ್ತ ಬರುತ್ತಿದ್ದ (*Motor-car*) ವಿಸರ್ಪಿರಥವನ್ನು ಕಂಡು, ಬೆದರಿ ಎದ್ದು

ನಿಂತು, ಗಂಟನ್ನು ತಲೆಯಮೇಲಿಟ್ಟು, ಬಟ್ಟೆಯನ್ನು ಹೊದೆದು ಆತುರ ದಿಂದ– 'ಆಗಲೇ ಬರುತ್ತಿರುವರಲ್ಲಪ್ಪ. ಇನ್ನೇನು ಗತಿ! ನಾನು ಎಷ್ಟು ಹೊತ್ತಿಗೆ ಕಚೇರಿಗೆ ಹೋಗುವುದು? ನಡೆದು ಹೋಗಬೇಕು. ಹಾಳು ನೆಲದಮೇಲೆ ಕಾಲಿಟ್ಟರೆ ನೀರುಹೋಗುತ್ತದೆ ನನಗಿಂತ ಮೊದಲೇ ಅವರು ಬಂದು ಬಿಟ್ಟರೇನು ಮಾಡಲಿ? ಬೀಗದ ಕೈ ನನ್ನಲ್ಲಿದೆ, ನಾನು ಇಲ್ಲಿ ನಿಲ್ಲದೆ ಆಗಲೇ ಹೋಗಬೇಕಾಗಿತ್ತು ಥೂ ಥೂ! ಹಾಳು ಒಡತನದ ಗೋಳು, ಮನೆಯವರ ಕಾಟ, ಮಕ್ಕಳ ಕೋಟಲೆ,— ಇವೆಲ್ಲಾ ತೊಡಕು ಗಳಿಗೂ ಸಿಕ್ಕಿ, ಈ ಜಂಜಾಟದಿಂದ ಬಿಡಿಸಿಕೊಂಡು ಬರುವುದೇ ಇಷ್ಟು ಹೊತ್ತಾಯಿತು ಹಾಗೆಯೇ ಬಂದಿದ್ದರೆ ಚೆನ್ನಾಗಿದ್ದಿತು ಇವೆಲ್ಲವನ್ನೂ ಹೇಳಿದರೆ ಕೇಳುವವರು ಯಾರು? ಯಾರಲ್ಲಿ ದೂರು ಹೇಳಿಕೊಳ್ಳುವುದು? ನಾನು ಕೇಳಿಕೊಂಡು ಬಂದುದನ್ನು ಮತ್ತಾರು ತಪ್ಪಿಸುವರು? ನಾನೇ ಉಣಬೇಕು ಅವರೇನು ಮಹಾರಾಯರು! ನವೆಯಬೇಕೇ?– ದುಡಿಯ ಬೇಕೆ? ಆಳು ಕಾಳುಗಳು ಹೇಳಿಕೇಳಿದಷ್ಟು ಸಿದ್ಧವಾಗಿರುವರು, ಮತ್ತೆ ಕಣ್ಣಿನಸನ್ನೆಯಿಂದ ಇಷ್ಟವರಿತು ಕೆಲಸಮಾಡುವಂಥವರಿರುವರು ಅಂತಹರು ಉಗಿಬಂಡಿಯಲ್ಲಿ ಕುಳಿತು, ಹೊತ್ತಿಗೆ ಸರಿಯಾಗಿ ಗಾಳಿಬರುವಂತೆ ಬಂದೇ ಬರುವರು ಇಲ್ಲಿ ನಮಗಲ್ಲವೇ ಪ್ರಾಣಾಪತ್ತು! ಹೀಗೆ ಬಂದೆರಡು ನಿಮೀಷದ ವರೆಗೆ ಸುಮ್ಮನಿದ್ದು ಬಳಿಕ ಎಚ್ಚೆತ್ತು,– 'ಛಿ! ಛಿ!! ನಾನೆಂತಹ ಹುಚ್ಚನಾದೆ? ನನ್ನ ಬಾಯಿಂದ ಇಂದೇಕೆ ಇಂತಹ ಬಗೆಗೆಟ್ಟ ಮಾತು? ನನಗೆ ಇಷ್ಟು ದಿನಗಳಾಗಿರುವುದೂ ವ್ಯರ್ಥ! ದಿನಗಟ್ಟಲೆ ಒಡತನದ ಕಾಟ ಕ್ಕಾಗಿ ಬೇಸತ್ತು ಹೀಗೆ ಮೈಮರೆತು ಹುಚ್ಚು ಹುಚ್ಚಾಗಿ ಹೇಳಬಹುದೆ? ಇದು ಕೂಡದು ಇದ್ದುದರಲ್ಲಿ ಸಮಾಧಾನವನ್ನೇ ತೆಗೆದುಕೊಂಡು, ನನ್ನ ಕೆಲಸವನ್ನು ನಾನು ಪಾಲುಮಾರದೆ ಮಾಡಬೇಕು ಇಲ್ಲದಿದ್ದರೆ, ನಾನು ದೈವದ್ರೋಹಿಯೇ ಆಗುವೆನು ಅದರಮೇಲೆ ನಮ್ಮ ಧಣಿ ಸಾಮಾನ್ಯ ರಂತಿಲ್ಲ ಅವರೇ ಪ್ರತ್ಯಕ್ಷ ಧರ್ಮರಾಜನೆಂದು ಹೇಳಬೇಕು ಅವರಂತಹ ದಯಾಳುಗಳೂ, ಆಶ್ರಿತರಲ್ಲಿ ಪ್ರೀತಿಯುಳ್ಳವರೂ ಆದ ಅಧಿಕಾರಿಗಳನ್ನು ನಾನು ಈವರೆಗೆ ನೋಡಿಲ್ಲ ಅವರು 'ದಯಾನಾಥ' ಎಂಬ ತಮ್ಮ ಹೆಸರಿಗೆ ತಕ್ಕಂತೆ ನಡೆಯುತ್ತಿರುವುದರಿಂದಲೇ, ನಮ್ಮಂತಹರ ಜೀವನವೂ ಸುಖ

ವಾಗಿ ನಾಗುತ್ತಿದೆ. ಅಂತಹರ ದರ್ಶನವೇ ಎಷ್ಟೋ ಸುಖವನ್ನುಂಟು ಮಾಡಬಲ್ಲುದು. ಅಂತಹದರಲ್ಲಿ ಯಾವಾಗಲೂ ಅವರ ಸೇವೆಯನ್ನೇ ಮಾಡು ವಾಗೆ ಕೇಳಬೇಕೇ ? ಭಗವಂತನು ನಮ್ಮ ಪ್ರಭುಗಳಿಗೆ ಇನ್ನೂ ಹೆಚ್ಚಿನ ಸಂಪತ್ತನ್ನೂ, ಸುಖಸಂತೋಷಗಳನ್ನೂ, ಕೊಡಬೇಕು. ಅವರ ದಯೆ ಯಿಂದ ನಾವು ಹೇಗಾದರೂ ಮುಂದಕ್ಕೆ ಬಂದೇಬರುವೆವು. ಇನ್ನು ಇಲ್ಲಿ ನಿಲ್ಲಬಾರದು ಮುಂದೆ ಎಂದಿಗೂ ನನ್ನಲ್ಲಿ ಸೋಮಾರಿತನಕ್ಕೆ ಎಸಿಕ್ಕ ದಂತೆ ಎಚ್ಚೆತ್ತಿದ್ದು, ನನ್ನ ಊಳಿಗದ ಕೆಲಸದಲ್ಲಿ ನಾನು ಸರಿಯೆನ್ನಿಸಿಕೊಳ್ಳು ವೆನು.' ಎಂದು ಹೇಳುತ್ತ ಅಲ್ಲಿ ನಿಲ್ಲದೆ ಹೊರಟು ಹೋದನು

---

**ಶ್ರೀ :**

## ದ್ವಿತೀಯಃ ಪರಿಚ್ಛೇದ.

" ಜಾನಾಮಿ ಚಾರುದತ್ತಂ ವಸಂತಸೇನಾಂಚ ಜಾನಾಮಿ ।
ಪ್ರಾಪ್ತೇತು ರಾಜ್ಯಕಾರ್ಯೇ ಪಿತರಮಪ್ಯಹಂ ನ ಜಾನಾಮಿ ॥ "

( ಅಧಿಕಾರದ ಉತ್ತರವಾದಿತ್ವ. )

ಕಲ್ಯಾಣನಗರದ ನ್ಯಾಯಾಧಿಕಾರಿ ( ಪ್ರಾಡ್ವಿವಾಕ – *Judge* ) ನ್ಯಾಯಸ್ಥಾನಕ್ಕೆ ( *Court* ) ಬರುವ ವೇಳೆ ಮೀರುತ್ತಿತ್ತು. ನ್ಯಾಯ ಸ್ಥಾನ ( ನ್ಯಾಯಾಧಿಕರಣ ) ದಲ್ಲಿ ಇತರ ಅಧಿಕಾರಿಗಳೂ ವ್ಯಾಜ್ಯಪಕ್ಷ ದವರೂ, ಸಾಕ್ಷಿಗಾರರೂ, ವಿಮರ್ಶಕರೂ ಬಂದು ಅಧಿಕಾರಿಯ ಆಗ ಮನ ನಿರೀಕ್ಷಣೆಯಿಂದ ಹೊರಗಡೆಯನ್ನೇ ನೋಡುತ್ತ ಕುಳಿತಿದ್ದರು. 'ಹೊತ್ತು ಹನ್ನೆರಡುಗಂಟೆಯು ಹೊಡೆದು ಹೋಯಿತು. ಇನ್ನೂ ನ್ಯಾಯಾಧಿಕಾರಿ ( *Judge* ) ಗಳು ಬರಲಿಲ್ಲವೇಕೆ ?' ಎಂಬ ಪ್ರಶ್ನೆಯೂ, ಅದಕ್ಕೆ ತೋರಿದಂತೆ ಉತ್ತರಪ್ರತ್ಯುತ್ತರಗಳೂ ನಡೆಯುತ್ತಿದ್ದುವು. ಹೊರ ಬಾಗಿಲಲ್ಲಿ ನಮ್ಮ ಪೂರ್ವಪರಿಚಿತನಾದ ಸೇವಕನು ಪ್ರಭುಗಳ ಆಗಮನ ವನ್ನಿದಿರುನೋಡುತ್ತ ಕೈಕಟ್ಟಿಕೊಂಡು ನಿಂತೇ ಇದ್ದನು.

ಸೇವಕನ ನಿರೀಕ್ಷಣೆಯಂತೆಯೇ "ಮೋಟಾರು" ಬಂಡಿಯೊಂದು ಬಂದು "ಕೋರ್ಟಿ" ನ ಮುಂದೆ ನಿಂತಿತು ಬಂಡಿಯಿಂದ ಅಯ್ವತ್ತು-ಅಯ್ವತ್ತಯ್ದು ವರ್ಷ ವಯಸ್ಸುಳ್ಳ ದೃಢಕಾಯನೊಬ್ಬನು ದಂಡಪಾಣಿಯಾಗಿ ಕೆಳಗಿಳಿದನು. ಸೇವಕನು ಬಂದು ಕೈಮುಗಿದು, ಪ್ರಭುವಿನ ಅಪ್ಪಣೆಯಂತೆ ಬಂಡಿಯಲ್ಲಿದ್ದ ಮುಖ್ಯವಾದ ನ್ಯಾಯನಿರ್ಣಯ (*Judgment*) ಪತ್ರಗಳ ಕಟ್ಟನ್ನು ಕೈಗೆ ತೆಗೆದುಕೊಂಡು, ಅಧಿಕಾರಿಯ ಹಿಂದೆ ಹೊರಟನು. ಅಧಿಕಾರಿಯು ಅಂಗಿಯ ಕಿಸೆಯಲ್ಲಿದ್ದ ಗಡಿಯಾರವನ್ನು ತೆಗೆದು ನೋಡಿ, ಹೊತ್ತು ಮಿತಿಮೀರಿ ಹೋಗಿದೆಯೆಂದು ಹೇಳುತ್ತ, ಅವಸರದಿಂದ ನ್ಯಾಯಸ್ಥಾನದೊಳಹೊಕ್ಕನು.

ನ್ಯಾಯಾಧಿಕಾರಿಯ ಶಾಂತಮೂರ್ತಿಯನ್ನು ನೋಡಿ, ಒಳಗಿದ್ದವರೆಲ್ಲರೂ ಆದರ ಗೌರವಗಳಿಂದ ಎದ್ದು ಸನ್ಮಾನಿಸಿದರು. ನ್ಯಾಯಾಧಿಕಾರಿಯಾದ ದಯಾನಾಥನೂ ಪ್ರತಿಭಿವಂದನಪೂರ್ವಕವಾಗಿ ಅಭಿನಂದನವನ್ನು ಪ್ರದರ್ಶಿಸಿ, ನ್ಯಾಯಾಸನದಲ್ಲಿ ಅಧಿಷ್ಠಿತನಾದನು ಆ ಬಳಿಕ ಉಳಿದವರೂ ಯಥಾಕ್ರಮವಾಗಿ ನಿಯತಸ್ಥಾನವನ್ನು ಸೇರಿದರು

ದಂಡಪಾಲ (*Magistrate*) ನಾದ ದಯಾನಾಥನು ತನ್ನ ನಿತ್ಯನೈಮಿತ್ತಿಕ ಕ್ರಿಯೆಯಲ್ಲಿ ದಿನಕ್ರಮದಂತೆ "ಹಾಜರಾತಿ" ಯನ್ನು ಬರೆಯಲಿಕ್ಕಾಗಿ "ಮೇಜಿನ" ಮೇಲಿದ್ದ ಕಾರ್ಯಪದ್ಧತಿಯ ಪುಸ್ತಕವನ್ನು ತೆಗೆದು ಹಾಳೆಗಳನ್ನು ತಿರುವಿ ಹಾಕಿದನು ತಿರುವಿ ಹಾಕುತ್ತಿದ್ದಂತೆಯೇ ಪುಸ್ತಕದ ಹಾಳೆಗೆ ಸೇರಿದ್ದ ಒಂದು ಸೂಚನಾಪತ್ರವನ್ನು ಕಂಡು ಚಕಿತನಾಗಿ, ಅದನ್ನು ಕೈಗೆ ತೆಗೆದುಕೊಳ್ಳಹೋದನು, ಬರಲಿಲ್ಲ ಅದು ಪುಸ್ತಕದ ಹಾಳೆಗಳೊಡನೆ ಸೇರಿ, ಗುಂಡುಸೂಜಿಯಿಂದ ಸಿಕ್ಕಿಸಲ್ಪಟ್ಟಿದ್ದಿತು. ದಯಾನಾಥನು ಕುತೂಹಲದಿಂದ ಹಾಗೆಯೇ,– ಪುಸ್ತಕದಲ್ಲಿದ್ದಂತೆಯೇ ಓದಿನೋಡಿದನು (ಆ ಪತ್ರದಲ್ಲಿದ್ದ ವಿವರವು ಹೀಗಿದ್ದಿತು.)

—"ಪುರಪಾಲಕರ (*City police*) ಪ್ರಜಾಹಿತ ತತ್ಪರಜ್ಞತೆ (*Public-spirit*) ಯನ್ನು ಪರೀಕ್ಷಿಸುವ ಕಾಲವು ಬಂದಿದೆ. ಅವರು ತಮ್ಮ ಕೆಲಸಗಳಲ್ಲಿ ಎಷ್ಟರಮಟ್ಟಿಗೆ ನೈಪುಣ್ಯವನ್ನು ತೋರಬಹುದೆಂಬುದನ್ನು ತ್ವರೆಯಿಂದ ಪರ್ಯಾಲೋಚಿಸಿ, ನಿರ್ಧರಿಸಿಟ್ಟು ಚನ್ನಾಗಿ ಎಚ್ಚತ್ತು

ಕೊಂಡಿರಲಿ. ಕಲ್ಯಾಣನಗರದ ಶ್ರೀಮಂತನೂ ಪ್ರಸಿದ್ಧ ವಿದ್ವನ್ಮಣಿಯೂ ಆದ ಒಬ್ಬನ ಮನೆಯ ಮೇಲೆ ನಮ್ಮ ಗುಪ್ತ ಸಂಘದವರ ಗುರಿ ಬಿದ್ದಿರುವುದು. ಇಷ್ಟರಲ್ಲಿಯೇ ನಮ್ಮ ಉದ್ದೇಶವು ಈಡೇರುವ ಕಾಲವೂ ಬರಬಹುದು. ಇದರಿಂದ ಮುಂದೆ ಆಗಬಹುದಾಗಿರುವ ಅನಾಹುತಗಳನ್ನು ತಪ್ಪಿಸುವಂತಹ ದಕ್ಷತೆಯು ನಿಮ್ಮ ಸಂಘದವರಲ್ಲಿದ್ದರೆ, ಸರ್ವಸಾಹಸವನ್ನೂ ಪ್ರಕಟಪಡಿಸಬಹುದಾಗಿದೆಯೆಂದು, ಈ ಸೂಚನಾಪತ್ರದಿಂದ **ಇದೇ ಮೊದಲನೆಯದಾಗಿ, ಇದೇ ಕಡೆಯದಾಗಿ ಎಚ್ಚರಿಸಿದ್ದೇನೆ.”**

ದಯಾನಾಥನು ಒಂದೆರಡು ಸಲ ಪತ್ರವನ್ನು ಓದಿನೋಡಿದನು. ಬಳಿಕ ತಲೆಯೆತ್ತಿ ಸಭಾಂಗಣದಲ್ಲಿದ್ದವರೆಲ್ಲರನ್ನೂ ಒಮ್ಮೆ ಕುಟಿನೋಟದಿಂದ ನೋಡಿ, ಏನನ್ನೋ ಆಲೋಚಿಸುವಂತೆ ಮತ್ತೆ “ ರಿಜಿಸ್ಟರಿ ” ನಲ್ಲಿ ಬರೆಯಬೇಕಾಗಿದ್ದುದನ್ನು ಬರೆದಿಟ್ಟು, ಗಂಡುಸೂಜಿಯಿಂದ ಸೂಚನಾಪತ್ರವನ್ನು ಪ್ರತ್ಯೇಕಿಸಿ ತೆಗೆದು ಅಂಗಿಯ ಕಿಸೆಯಲ್ಲಿಟ್ಟುಕೊಂಡು, ಮುಂದಿನ ಕಾರ್ಯದಲ್ಲಿ ನಿರತನಾದನು

ಮುಂದೆ ನಡೆಯಬೇಕಾಗಿದ್ದ ವಾದಗಳ ತೀರ್ಮಾನವೂ, ಹಿಂದಿನ ದಿನದಲ್ಲಿ ಉಳಿದಿದ್ದ ಒಂದೆರಡು ವಿಚಾರಣೆಗಳೂ ಅವಸರದಿಂದ ಹೇಗೋ ನೆರವೇರಿಸಲ್ಪಟ್ಟುವು. ಇಷ್ಟೆಲ್ಲಾ ಒಂದೆರಡು ಗಂಟೆಗಳೊಳಗಾಗಿಯೇ ಮುಗಿದುಹೋಯಿತು ವಿಚಾರಣೆಗೆ ಬಂದಿದ್ದವರೆಲ್ಲರೂ ಹಿಂದಿರುಗಿ ಹೊರಟುಹೋದರು. ಅವರಲ್ಲಿ ಒಬ್ಬ ಗಣ್ಯನಾದ ರಾಜಪುರುಷನೊಬ್ಬನು ಮಾತ್ರ ಹೊರಗೆ ಹೋಗದೆ ದಯಾನಾಥನ ಬಳಿಗೆ ಬಂದುನಿಂತು, ವಂದನೆಯನ್ನು ಸೂಚಿಸಿದನು.

(ದಯಾನಾಥನು ಆಸನವನ್ನು ಬಿಟ್ಟೆದ್ದು ಬಂದು, ನಿಂತಿದ್ದವನ ಕೈಯನ್ನು ಹಿಡಿದು, ಹಾಗೆಯೇ ನ್ಯಾಯಾಧಿಕರಣಭವನದ ಹಿಂಗಡೆಯ ತೋಟಕ್ಕೆ ನಡೆದು ಪ್ರೀತಿವ್ಯಂಜಕಸ್ವರದಿಂದ ಮೆಲ್ಲಮೆಲ್ಲನೆ,) ‘ ಏನಯ್ಯಾ, ದುರ್ಗಾಪ್ರಸಾದ ! ಶರನ್ನವರಾತ್ರಿಯಲ್ಲಿ ನಡೆಯಬೇಕಾಗಿದ್ದ ದುರ್ಗಾಮಹೋತ್ಸವವು ಸಾಂಗವಾಗಿ ನೆರವೇರಿತೇ ? ನಮ್ಮವರೆಲ್ಲರೂ ಸೌಖ್ಯವಾಗಿರುತ್ತಾರೆಯೇ ? ನೀನು ಬಂದುದೆಂದು ? ಮತ್ತೇನು ವಿಶೇಷ ? ಎಂದು ಕೇಳಿದನು.

**ದುರ್ಗಾಪ್ರಸಾದ :—** "ಮಹಾಸ್ವಾಮಿ ! ' ತಮ್ಮಂಥ ಹಿರಿಯರ ಶಾಸನ ಬಲದಿಂದಲೂ, ಅಂಬಿಕಾ ಪ್ರಸಾದದಿಂದಲೂ ದುರ್ಗಾಮಹೋತ್ಸವವು ಬಹು ಸಂಭ್ರಮದಿಂದ ನೆರವೇರಿತು ಉತ್ಸವಕಾಲದಲ್ಲಿ ತಮ್ಮಂತಹರ ವಿಚಾರಣೆಯಿಂದ ಮತ್ತಾವ ವಿಘ್ನಗಳೂ ತಟ್ಟದೆ, ನಿರುಪದ್ರವದಿಂದ ಜನರೆಲ್ಲರೂ ಉತ್ಸಾಹಭರಿತರಾಗಿಯೇ ಇದ್ದರು. ಅಲ್ಲಿರುವ ನಮ್ಮವರೆಲ್ಲರೂ ಸುಕ್ಷೇಮಿಗಳಾಗಿಯೇ ಇರುವರು ನನ್ನ "ರಜಾ" ಕಾಲವು ನಿನ್ನೆಗೇ ಮುಗಿದುದರಿಂದ, ನಾನು ನಿನ್ನೆಯೇ ಇಲ್ಲಿಗ ಬಂದು ಕೆಲಸದಮೇಲೆ 'ಹಾಜರಾ' ದೆನು ಇಂದೇನು, ತಾವು ' ಕೋರ್ಟಿ " ಗೆ ಬರುವುದು ಬಹು ತಡವಾಯ್ತು? ಹೀಗೆಂದೂ ಆಗಿದ್ದಂತೆ ಕಾಣೆನು ಇದಕ್ಕೆ ವಿಶೇಷ ಕಾರಣವೇನಾದರೂ ಇರಬಹುದೋ—ಹೇಗೋ ತಿಳಿಯಬೇಕಾಗಿ ಕುತೂಹಲಯುಗಿರುವೆನು " ಎಂದನು

**ದಯಾನಾಥ :—** ಅಯ್ಯ ! ವಿಶೇಷಕ್ಕೆ ಕಡಿಮೆಯಿಲ್ಲ. ಮನೆಯಲ್ಲಿ ಹೆತ್ತ ತಾಯಿ ಮುಪ್ಪಿನ ಮುದುಕಿ ಇಂದೋ—ನಾಳೆಯೋ—ಈಗಲೋ ಕ್ಷಣಕ್ಕೋ ಸಾಯುಜ್ಯ ಪದವನ್ನು ಹೊಂದಲು ಹೋರಡುವುದರಲ್ಲಿರುವಳು. ಆಕೆಯ ಸೇವೆ ಮುಂದೆ ನನಗೆ ಬೇಕೆಂದರೂ ಲಭಿಸಲಾರದು. ಈಗಲಾದರೂ ನಮ್ಮ ಜನ್ಮದ ಸಾಫಲ್ಯವನ್ನು ಹೊಂದಬೇಕಾದ ಈ ಮಾತೃಸೇವೆಯಲ್ಲಿ ನಿರತರಾಗಬೇಕೆಂದರೆ,— ನಮ್ಮ ದೇಹವೂ, ದೇಹಾಂತರ್ಗತವಾದ ಮನಸ್ಸೂ ರಾಜಸೇವೆಗೆ ಹೊಣೆಯಾಗಿರುವುವು. ಅಲ್ಲಿ ನಿಂತರೆ ಇಲ್ಲಿಯ ಕೆಲಸವೂ, ಇಲ್ಲಿಗೆ ಬಂದರೆ ಅಲ್ಲಿಯ ಸೇವೆಯೂ ಹೀಗೆ ಬಂದರಿಂದ ಮತ್ತೊಂದು ನಿಂತು ಹೋಗುವದು. ಇವೆರಡರಲ್ಲಿ ಯಾವುದನ್ನೂ ಬಿಡುವಂತಿಲ್ಲ. ಬಂದುವೇಳೆ, ಇಲ್ಲಿಯ ಕೆಲಸಗಳನ್ನು ಕೆಲವು ದಿನಗಳ ಮಟ್ಟಿಗೆ ಯಾರ ವಿಚಾರಣೆಗಾದರೂ ಬಿಟ್ಟು ಹೋಗಬಹುದೆಂದರೆ, ಈಗಳಿನ ಸ್ಥಿತಿಯಲ್ಲಿ ಅದೂ ಸಾಧ್ಯವಾಗುವಂತಿಲ್ಲ. ಈ ಅವಸ್ಥೆಯಾಗಿರುವುದು.

**ದು. ಪ್ರ. —** ಏಕೆ? ಮಾತೃಸೇವೆಯಲ್ಲಿ ತಮ್ಮ ಸಹಾಯಕ್ಕೆಂದರೆ ತಮ್ಮ ಸೋದರನೂ, ಭಾರ್ಯಾಪುತ್ರರೂ, ಮಿಕ್ಕಪರಿವಾರವೂ ಇರಬಹುದಲ್ಲವೇ?

**ದಯಾನಾಥ —** ಎಲ್ಲರೂ ಇರುತ್ತಾರೆ ಆದರೆ ಅವರೆಲ್ಲರೂ,

ಒಂದೊಂದು ತೊಡಕುಗಳಿಗೆ ಸಿಕ್ಕಿರುವರೇ ಆಗಿರುವರು. ಅವರಲ್ಲಿ ನಮ್ಮ ಕೆಲಸಗಳನ್ನು 'ತೃಪ್ತಿಕರವಾಗಿ ನಿರ್ವಹಿಸಬಲ್ಲವರಾರಿದ್ದಾರೆಂಬುದನ್ನು ಆಲೋಚಿಸಬೇಕಲ್ಲವೆ? ಇದಕ್ಕಾಗಿ, ಇಂದಿನ ಅಗತ್ಯದ ಪಾಠವನ್ನೊಪ್ಪಿಸಲು ಹೋಗಿದ್ದ ತಮ್ಮನನ್ನು ಕರೆಯಿಸಿ ತಕ್ಕಮಟ್ಟಿಗೆ ಎಚ್ಚರಿಸಿ ಕಳಿಹಿ, ನಾನಿಲ್ಲಿಗೆ ಬರಲು ಇಷ್ಟು ಹೊತ್ತಾಯಿತು ಮನೆಯಿಂದ ಹೊರಟುದಕ್ಕೂ, ಇಲ್ಲಿಗೆ ಬಂದು ಸೇರಿದುದಕ್ಕೂ ಒಂದು ಗಂಟೆಯು ಕಾಲವೇಹಿಡಿದಿರುವುದು.

**ದು- ಪ್ರ.** — ಸಹಜ! ಸಮಸ್ತ ದೈವತಗಳಿಗೂ ಮೀರಿದುದೇ ಮಾತೃದೈವತವು. ಅದನ್ನೇ ಉಪೇಕ್ಷಿಸುವವರಿಗೆ ಮತ್ತಾವ ಧರ್ಮ, ಕರ್ಮಗಳು ಉಳಿವುವು?

**ದಯಾನಾಥ** — ಪ್ರಸಾದ! ಅವಲ್ಲವೂ ನಮ್ಮ ಆತ್ಮೀಯ ವಿಚಾರಗಳಾದುವು. ಇನ್ನು ನಮ್ಮ ಬಾಹ್ಯಪ್ರಪಂಚದಲ್ಲಿ ಅವಶ್ಯಕವಾದ ಕರ್ತವ್ಯವೊಂದು ನಮ್ಮ ತಲೆಯ ಮೇಲೆ ದೊಡ್ಡ ಹೊರೆಯಾಗಿರುವುದೆಂದು ತಿಳಿದೇ ಇರುತ್ತೀಯಷ್ಟೇ?

**ದು. ಪ್ರ.** — ಅದಾವುದು? ದೇಶಸೇವಾವೃತ್ತಿ (ಪ್ರಜಾಹಿತಾಚರಣೆ) ಯಲ್ಲವೆ?

**ದಯಾನಾಥ** — ಅಹುದು, ಅದೇ ಪ್ರಬಲವಾದ–ಅತ್ಯಂತ ಮುಖ್ಯವಾದ ಸೇವೆಯಾಗಿದೆ. ಅದರಲ್ಲಿ ನಾವು ಕೃತಾರ್ಥರಾದವಾದರೆ, ಆಗಲೀಗ ನಾವು ಸಾರ್ವಭೌಮ ಪದವನ್ನು ಹೊಂದಿದವರಿಗೂ ಹೆಚ್ಚಿನ ಧನ್ಯಾತ್ಮರಾದೇವು. ಆದರೆ, ಅಷ್ಟರ ನಮ್ಮ ಆಶೆಗೂ ದೈವಾನುಗ್ರಹವು ಸಹಕಾರಿಯಾಗಿರುವುದೋ ಇಲ್ಲವೋ ತಿಳಿಯಲು ಅಳವಲ್ಲವಾಗಿದೆ!

**ದು. ಪ್ರ.** — ಇದೇನಿದು! ಎಂದೂ ನೋಡಿ–ಕೇಳದಿದ್ದ ನಿರುತ್ಸಾಹದ ಮಾತುಗಳನ್ನು ಈಗ ಹೇಳಲು ಕಾರಣವೇನು? ಹೇಳಬಹುದಾದರೆ ಕೇಳುವ ಕುತೂಹಲವುಂಟು

(**ದಯಾನಾಥನು** ಅಂಗಿಯ ಕಿಸೆಯಲ್ಲಿದ್ದ ಸೂಚನಾಪತ್ರವನ್ನು ತೆಗೆದು ದುರ್ಗಾಪ್ರಸಾದನ ಕೈಯಲ್ಲಿತ್ತು, ಅದು ಎಲ್ಲಿತ್ತು–ಹೇಗೆ ಬಂದಿತೆಂಬುದನ್ನು ಸೂಚಿಸಿ, ಬಳಿಕ) 'ಎಚ್ಚರಿಕೆ ಪ್ರಸಾದ! ಇದರ ವಿಚಾರವು

ಅತ್ಯಂತ ಗೂಢವಾಗಿರಬೇಕು ಇದೇ ನನ್ನ ಇಂದಿನ ವ್ಯಸ್ತತೆಗೆ ಉದ್ರೇಕ ಕಾರಿಯಾಗಿ ಪರಿಣಮಿಸಿದೆ' ಎಂದನು.

**ದು. ಪ್ರ.** — (ಮಂದಹಾಸದಿಂದ) ಆರ್ಯ! ಇಷ್ಟಕ್ಕೇ ಕಳ ವಳವೇ? ಧಾರಾಳವಾಗಿ ನಿಂತು ಹೋರಾಡಲಾರದೆಯೂ ಮತ್ತು ಸ್ಪಷ್ಟ ವಾಗಿ ಹೆಸರುಗಳನ್ನು ಕಾಣಿಸಲಾರದೆಯೂ ಇರುವ ಅಂಜುಕುಳಿಗಳ ಹಾರಾ ಟಗಳು ಈಗ ಎರಡು ಮೂರು ತಿಂಗಳಿಂದಲೂ, ಅಲ್ಲಲ್ಲಿಗೆ ತೋರಿಬರುತ್ತಿರು ವುವು. ಇದೊಂದೇ ಕಡೆಯಲ್ಲಿಂದಲ್ಲ, ಇದೇ ತರದ ಕಲ್ಲಚ್ಚಿನ ವಿಕೃತಾಕ್ಷ ರದ ಖಂಡಪತ್ರಗಳು, ಪ್ರತಿಯೊಂದು ಒಕ್ಕಡ, ಚಾವಡಿ, ಸಂದಿ ಇವುಗಳ ಲ್ಲಿಯೂ, ಕಡೆಗೆ ಪಟ್ಟಣದ ಮುಖ್ಯ ಮುಖ್ಯವಾದ ಬೀದಿಗಳಲ್ಲಿರುವ ದೀಪ ಸ್ತಂಭಗಳ ಮೇಲೆಯೂ ಅಂಟಿಸಲ್ಪಟ್ಟು, ಇದಕ್ಕೆ ಮೊದಲೇ ನನಗೆ ಎಷ್ಟೋ ಸಿಕ್ಕಿವೆ ಅವೆಲ್ಲವೂ ನನ್ನ ಮನೆಯ ಹಳೆ ಕಾಗದಗಳ ಪೆಟ್ಟಿಗೆ ಯಲ್ಲಿ ಸೇರಿಹೋಗಿರುವುವು ಇಷ್ಟಾದರೂ ಅವರು ಹೇಳುವಂತೆ ಈವರೆಗೂ ಯಾವ ಅಪಘಾತದ ಸಂಗತಿಯಾದರೂ ನಡೆದಿರುವಂತೆ ಕಾಣಲಿಲ್ಲ

**ದಯಾನಾಥ** — ಇರಬಹುದು ಅವೆಲ್ಲವೂ ಸಾಮಾನ್ಯರಿಗೆ ಹೇಳ ಲ್ಪಟ್ಟ ವಿಚಾರಗಳಾಗಿರಬಹುದು. ಆದರೆ ನೋಡು! ಇದರಲ್ಲಿ ನಮ್ಮ ಅಧಿಕಾರದ 'ಜಬಾಬ್ದಾರಿ' ಉತ್ತರವಾದಿತ್ವವು ಎಲ್ಲಿಯವರೆಗೂ ಇರಬೇ ಕೆಂಬದನ್ನು ಚೆನ್ನಾಗಿ ಸ್ಫೂರ್ತಿಗೊಳಿಸುವಂತಿದೆಯಲ್ಲವೇ?

**ದು. ಪ್ರ.** — ನಿಜ! ಅಭಿಪ್ರಾಯವೇನೋ ಇದರಂತೆಯೇ ಇರ ಬಹುದಾದರೂ, ಇದನ್ನು ಸಾಮಾನ್ಯವರ್ಗಕ್ಕೆಂದು ಬರೆದುದಲ್ಲ, ಪ್ರಯತ್ನ ಪುರಸ್ಸರವಾಗಿ ಬರೆದಂತಿರುವುದು

**ದಯಾನಾಥ** — ಅಯ್ಯಾ! ನಾವು ಅಧಿಕಾರಿಗಳಾಗಿರುತ್ತೇವೆ; ನಮಗೆ ಸೇವಕರಿಗಾಗಲೀ, ಸೇವಾಕಾರ್ಯಗಳಿಗಾಗಲೀ ಯಾವ ಭಾಗದ ಲ್ಲಿಯೂ ಕೊರತೆಯಿಲ್ಲವೆಂದು ತಿಳಿದು ಕುಳಿತುಕೊಳ್ಳುವವರು ಅನೇಕರಿರ ಬಹುದು. ಆದರೆ ಅದು ಶುದ್ಧ ಮೂರ್ಖತನವು. ಅಧಿಕಾರವು ಹೆಚ್ಚಿ ದಷ್ಟೂ ನಮಗೆ ಉತ್ತರವಾದಿತ್ವವೂ ಹೆಚ್ಚುತ್ತ ಬರುವುದು. ಪ್ರಜೆಗಳ ಸುಖದುಃಖಗಳೇ ರಾಷ್ಟ್ರಪಾಲಕರ ಸುಖದುಃಖಗಳಾಗಿರುವಂತೆ, ದೇಶೀ ಯರ ಶಾಂತತೆಯೇ ದೇಶಸೇವಕರಾದ ನಮ್ಮಗಳ ಅಭ್ಯುದಯಕ್ಕೆ ಆಧಾರ

ವಾಗಿರತಕ್ಕದು ಅದನ್ನು ನಾವು ಸರ್ವಪ್ರಕಾರದಿಂದಲೂ ಭದ್ರಪಡಿಸದೆ ಬಿಟ್ಟೆವಾದರೆ, ನಮ್ಮ ಅಭ್ಯುದಯಾಕಾಂಕ್ಷೆಯೂ ಕ್ಷಣಭಂಗುರವಾದುದೇ ಸರಿ. ಘನವಂತರೆಂದು ಹೆಸರನ್ನು ಹೊತ್ತು, ನಾವು ಕೈಕೊಂಡ ಕಾರ್ಯವು ಕ್ಷುದ್ರಜನರ ಕುಹಕಗಳಿಂದ ಕೆಟ್ಟುಹೋಗುವಂತೆ ಬಿಟ್ಟುಬಿಟ್ಟರೆ, ನಮ್ಮ ಪ್ರತಿಷ್ಠಿತೆಯಾದರೂ ಹೇಗೆ ಉಳಿಯಬೇಕು ? ಪ್ರತಿಷ್ಠಿತತ್ವಹೀನರಾದ ಬಳಿಕ ನಮ್ಮಿ ಲಘುಜೀವನದಿಂದ ಫಲವಾದರೂ ಏನಿರಬಹುದು ? ಅದನ್ನು ಈಗಲೇ ಆಲೋಚಿಸಬೇಕಲ್ಲವೆ ?

**ದು. ಪ್ರ.** — ಯುಕ್ತವಾದ ಮಾತು ಆದರ ಈ ವಿಷಯವಾಗಿ ನಾವು ಹೇಗೆ ನಡೆಯಬೇಕು ? ಎಲ್ಲಿ, ಯಾವ ವೇಳೆಯಲ್ಲಿ, ಯಾರ ಮೇಲೆ ಹೇಗೆ ವರ್ತಿಸಬೇಕು ? ಇವಿಲ್ಲವೆನ್ನೂ ತಿಳಿವುದು ಬಹು ಪ್ರಯಾಸವಲ್ಲವೇ ?

**ದಯಾನಾಥ** — ನಿಜ ! ಪ್ರಯಾಸವಿಲ್ಲದೆ ಪ್ರತಿಷ್ಠೆಯಾಗಲೀ, ಪರಮಪುರುಷನ ಸಾಕ್ಷಾತ್ಕಾರ ಲಾಭವಾಗಲೀ ದೊರೆಯಬೇಕೆಂಬುದು ದುರಾಶೆಯೇ ಸರಿ ಅತ್ಯಲ್ಪವಾದ ಆಹಾರಸಾಮಗ್ರಿಗಳನ್ನು ಒದಗಿಸಿಕೊಳ್ಳ ಬೇಕಾದರೂ, ಪ್ರಯಾಸಪಟ್ಟೇ ಪಡಬೇಕು ಅಂತಹದರಲ್ಲಿ ಪ್ರಬಲವಾದ ಉತ್ತರವಾದಿತ್ವವುಳ್ಳ ಒಂದು ಅಧಿಕಾರವನ್ನೇ ಕೈಕೊಂಡ ಬಳಿಕ, ಅದರಲ್ಲಿ ಪ್ರಯಾಸವೆಂದು ಸುಮ್ಮನಿರಲಾದೀತೇ ? ಎಲ್ಲಿ, ಯಾರು, ಹೇಗೆ, ಯಾವ ವೇಳೆಯಲ್ಲಿ, ಏನು ಮಾಡುವರೆಂಬುದನ್ನು ಸರ್ವಪ್ರಯತ್ನದಿಂದಲೂ ತಿಳಿದು ಕೊಳ್ಳಬೇಕು.

**ದು. ಪ್ರ.** — ಕ್ಷಮೆಯಿರಲಿ. ತಮ್ಮಂತಹ ಸಾತ್ವಿಕಶಿರೋಮಣಿಗಳ ಮುಂದೆ ನಾನು ಕೇವಲ ಬಾಲ್ಯಬುದ್ಧಿಯಿಂದ ಹೇಳಿದ ಮಾತು ಅಯುಕ್ತ ವಾಗಿದ್ದರೂ ಕ್ಷಮಿಸಲ್ಪಡಬೇಕು ಮುಂದೆ ನಾನು ನಡೆಯಿಸಬೇಕಾದು ದೇನೆಂಬುದನ್ನು ನಿರೂಪಿಸಿದರೆ, ಅದರಂತೆ ನಡೆಯಲು ಸಿದ್ಧನಾಗಿರುವೆನು.

**ದಯಾನಾಥ** — (ದುರ್ಗಾಪ್ರಸಾದನ ಬೆನ್ನು ತಟ್ಟುತ್ತ, ಸಂತೋಷ ದಿಂದ) ದುರ್ಗಾಪ್ರಸಾದ ! ನಿಮ್ಮ ಗುರುಹಿರಿಯರೆಲ್ಲರೂ "ಪತ್ತೇದಾರಿ" ಯಲ್ಲಿ ಬಹು ನಿಪುಣರಾಗಿದ್ದವರು. ಅಂತವರ ಅಭಿಮಾನಗೌರವ ವಿಶೇಷವು ಈಗಲೂ ನಮ್ಮ ಜ್ಞಾತಿಬಂಧುವಾದ ವಿಕ್ರಮಸೇನನಲ್ಲಿ ಸ್ಫುರಿಸುತ್ತಲೇ ಇರುವುದು. ಅಂತಹನಲ್ಲಿ ಕೆಲವು ಕಾಲವಾದರೂ ಸಹಚರ್ಯೆಯಲ್ಲಿದ್ದ

ನಿನಗೆ ಕುಲದ ಗೌರವವೂ, ವಿಕ್ರಮನ ಪ್ರತಿಭಾವಿಶೇಷವೂ ಸ್ವಲ್ಪವಾದರೂ ಇಲ್ಲದೆಹೋಗಿಲ್ಲವೆಂಬುದು ನನ್ನ ನಂಬುಗೆಯಾಗಿರುವುದು ನೀನು ಬೇಕೆಂದು ಏನೂ ತಿಳಿಯದವನಂತೆ ಹೇಳಿಕೊಂಡಮಾತ್ರದಲ್ಲಿ ನಿಜವೆಂದು ತಿಳಿವುದು ನನ್ನ ಶೀಲವಲ್ಲ ಮುಖ್ಯವಾಗಿ ಆತ್ಮನಿಂದೆಯನ್ನು ಯಾರೂ ಮಾಡಿಕೊಳ್ಳಬಾರದೆಂಬ ನೀತಿಯಿದ್ದರೂ, ನಿನ್ನಂತಹರು ಮಾಡಿಕೊಳ್ಳುವುದು ಒಂದು ತರದಲ್ಲಿ ಗುಣಭೂತವಾಗಿಯೇ ಕಾಣುತ್ತದೆ

**ದು. ಪ್ರ.** — ತಾವೇ ಹೀಗೆ ಹೊಗಳಿದರೆ, ನಾನು ಹೇಳುವುದೇನು? ತಮ್ಮ ಪುತ್ರವರ್ಗದಲ್ಲಿ ನಾನೂ ಒಬ್ಬನಾಗಿರುವೆನು ಸನ್ನಿಧಾನದಲ್ಲಿ ಉಪದೇಶವನ್ನು ಹೊಂದಿ, ಅಭ್ಯುದಿತನಾಗಬೇಕೆಂಬುದೊಂದೇ ನನ್ನ ಪರಮೋದ್ದೇಶವಾಗಿರುವಲ್ಲಿ — ಹೀಗೂ ಶ್ಲಾಘನೆಗಳೇ? ದಯೆಯಿಟ್ಟು ಇಂತಹ ಕಠಿನಶಿಕ್ಷೆಗಳನ್ನು ವಿಧಿಸದೆ, ಮುಂದೆ ನಾನು ವಿನೀತಮಾರ್ಗದಲ್ಲಿಯೇ ನಡೆದು ಕೃತಾರ್ಥನಾಗುವಂತಹ ಹಿತಮಾರ್ಗದಲ್ಲಿ ನನ್ನನ್ನು ನಿಯೋಗಿಸಿ ಅನುಗ್ರಹಿಸಬೇಕು ನಾನು ಸನ್ನಿಧಾನದ ಈ ಆದೇಶವನ್ನು ತಕ್ಕಮಟ್ಟಿಗೂ ಕಾರ್ಯಕಾರಿಯಾಗಿ ಮಾಡಲು ಉದ್ಯಮಿಸುವೆನು ಇನ್ನು ನನಗೆ ಅಪ್ಪಣೆಯಾಗಲಿ

**ದಯೊನಾಥ** — ಎಚ್ಚರಿಕೆ ಈ ಸಂದರ್ಭದಲ್ಲಿ ಸ್ವಲ್ಪಮಟ್ಟಿಗೆ ಮೈಮರೆತಿದ್ದರೂ ಪ್ರಮಾದವು ತಪ್ಪುವಂತಿಲ್ಲ. ಇದರಲ್ಲಿ ನಮ್ಮಿಬ್ಬರ ಅಧಿಕಾರಗಳೂ ಬಹುಳ ಉತ್ತರವಾದಿತ್ವವನ್ನು ವಹಿಸಿ ನಿಲ್ಲಬೇಕು ತಿಳಿದಿರಲಿ, ಇನ್ನು ಹೊರಡು, ನಾನು ಮನೆಗೆ ಹೊರಡುವೆನು. ( ಹೀಗೆ ಮಾತನಾಡಿಕೊಂಡು ಇಬ್ಬರೂ ನಿಜನಿವಾಸಗಳಿಗೆ ಹೊರಟುಹೋದರು )

---

ಶ್ರೀ:

# ತೃತೀಯ ಪರಿಚ್ಛೇದ.

"ಗುಣವತ್ಯುಪಾಯನಿಲಯೇ ಸ್ಥಿತಿಹೇತೋಸ್ಸಾಧಕೇ ತ್ರಿವರ್ಗಸ್ಯ ॥
ಮದ್ಭವನ ನೀತಿವಿದ್ಯೇ ಕಾರ್ಯ್ಯಂ ಕಾರ್ಯ್ಯೇ ದ್ರುತಮುಷ್ಯೈಹಿ ॥"

(ಆಪ್ತಾಲೋಚನೆ)

ವಿಕ್ರಮಸೇನನು ಕಲ್ಯಾಣನಗರಿಗೆ ಸೇರಿದ ಒಂದು ಹಳ್ಳಿಯಲ್ಲಿ ವಾಸವಾಗಿದ್ದನು. ಈತನ ಆವಾಸಭವನವು ಹಳ್ಳಿಯ ಮಧ್ಯಭಾಗದಲ್ಲಿದ್ದು, ಕಮಲದ ಕರ್ಣಿಕೆಯಂತೆ ಸುತ್ತುಮುತ್ತಲ ಮನೆಗಳನ್ನೂ ರಂಜನಗೊಳಿಸುವಂತೆ ಬಗೆಗೊಳ್ಳುತ್ತಿರುವುದು.

ವಿಕ್ರಮಸೇನನು ಒಬ್ಬ ಸುಪ್ರಸಿದ್ಧನಾದ ಶ್ರೀಮಂತನು ಇವನಿಗೆ ವಿಪುಲವಾದ ಭೂಸ್ಥಿತಿ ಮೊದಲಾದುವಿದ್ದುವು. ಈತನು ವಿದ್ಯಾ, ಬುದ್ಧಿ, ವಿವೇಚನಾದಿಗಳೆಲ್ಲದರಲ್ಲಿಯೂ ನಿಸ್ಸೀಮ ಪಾಂಡಿತ್ಯವನ್ನು ಹೊಂದಿದವನು. ಈತನ ಬುದ್ಧಿಸಂಪನ್ನತೆಗೆ ಸುಪ್ರೀತರಾದ ಸರಕಾರದವರು ಈತನಿಗೆ ತಕ್ಕಂತಹ ಉದ್ಯೋಗವನ್ನೀ ಕೊಡುವೆವೆಂದು ಎಷ್ಟೋಬಾರಿ ಹೇಳಿದರೂ, ಇವನು ಸರಕಾರದವರ ಕಡೆಯಿಂದ ಬರುವ ಹಿಡಿಕೂಳಿಗೆ ಅಡಿಯಾಳಾಗಿ ತನ್ನ ಅಮೋಘವಾದ ಸ್ವಾತಂತ್ರ್ಯನಿಧಿಯನ್ನು ಕಳೆದುಕೊಳ್ಳಲಾರೆನೆಂದು ಮುಕ್ತಕಂಠನಾಗಿ ಹೇಳಿದುದೂ ಅಲ್ಲದೆ, ದೇಶಸೇವೆಗಾಗಿ ತಾನು ಮಾಡಬೇಕಾದ ಕಾರ್ಯದಲ್ಲಿ ಎಷ್ಟೂ ಹಿಂಜರಿಯುವನಲ್ಲವೆಂದೂ ಯಾವುದೇ ಕಠಿನಪ್ರಸಂಗದ ವೇಳೆಯೇ ಆಗಲಿ, ತಿಳಿಸಿದರೆ—ತಕ್ಕಷ್ಟು ಪ್ರಯತ್ನಪಟ್ಟು ಕ್ರಮಪಡಿಸಲು ಎಂತಹ ಸಾಹಸವನ್ನಾದರೂ ಮಾಡುವೆನೆಂದೂ, ಸರಕಾರದ ಅಧಿಕಾರವನ್ನು ನಿರಾಕರಿಸಿದೆನೆಂದು ಸರಕಾರದವರೇನೂ ಅಸಮಾಧಾನಗೊಳ್ಳಕೂಡದೆಂದೂ ಹೇಳಿ, ಈ ಹಳ್ಳಿಯಲ್ಲಿಯೇ ಸ್ವತಂತ್ರವಾದ ಶಾಲೆಯನ್ನು ನಿರ್ಮಿಸಿದ್ದನಲ್ಲದೆ ಬಾಲಸುಶಿಕ್ಷಣೆಯಲ್ಲಿಯೂ, ಪ್ರೌಢವಿದ್ಯಾರ್ಥಿಗಳ ಜ್ಞಾನಪ್ರಸಾರಕ ಕಾರ್ಯದಲ್ಲಿಯೂ ನಿರತನಾಗಿ ಸರ್ವ ಪ್ರಕಾರದಿಂದಲೂ ತನ್ನ ಸ್ವಾತಂತ್ರ್ಯರಕ್ಷಣೆಯಲ್ಲಿಯೇ ಇದ್ದನು. ಈತನ ಸಹಚಾರಿಣಿಯೂ ಸತಿಯೂ ಆದ ಭಾರ್ಯೆಯೊಬ್ಬಳಲ್ಲದೆ ಮತ್ತಾರೂ ಆತ್ಮೀಯ

ರಿರಲಿಲ್ಲ. ಆದರೂ ಆಶ್ರಿತರೂ, ಅನಾಥ ಬಾಲಕರೂ, ಅಂಗಹೀನರೂ ಮೊದಲಾದವರು ಮನೆಯ ತುಂಬ ತುಂಬಿದ್ದರು.

ವಿಕ್ರಮಸೇನನು ರಾತ್ರಿ ಭೋಜನಾನಂತರದಲ್ಲಿ ಬರವಣಿಗೆಯ ಕಿರುಮನೆಯಲ್ಲಿ ಕುಳಿತು, ಪತ್ನಿಯೊಡನೆ ವಿನೋದವಾಗಿ ಮಾತನಾಡುತ್ತ ತಾಂಬೂಲಚರ್ವಣಮಾಡುತ್ತಿದ್ದನು ಪತ್ನಿಯಾದ ಭವಾನೀದೇವಿಯೂ ಪತಿಯ ಬಳಿಯಲ್ಲಿ ಕುಳಿತು, ಮೃದುಮಧುರವಾದ ಭಾಷಣಗಳಿಂದ ಪತಿಯ ಮನಸ್ಸಿಗೆ ನಲಿವೇರಿಸುತ್ತ ತಾಂಬೂಲವನ್ನೊಪ್ಪಿಸುತ್ತಿದ್ದಳು. ಭವಾನೀದೇವಿಯೆಂದರೆ ಸಾಮಾನ್ಯ ಸ್ತ್ರೀಯಾಗಿರಲಿಲ್ಲ. ಪತಿಗೆ ಎಲ್ಲಾ ವಿಷಯದಲ್ಲಿಯೂ ಸರಸ್ವತಿಯಾದ ಸತಿಯಾಗಿದ್ದಳು ಪತಿಯು ಎಂತಹ ಕ್ಲಿಷ್ಟಸಮಸ್ಯೆಯಲ್ಲಿದ್ದರೂ ಆ ವೇಳೆಯಲ್ಲಿ ಆತನನ್ನು ಯುಕ್ತಿಪ್ರಯುಕ್ತಿಗಳಿಂದ ಸುಲಭವಾಗಿ ಕೃತಕಾರ್ಯನಾಗುವಂತೆ ಮಾಡಬಲ್ಲ ಅಂತಸ್ಸತ್ವಸ್ವರೂಪಿಣಿಯಾಗಿದ್ದಳು. ಮುಖ್ಯವಾಗಿ ಪತಿಯ ಮನೋನುಕೂಲೆಯೂ, ಛಾಯಾನುವರ್ತಿನಿಯೂ ಆದ ಸತಿಯೆನ್ನಿಸಬೇಕಾದವರು, ಇವಳನ್ನೇ ಆದರ್ಶರಮಣಿಯನ್ನಾಗಿಟ್ಟುಕೊಂಡು, ತಮ್ಮ ಸದ್ವರ್ತನಗಳನ್ನು ಊರ್ಜಿತಸ್ಥಿತಿಗೆ ತಂದುಕೊಂಡರೆ ಅವರು ಮತ್ತೇನೂ ಮಾಡಬೇಕಾದುದಿಲ್ಲ

ಭವಾನೀ ವಿಕ್ರಮರ ಸರಸಪ್ರಸಂಗದ ಮಧ್ಯದಲ್ಲಿಯೇ ಕಿರುಮನೆಗೆ ನಮ್ಮ ಪೂರ್ವಪರಿಚಿತನಾದ ದುರ್ಗಾಪ್ರಸಾದನು ಪ್ರವೇಶಿಸಿದನು. ಈತನ ಯದೃಚ್ಛಾಗಮನದಿಂದ ಭವಾನೀದೇವಿಯು ವಿಸ್ಮಿತೆಯಾಗಿ ಎದ್ದು ಸರಿದು ನಿಂತು,—'ಓಹೋ! ಏನಿದು! ಅಪೂರ್ವಲಾಭ,' ಎಂದು ಹೇಳಿದಳು.

**ದು. ಪ್ರ. —** (ಸಲುಗೆಯಿಂದ ನಗುತ್ತ ಬಂದು ಅಣ್ಣನ ಬಳಿಯಲ್ಲಿ ಕುಳಿತು, ಅತ್ತಿಗೆಯನ್ನು ಕುರಿತು)—'ಅತ್ತಿಗೆ! ಅಣ್ಣನ ಬಳಿಗೆ ತಮ್ಮನು ಬರುವುದೂ ಅಪೂರ್ವವೇನು? ನಾನು ಇಲ್ಲಿಗೆ ಎಷ್ಟು ಬಾರಿ ಬಂದಿಲ್ಲ! ಎಷ್ಟು ದಿನಗಳು ಇಲ್ಲಿಯೇ ಇರಲಿಲ್ಲ? ಒಂದೊಂದು ದಿನಕ್ಕೆ ಮೂರು ಸಲದಂತೆಯೂ ಎಷ್ಟೋ ದಿನ ಬಂದಿಲ್ಲವೇನು? ಹೇಳು ನೋಡುವ'

**ಭವಾನಿ —** ಅದಕ್ಕಲ್ಲ ಹೇಳಿದುದು; ಬಹು ಕಾಲದಮೇಲೆ ಇಂದು, ಈಗ, ಇಷ್ಟುಹೊತ್ತಿನಲ್ಲಿ. ಛಾಯೆಯನ್ನೂ ಬಿಟ್ಟು ಬಂದಿರುವುದಕ್ಕಾಗಿ ಹೇಳಿದ ಮಾತು.'

**ದು. ಪ್ರ.** — ಹಾಗೋ, ಸರಿಸರಿ! ಛಾಯೆಯೆಂದು ಹೇಳಬಹುದಾದರೂ, ಯಾವ ರಾಜಕಾರ್ಯಪ್ರಸಕ್ತಿಯಲ್ಲಿರುವಾಗಲೂ ಅವಳು ಬಳಿಯಲ್ಲಿಯೇ ಇರಬೇಕೇನು? ಅಂತಹ ಕಠಿನ ಪ್ರಸಂಗದಲ್ಲಿ ಹೆಂಗುಸರನ್ನು ಜತೆಗೊಂಡೇನಾದರೂ ಬರಬಹುದೇ?

**ಭವಾನಿ** — (ಒಂದುಬಾರಿ ಪತಿಯ ಕಡೆಗೆ ಮೃದುಹಾಸವನ್ನು ಬೀರಿ) 'ಕೇಳಲಿಲ್ಲವೇ, ತಮ್ಮಂದಿರ ಮಾತನ್ನು?'

**ವಿಕ್ರಮ** — (ನಸುನಕ್ಕು —) 'ಕೇಳಿದೆ. ಸರಿಯಾಗಿಯೇ ಇರುವುದು.'

**ದು. ಪ್ರ.**— ಅತ್ತಿಗೆ, ನಿನ್ನ ಅಭಿಪ್ರಾಯವೇನು?

**ಭವಾನಿ** — ನನ್ನ ಅಭಿಪ್ರಾಯವೇನು? ಪತಿಯು ಅಂತಶ್ಶಕ್ತಿಸ್ವರೂಪಿಣಿಯೇ ಸ ಯೆಂದೂ, ಯಾವುದೇ ಕೆಲಸಕ್ಕಾಗಲಿ, ಸತಿಯು ಸಹಾನುಭೂತಿಯಿಂದಲೇ ಸಂಕಲ್ಪಸಿದ್ಧಿಯಾಗಬೇಕೆಂದೂ, ಪತಿಯ ಛಾಯಾನುವರ್ತಿನಿಯಾಗಿ ನಡೆಯುತ್ತಿರಬೇಕಾದುದೇ ಸತಿಯ ಮುಖ್ಯ ಕರ್ತವ್ಯವೆಂದೂ ನನ್ನ ಭಾವನೆ!

**ದು. ಪ್ರ.** — ಹಾಗಾದರೆ "ಪತಿಯ ಗತಿಯನ್ನೇ ಅನುಸರಿಸುವೆನೆಂದು, ಪತಿಯು ದುರಾಚಾರವೆಂಬ ರೋಗಕ್ಕೆ ಗುರಿಯಾಗಿದ್ದರೆ, ಸತಿಯೂ ಅದೇ ರೋಗಕ್ಕೆ ಪಕ್ಕಾಗಬೇಕಲ್ಲವೆ?" ಎಂಬೀ ಪ್ರಶ್ನೆಯುಂಟಾದರೆ ಉತ್ತರವೇನು?

**ಭವಾನಿ** — 'ಇಂದೇನೋ ಹೊಸಪರಿಯಾಗಿದೆ, ಆಗಲಿ. ಪತಿಯ ಗತಿಯನ್ನು ಅನುಸರಿಸುವುದೆಂದರೆ, ಆತನ ಪರಮಪುರುಷಾರ್ಥ—ಸಾಧನೆಗೆ ಸಹಚಾರಿಣಿಯಾಗಿರಬೇಕೆಂದಲ್ಲದೆ, ಪತಿಯ ದುರಾಚಾರವನ್ನು ಅನುಮೋದಿಸುವುದೆಂದಲ್ಲ. ಆತನಲ್ಲಿ ಆಗ್ರಹ, ಅಸಮಾಧಾನ, ಅಪಮಾನ, ಸಂಶಯ, ವಿರಕ್ತಿ ಮೊದಲಾದ ದುರ್ಗುಣಗಳನ್ನು ತೋರಿಸದೆ, ಸರ್ವಪ್ರಕಾರದಿಂದಲೂ ಆತನಲ್ಲಿ ದೃಢಭರವಸೆ, ಅಕೃತ್ರಿಮ ಪ್ರೇಮಗಳನ್ನು ಸ್ಥಿರೀಕರಿಸಿ, ಆತನ ಕಾರ್ಯಕಲಾಪಗಳಿಗೆ ಬಾಹುಬಲ ಮನೋವೇಗಗಳಂತೆ ಸಹಾಯಮಾಡುತ್ತಿರುವುದೇ ಸತಿಯ ನೈಜಕರ್ತವ್ಯವೆಂದು ನಾನು ತಿಳಿದಿರುವೆನು. ಒಂದುವೇಳೆ ಪತಿಯು ದುರಾಚಾರದಲ್ಲಿ ಬಿದ್ದು ಕೆಟ್ಟು ಹೋಗುತ್ತಿದ್ದರೆ ಸಮ

ಯೋಚಿತವಾದ ಸೇವೆಯಿಂದ ಅವನ ಮನಸ್ಸನ್ನು ತನ್ನ ಕಡೆಗೆ ಒಲಿಸಿಕೊಂಡು, ಅವನನ್ನು ನಯವಿನಯಗಳಿಂದಲೇ ಸನ್ಮಾರ್ಗಕ್ಕೆ ತಿರುಗುವಂತೆ ಸುಧಾರಿಸುವುದು. ಅಂತಶ್ಶಕ್ತಿಸ್ವರೂಪಿಣಿಯಾದ ಸತಿಯ ಮುಖ್ಯ ಧರ್ಮವೆನ್ನಿಸುವದು ಇನ್ನಿದರಮೇಲೆಯೂ ಹೇಳಬೇಕೆ?

**ದು. ಪ್ರ. —** ಅತ್ತಿಗೆ! ಎಲ್ಲರೂ ನಿನ್ನಂತೆಯೇ ಇರುತ್ತಾರೆಂದು ತಿಳಿದೆಯಾ? ನಿನ್ನ ತಂಗಿ ಇಷ್ಟು ಪ್ರತಿಭಾಸಂಪನ್ನೆಯಾಗಲೀ, ಧೈರ್ಯ, ಸಾಹಸ, ಔದಾರ್ಯ, ಗಾಂಭೀರ್ಯ, ವಿನಯ, ವಿತರಣಾದಿ ಗುಣಗಳುಳ್ಳವಳಾಗಲೀ ಆಗಿಲ್ಲವೆಂಬುದು ನಿನಗೂ ಚೆನ್ನಾಗಿ ತಿಳಿದಿದೆ. ಹೆಚ್ಚೇಕೆ? ನೂರುಮಂದಿ ಹೆಂಗುಸರಲ್ಲಿ ನಿನ್ನಂತೆ ಪತಿಯ ಛಾಯೆಯಂತಿರುವವರು, ಒಬ್ಬರಾದರೂ ಇರುವರೋ ಇಲ್ಲವೋ ಎಂದು ಸಂದೇಹವಾಗಿರುವುದು. ಹೆಚ್ಚು ಹೇಳುವದೇನು ನಮ್ಮ ದೊಡ್ಡಪ್ಪನ ಮನೆತನದ ಗೌರವಕ್ಕೂ ನಮ್ಮ ಅಣ್ಣನ ವಿದ್ಯಾ, ವಿನಯ, ವಿತರಣ ಮೊದಲಾದ ಸುಗುಣಜಾಲಕ್ಕೂ, ಕಾಂತಿಯನ್ನುಂಟು ಮಾಡುತ್ತಿರುವ ಮಾನಿನೀ ಪ್ರಜ್ಞಾವಿಶೇಷವು ನಮ್ಮೆಲ್ಲರಿಗೂ ಸಂತೋಷವನ್ನುಂಟುಮಾಡುವುದು.

**ಭವಾನಿ —** (ಪತಿಯನ್ನು ನೋಡಿ)—'ಕೇಳಲಿಲ್ಲವೇ ಇಂದೇನೋ ಒಂದು ಹೊಸತಾದ ಪಾಠವನ್ನು ಕಲ್ತು ಬಂದಂತಿರುವುದು.'

**ವಿಕ್ರಮ —** ನಸುನಕ್ಕು—'ಆಗಲಿ, ಕುಂದೇನು? ನಮ್ಮ ಪ್ರಸಾದನನ್ನು ಯಾವ ವಿಷಯದಲ್ಲಿ ಕಳೆದುಹಾಕಬಹುದು? ಸ್ವಭಾವತಃ ಇವನು ವಿವೇಚನಾಪರನು, ಸಾಲದುದಕ್ಕೆ 'ಪೋಲೀಸು ಸುಪರಿಂಟೆಂಡೆಂಟ ಅಧಿಕಾರದ ಭಾರವನ್ನೂ ವಹಿಸಿ, ಮತ್ತಷ್ಟು ನಿಪುಣನಾಗಿರುವನು. ಇಂತಹನು ಕಾಲಕ್ಕೆ ತಕ್ಕಂತೆ ಕ್ರಿಯೆಗಳನ್ನು ನಡೆಯಿಸುವುದರಲ್ಲಿಯೂ, ಕೈಕೊಂಡ ಕಾರ್ಯವನ್ನು ತೃಪ್ತಿಕರವಾಗಿ ಮಾಡುವುದರಲ್ಲಿಯೂ, ಅವಶ್ಯಕವಾಗಿ ಬೇಕಾಗಿರುವ ಸುಧಾರಣೆಗಳನ್ನು ಆಚರಣೆಗೆ ತರುವ ಭಾಗದಲ್ಲಿಯೂ ಇವನು ಅಗ್ರಣಿಯೇ ಆಗಿರುವನು. ಇಂತಹ ರಸಿಕಾಗ್ರೇಸರನಾದ ಮೈದುನನು ತನ್ನ ಅತ್ತಿಗೆಗೆ ಹೊಸತಾದ ಮರ್ಯಾದೆಯೊಂದನ್ನು ಕಲ್ಪಿಸುವುದರಲ್ಲಿ ಆಶ್ಚರ್ಯವೇನಿರುವುದು? ಅಲ್ಲವೇ ಪ್ರಸಾದ?'

**ದು. ಪ್ರ.** — ಇದೀಗ ಮುಯ್ಯಿಗೆ ಮುಯ್ಯಿ! ಅಣ್ಣ ಸರ್ಕಾರಿ ಕೆಲಸದಲ್ಲಿ ಸೇರಿದೆನೆಂದೇನಾದರೂ ಹಾಸ್ಯಮಾಡುತ್ತಿರುವಿಯೇನು?

**ವಿಕ್ರಮ.** — ಪ್ರಸಾದ! ನೀನು ಸಂತೋಷದಿಂದ ನಿಮ್ಮ ಅಣ್ಣನನ್ನೂ ಅತ್ತಿಗೆಯನ್ನೂ ವಿಶೇಷವಾಗಿ ಹೊಗಳಿದೆ. ನಾನು ನನ್ನ ತಮ್ಮನನ್ನು ಒಂದೆರಡು ಮಾತಿನಿಂದ ಹೊಗಳಲಿಕ್ಕೂ ಅಧಿಕಾರವಿಲ್ಲವೇನು? ಇಲ್ಲವಾದರ ಬೇಡ, ಹೋಗಲಿ. ಸರ್ಕಾರಿ ಕೆಲಸಕ್ಕೆ ನೀನು ಸೇರಬೇಡವೆಂದು ನಾನೇನಾದರೂ ಹೇಳಿದ್ದೆನೆ? ಹೇಳದಿದ್ದಬಳಿಕ ಈಗ ಆಕ್ಷೇಪಿಸುವುದೇಕೆ? ಪ್ರತಿಯೊಬ್ಬರೂ ಸರಕಾರದವರ ಕೂಲಿಕೆಲಸ ಮಾಡುವುದಿಲ್ಲವೆಂದು ಹೇಳಿಬಿಡುವ ಪಕ್ಷದಲ್ಲಿ ರಾಜ್ಯಕಾರ್ಯಗಳಾಗಲೀ, ಪ್ರಜಾಕ್ಷೇಮವಾಗಲೀ ಹೇಗೆ ತೃಪ್ತಿಕರವಾಗಿರುವುದು? ಅದಿರಲಿ. ಈಗ ನೀನು ಬಂದಿರುವ **ಕೆಲಸವೇನು?**

**ಭವಾನಿ**— ಬಂದವರ ಊಟ ಉಪಚಾರದ ಮಾತನ್ನು ಮೂಲೆಗೊತ್ತರಿಸಿ, ಬಂದುದೇಕೆಂದೇ ಕೇಳುವುದೇ?

**ವಿಕ್ರಮ**—(ತಮ್ಮನ ಮುಖವನ್ನು ನೋಡಿ ನಗುತ್ತ) 'ಮನೆಗೆ ಬಂದವರನ್ನು ಆದರಿಸಿ, ಉಪಚರಿಸುವ ಕೆಲಸವು ಮನೆಯ ಒಡತಿಯದಾಗಿರುವುದು. ನನ್ನದಲ್ಲದ ಕೆಲಸದಲ್ಲಿ ನಾನು ಹೇಗೆ ಪ್ರವರ್ತಿಸಬಹುದು?

**ದು.ಪ್ರ.**—ನಿಜ! ನಿಜ!! ಅದೆಲ್ಲವೂ ಗೃಹರಾಜ್ಯಾಧಿಕಾರಿಣಿಯ ಕರ್ತವ್ಯವು. ಆದರೆ ನನಗೀಗ ಏನೂ ಹೆಚ್ಚಿಗೆ ಹೇಳಬೇಕಾಗಿಲ್ಲ. ಐಮವಾಗ ಊಟಮಾಡಿಯೇ ಬಂದಿರುತ್ತೇನೆ.

**ಭವಾನಿ**— 'ಸರಿ, ಆದರೂ ಅತ್ತಿಗೆಯನ್ನು ಹೊಗಳಿದುದಕ್ಕೆ ಪ್ರತಿಫಲವಾಗಿ ಇದನ್ನಾದರೂ ತೆಗೆದುಕೊಳ್ಳಬೇಕಾಗಿದೆ' (ಎಂದು ಹೇಳುತ್ತ ಹಾಲು-ಹಣ್ಣುಗಳನ್ನು ತಂದು ಮುಂದಿಟ್ಟು, ತಟ್ಟೆಯಲ್ಲಿ ತಾಂಬೂಲವನ್ನೂ ಸಿದ್ಧ ಪಡಿಸಿಟ್ಟಳು.)

**ದು.ಪ್ರ.**—'ಓಹೋ! ಅಷ್ಟರ ಶ್ರಮಕ್ಕೆ ಈ ಶಿಕ್ಷೆಯು ವಿಹಿತವೇ ಸರಿ, ಆಗಲಿ. ತಾಯಿ, ತನ್ನ ಮಕ್ಕಳಿಗೆ ಒಲಿದಿತ್ತ ಆಹಾರವನ್ನು ಯಾವ ಮಗನು ಬೇಡವೆಂದಾನು?' ಎಂದು ಹೇಳಿ ಹಣ್ಣನ್ನು ತಿಂದು, ಹಾಲನ್ನು ಕುಡಿದು, ತಾಂಬೂಲವನ್ನು ಕೈಕೊಂಡನು.

**ಭವಾನಿ:**—'ನನ್ನ ಕರ್ತವ್ಯವನ್ನು ನಾನು ಮಾಡಿದಂತಾಯಿತು; ಇನ್ನು ನಿಮ್ಮ ನಿಮ್ಮ ಮಾತಿಗೆ ಪ್ರಾರಂಭವಾಗಲಿ, ನಾನು ಹೋಗುವೆನು.' ಎಂದು ಹೊರಟುಹೋದಳು.

**ವಿಕ್ರಮ:**— ಪ್ರಸಾದ! ನಿನ್ನ ಮುಖಭಾವವೂ, ನೀನು ಬಂದಿರತಕ್ಕ ವೇಳೆಯೂ ಯಾವುದೋ ಒಂದು ಮಹಾಕಾರ್ಯ ವಿಚಾರವು ನಿನ್ನ ಮನಸ್ಸನ್ನು ಆವರಿಸಿರುವಂತೆ ಸೂಚಿಸುತ್ತಿದೆ. ಅಂತಹ ವಿಶೇಷವೇನಾದರೂ ಉಂಟೇನು?

**ದು. ಪ್ರ:**— ಅಣ್ಣ! ನಿನ್ನ ಊಹೆ ಸುಳ್ಳಾಗುವುದೂ ಉಂಟೇನು? ವಿಶೇಷವಿದ್ದೇ ಇರುವದು ಅದರ ಅಗತ್ಯದಿಂದಲೇ ಇಷ್ಟು ಹೊತ್ತಿನಲ್ಲಿ ಬರಬೇಕಾದುದು

**ವಿಕ್ರಮ:**— ಹಾಗಾದರೆ, ಅದೇನು ಸಮಾಚಾರ?

**ದು. ಪ್ರ.**— 'ಇದನ್ನು ಮೊದಲುನೋಡು' (ಎಂದು ದಯಾನಾಥನಿಂದ ತನಗೆ ಕೊಡಲ್ಪಟ್ಟ ಸೂಚನಾ ಪತ್ರವನ್ನು ವಿಕ್ರಮಸೇನನ ಕೈಯಲ್ಲಿತ್ತು, ಉತ್ತರನಿರೀಕ್ಷಣೆಯಲ್ಲಿ ಕುಳಿತನು.)

(ವಿಕ್ರಮನು ಪತ್ರವನ್ನು ಕೈಕೊಂಡು, ಹಿಂದೆ ಮುಂದೆ ನಾಲ್ಕು ಕಡೆಯಲ್ಲಿಯೂ ಚೆನ್ನಾಗಿ ನೋಡಿ, ಕಾಗದವನ್ನು ಮೂಸಿಮೂಸಿ ವಾಸನೆಯನ್ನೂ ಗ್ರಹಿಸಿ, ಬರೆವಣಿಗೆಯ ಬಗೆಯನ್ನೂ ಪರೀಕ್ಷಿಸಿ ಬಳಿಕ ದುರ್ಗಾಪ್ರಸಾದನನ್ನು ಕುರಿತು) ಪ್ರಸಾದ! ನೀನು ನಿನ್ನಿನ ದಿನವೇ ಬಂದು ಕೆಲಸದ ಮೇಲೆ ಸಿದ್ಧನಾದೆಯಲ್ಲವೆ?'

**ದು. ಪ್ರ:**— ಅಹುದು; ಹೇಗೆ ಊಹಿಸಿದೆ?

**ವಿಕ್ರಮ:**— ಊಹಿಸಲು ಕಾರಣವಿದೆ. ಇರಲಿ, ಈ ಕಾಗದವು ಈ ದಿನವೇ ನಿಮ್ಮ ದೃಷ್ಟಿಗೆ ಬಿದ್ದಿತಲ್ಲವೆ?

**ದು. ಪ್ರ:**— ಅಹುದು.

**ವಿಕ್ರಮ:**— ನೀನು ಇನ್ನೂ ಕೆಲವು ದಿನಗಳ ವಿರಾಮವನ್ನೇನಾದರೂ ಕೋರಿದ್ದೆಯೋ?

**ದು. ಪ್ರ:**— ಎರಡು ವಾರಗಳ ಅವಧಿಯನ್ನು ಕೋರಿದ್ದೆನು.

**ವಿಕ್ರಮ:**— ನಿನಗೆ ರಜಾ ಅಪ್ಪಣೆಯಾಗಿದ್ದಿತೋ ಇಲ್ಲವೋ?

**ದು. ಪ್ರ:**— ಅಷ್ಟು ಅವಶ್ಯಕತೆಯಾಗಿದ್ದ ಪಕ್ಷದಲ್ಲಿ ಉಪಯೋಗಿಸಿ

ಕೊಳ್ಳಬಹುದೆಂಬ ನಿರೂಪವು ಬಂದಿದ್ದಿತು. ಆದರೂ ನನಗೆ ಅಷ್ಟರಲ್ಲಿ ರಜಾ ಸರಿಬೀಳಲಿಲ್ಲವಾದುದರಿಂದ ಹೊರಟುಬಂದು ಕೆಲಸದಮೇಲೆ ಸಿದ್ಧನಾದೆನು.

**ವಿಕ್ರಮ:**— ಸರಿಯೆ, ಈ ಪತ್ರವು ಮೊದಲು ದಯಾನಾಥರಾಕೂರರಿಗೇ ಗೋಚರವಾಗಿರಬೇಕು ?

**ದು. ಪ್ರ:**— (ವಿಸ್ಮಿತನಾಗಿ) 'ಎಲ್ಲವೂ ನಿಜ. ಆದರೆ ಇದೆಲ್ಲವನ್ನೂ ಹೇಳಿದವರಾರು ? ಹೇಗೆ ತಿಳಿಯಿತು ?'

**ವಿಕ್ರಮ:**— (ನಕ್ಕು) 'ಏಕೆ ವಿಸ್ಮಿತನಾಗುವೆ ? ಪ್ರಸಾದ ! ಊಹಾ ಶಕ್ತಿ ನಮ್ಮ ಮನೆತನಕ್ಕೇ ಬಂದುದಲ್ಲವೇ ? ಇವೆಲ್ಲವೂ ಮನೋಯೋಗದ ಫಲವಲ್ಲವೆ ? ಭಾವನಾಶಕ್ತಿಗೆ ಒಳಪಡದ ವಿಚಾರವುಂಟೇ ? '

**ದು. ಪ್ರ:**— ನಿಜ ! ಎಲ್ಲವೂ ಭಾವನಾಶಕ್ತಿಗೆ ಒಳಪಡತಕ್ಕವುಗಳೇ ಸರಿ. ಆದರೆ, ಅಷ್ಟು ದೂರದ ಬುದ್ಧಿಕುಶಲತೆಯೂ, ದೃಢಸಂಕಲ್ಪವೂ, ಸಾಧನ ಸಂಪತ್ತಿಯೂ ಉಳ್ಳವರಿಗೆ ಅವಾತು ? ಅದು ಹೇಗೆ ತಿಳಿಯಿತೆಂದು ನನಗೂ ಹೇಳಲು ಅಡ್ಡಿಯಿಲ್ಲವಷ್ಟೆ ?

**ವಿಕ್ರಮ:**— ಎಂತಹ ಮಹತ್ವದ ಸಂಗತಿಯನ್ನಾಗಲೀ ನಿನ್ನಲ್ಲಿ ಬೈತಿಡುವುಧು ನನ್ನ ಶೀಲವಾಗಿಲ್ಲ ಹೇಳುವೆನು, ಸಾವಧಾನದಿಂದ ಕೇಳು. (ಎಂದು ಏನನ್ನೋ ಕೇಳಲಾರಂಭಿಸಿದ್ದವನು, ಅಷ್ಟರಲ್ಲಿಯೇ ನಿಲ್ಲಿಸಿ, ಧಿಗ್ಗನೆದ್ದು ಮಾತಿಲ್ಲದೆ ಹೊರಗೆ ಹೊರಟುಹೋದನು. ದುರ್ಗಾಪ್ರಸಾದನು ವಿಕ್ರಮನು ಎದ್ದು ಹೋದ ಕಾರಣವನ್ನು ತಿಳಿಯದೆ, ಭ್ರಾಂತನಂತೆ ವಿಚಾರಮಗ್ನನಾಗಿ ಕುಳಿತನು. ಕೆಲವು ನಿಮೇಷಗಳು ಕಳೆದ ಬಳಿಕ ವಿಕ್ರಮಸೇನನು ಮರಳಿಬಂದು ತಮ್ಮನ ಮುಂದೆ ಕುಳಿತು, ಆತನ ಕೈಹಿಡಿದು ನಸುನಗುತ್ತ–'ಪ್ರಸಾದ ! ಏಕೆ ಜಡನಂತಾಗಿದ್ದೆ ?'

**ದು. ಪ್ರ:**— (ತಗ್ಗಿಸಿಕೊಂಡಿದ್ದ ತನ್ನ ತಲೆಯನ್ನು ಮೇಲಕ್ಕೆತ್ತಿ) 'ಇದೇನು ಅಣ್ಣಾ ! ಮಾತಿಲ್ಲದೆ ಎಲ್ಲಿಗೆ ಎದ್ದು ಹೋಗಿದ್ದೆ ?'

**ವಿಕ್ರಮ:**— ಹೊರಗೆ ಒಬ್ಬರನ್ನು ನೋಡಿಬರಲು ಹೋಗಿದ್ದೆನು. ಅದಿರಲಿ, ನೀನು ಇಲ್ಲಿಗೆ ಬರುವ ವಿಷಯವನ್ನು ನಿನ್ನ ಪತ್ನಿಗೆ ಹೇಳಿ ಬಂದೆಯೋ ?

**ದು. ಪ್ರ:—** ಊಟವಾದ ಬಳಿಕ ತಾಂಬೂಲವನ್ನೊಪ್ಪಿಸಲು ಬಂದಿದ್ದಾಗ ಅವಳಲ್ಲಿ—'ರಾತ್ರಿ ಹೊರಗೆ ಸ್ವಲ್ಪ ದೂರ ಹೋಗಿ ಬರಬೇಕಾದ ಅವಶ್ಯಕವಿದೆ. ಮರಳಿ ಬರಲಿಕ್ಕಾದೀತೋ ಇಲ್ಲವೋ ತಿಳಿಯದು. ಮನೆಯ ಕಡೆ ಎಚ್ಚರಿಕೆಯಿಂದಿರು.' ಎಂದು ಮಾತ್ರ ಹೇಳಿ ಬಂದೆನು. ಏಕೆ!

**ವಿಕ್ರಮು:—** ಬೇಕು. ನೀನು ವಾಹನವೇನನ್ನೂ ತರದೆ, ಕಾಲುನಡೆಯಿಂದಲೇ ಬಂದೆಯಲ್ಲವೆ?

**ದು. ಪ್ರ:—** ಅಹುದು, ನಿನಗಿದೆಲ್ಲವೂ ಹೇಗೆ ತಿಳಿದಿತು?

**ವಿಕ್ರಮು:—** ಹೇಳುವೆನು. ನೀನು ದಾರಿಯಲ್ಲಿ ಒಬ್ಬನೇ ಬಂದೆಯೋ?- ಇಲ್ಲ, ಜೊತೆಯಲ್ಲಿ ಮತ್ತಾರಾದರೂ ಬಂದಿರುವರೋ?

**ದು. ಪ್ರ:—** ನಾನು ಹೊರಟ ಕೆಲಸವೂ, ಹೊತ್ತೂ ಎಂತಹದೆಂಬುದನ್ನು ತಿಳಿದೂ ಯಾರನ್ನಾದರೂ ಕರೆತರುವೆನೇನು?

**ವಿಕ್ರಮು:—** ಇರಲಿ, ದಾರಿಯಲ್ಲಿ ನಿನಗೆ ಯಾರ ಸುಳಿವೂ ತಿಳಿದು ಬರಲಿಲ್ಲವೇ?

**ದು. ಪ್ರ:—** ಇಲ್ಲ. ನಾನು ಬಹು ವೇಗವಾಗಿ ಬರುತ್ತಿದ್ದುದಲ್ಲದೆ, ನನ್ನ ಮನಸ್ಸು ಕೇವಲ ನಿನ್ನನ್ನು ನೋಡುವ ತವಕದಲ್ಲಿದ್ದುದರಿಂದ, ಮತ್ತಾವ ಗಮನವೂ ಇರಲಿಲ್ಲ. ಏಕೆ? ಏನಾದರೂ ಸಂಶಯವುಂಟಾಗಿರುವುದೇನು?

**ವಿಕ್ರಮು:—** ಸಂಶಯವಲ್ಲ, ನಿನ್ನ ಮಾರ್ಗಾಭಿಸರಣೆಗಾಗಿ ಆರೋ ಬಂದಿರುವರೆಂಬುದನ್ನು ನಿರ್ಧರವಾಗಿ ಹೇಳಬಲ್ಲೆನು ಅಲ್ಲದೆ ಈಗ ಇಲ್ಲಿ ನಮ್ಮ ಸಂಭಾಷಣೆಯನ್ನು ಹೊಂಚು ಕೇಳುತ್ತಿರುವರೆಂದರೂ ತಪ್ಪಾಗಲಾರದು.

**ದು. ಪ್ರ:—** ಹಾಗಿದ್ದರೆ ಇಲ್ಲಿ ಸಂಭಾಷಣೆಯೇ ಬೇಡ. ನಡುವಣ ಅಂಕಣದಲ್ಲಿ ಕುಳಿತು ಆಲೋಚಿಸುವ.

**ವಿಕ್ರಮು:—** ಭಯವೇಕೆ? ಪ್ರಸಾದ! ಅವರಂತೆಯೇ ನಾವೂ ಅಂಜುಕುಳಿಗಳೇನು? ನಮ್ಮ ಕರ್ತವ್ಯನಿಷ್ಠೆಯೂ ಸತ್ಯಪರಾಕ್ರಮವೂ ಅಳಿಸಿ ಹೋಗಿರುವುವೇನು? ರಾವಣನ ಮಂತ್ರಿಗಳ ಹೇಡಿತನವು ಈಗ ಬಂದಿರುವ ಸಂಚುಗಾರರಿಗಿದ್ದರೆ, ನಾವು ರಾಮಚಂದ್ರನ ಕಾರ್ಯಕ್ರಮ

ವನ್ನೇ ಅನುಕರಣ ಮಾಡಲು ತಡೆಯುಂಟೇ? ಆ ದುರ್ಗಾಮಾತೆ, ನಮ್ಮನ್ನು ಎಂದಿಗೂ ಹೇಗೂ ಮರೆಯುವವಳಾಗಿಲ್ಲವೆಂದೂ, ಅವಳ ಕೃಪಾ ಕಟಾಕ್ಷವು ನಮ್ಮನ್ನು ನಿರಂತರವೂ ಎಡೆಬಿಡದೆ ಸಂರಕ್ಷಿಸುತ್ತಿರುವುದೆಂದೂ ಚನ್ನಾಗಿ ನಂಬಿರು. ಪಾಪ! ಅಂಜುಕುಳಿಗಳು ಇನ್ನೂ ಸ್ವಲ್ಪ ಕಾಲ ಜೀವನವನ್ನು ಹೀಗೆಯೇ ನಾಗಿಸಿಕೊಳ್ಳುತ್ತಿರಲಿ! ಆವರೆಗೂ ಸುಮ್ಮನಿರು.

**ದು ಪ್ರ:**— (ಕುತೂಹಲಾಧಿಕ್ಯದಿಂದ ವಿಕ್ರಮನ ಮುಖವನ್ನೇ ನೋಡುತ್ತ) ಹೋಗಲಿ, ಅಣ್ಣಾ! ನನ್ನ ಮನಸ್ಸು ಅಧಿಕವಾಗಿ ಆತುರ ಗೊಂಡಿರುವುದು. ನಿನ್ನ ಊಹೆಗೆ ಕಾರಣವಿದೆಯೆಂದು ಹೇಳಿದೆಯಲ್ಲ? ಅದನ್ನು ವಿವರವಾಗಿ ಹೇಳುವೆಯಾ?

**ವಿಕ್ರಮ:**— ಕಾರಣವೇ? ನೀನು ಊರಲ್ಲಿದ್ದ ವೇಳೆಯಲ್ಲಿ, ಇಂತಹ ದುರ್ಗಮಸ್ಥಾನದಲ್ಲಿ, ಈ ವಿಧದ ಭಯಪ್ರದರ್ಶನಗಳಿಗೆ ಅವಕಾಶವಿರುವುದಿಲ್ಲ. ಏಕೆಂದರೆ, ಈ ಕೆಲಸವನ್ನು ಮಾಡುತ್ತಿರುವವರೆಲ್ಲರೂ ಒಳ ಗುಟ್ಟನ್ನು ತಿಳಿದ ಗುರುತು ಕಂಡ ಕಳ್ಳರೇ ಆಗಿರುವರು. ಅಂತಹರಿಗೆ ನಮ್ಮ ಕುಲದ ಗೌರವವೂ, ನಮ್ಮ ಉದ್ಯಮಶಕ್ತಿಯೂ ಹಿಂದಿನ ನಮ್ಮ ಕಾರ್ಯಗಳೂ ಹೃತ್ಕುಹರದಲ್ಲಿ ಅಡಿಗಡಿಗೂ, (ಮೂರ್ತಿಮತ್ತಾಗಿ) ಹೊಳೆದು, ನಮ್ಮ ವಿಚಾರವಾಗಿ ಭೀತಿದ್ವೇಷವನ್ನುಂಟು ಮಾಡಿರುವುದೆಂಬುದರಲ್ಲಿ ಏನೂ ಸಂಶಯವಿಲ್ಲ. ಆದುದರಿಂದಲೇ ನೀನು ಊರಲ್ಲಿಲ್ಲದ ವೇಳೆಯನ್ನೇ ನಿರೀಕ್ಷಿಸುತ್ತಿದ್ದು, ಈ ಕೆಲಸವನ್ನು ಮಾಡಿರುವರು. ಸಾಲದುದಕ್ಕೆ ನೀನು ಮತ್ತಷ್ಟು ದಿನಗಳ ವಿರಾಮವನ್ನೂ ಕೇಳಿ, ಅದಕ್ಕೆ ಸರ್ಕಾರದ ಅಸ್ತುಕಾರ ವನ್ನು ಹೊಂದಿದುದೂ, ಅಲ್ಲದೆ ಠಾಕೂರರು ಅನಿವಾರ್ಯ ಕಾರಣಗಳಿಂದ 'ಆಫೀಸಿ' ಗೆ ಬರಲಾರರೆಂಬ ಭಾವವುಂಟಾದುದೂ ಅವರ ಕಾರ್ಯಕ್ಕೆ ಸಹಕಾರ ವನ್ನುಂಟುಮಾಡಿದುವು. ಆದರೆ, ಪಾಪ! ಅವರ ನಂಬುಗೆಗೆ ಭಂಗವಾಗಿ ನೀನು ಸೂಚನೆಯನ್ನು ಕೊಡದೆಯೇ ಬಂದುಬಿಟ್ಟುದೂ, ದಯಾನಾಥರು ಇದನ್ನು ನೋಡಿಯೂ ಮತ್ತಾರೊಡನೆಯಾಗಲೀ ಪ್ರಸ್ತಾಪಿಸದೆ ನಿನ್ನ ವಶ ಕ್ಕೊಪ್ಪಿಸಿದುದೂ ಅವರ ಮನೋಭೀತಿಗೆ ಕಾರಣವಾಗಿರುವುದು. ಭೀತಿ ನಿವಾರಣೆಗಾಗಿಯೇ ಅವರು ಈಗ ನಿನ್ನ ಬೆನ್ನಟ್ಟಿ ಬಂದಿರುವರು. ಅದಿರಲಿ. ಈ ಕೆಲಸವು ನಿನ್ನ ಪ್ರತ್ಯಾಗಮನಕ್ಕೆ ಮತ್ತಷ್ಟು ದಿನಗಳ ಅವಧಿಯುಂಟಾ

ಗಿರುವುದೆಂದು ತಿಳಿದ ಬಳಿಕವೇ ನಡೆದಿರುವುದೆಂದೂ, ಅಲ್ಲದೆ ಇದರಲ್ಲಿ ಅಚ್ಚು ಮಸಿಯ ಹೊಸ ವಾಸನೆಯೂ, ತೇವವೂ ತೋರುತ್ತಿರುವುದರಿಂದ ಇದು ಅಚ್ಚಿಗೆ ಬಿದ್ದು ಎರಡು ಮೂರು ದಿನಕ್ಕೆ ಮೀರಿಲ್ಲವೆಂದೂ ಸಂದೇಹ ವಿಲ್ಲದೆ ಹೇಳಬಹುದು.

**ದು. ಪ್ರ:**—'ಇದು ಮೊದಲು ಠಾಕೂರರಿಗೇ ಗೋಚರಿಸಿರಬೇ ಕೆಂದು ಹೇಳಿದೆಯಷ್ಟೆ, ಹೇಗೆ ಊಹಿಸಿದೆ?'

**ವಿಕ್ರಮ:**— ಇದೋ ನೋಡು. ಈ ಕಾಗದದ ಕಡೆಯಲ್ಲಿ ಠಾಕೂ ರರ ನಾಮಾದ್ಯಕ್ಷರಗಳು ಇರುವುವು. ಅದು ನಿನ್ನ ಕಣ್ಣಿಗೆ ಸರಿಯಾಗಿ ಕಾಣಿ ಸಿತೋ ಇಲ್ಲವೆ ನೀನು ಅದನ್ನು ನೋಡಲೇ ಇಲ್ಲವೋ ತಿಳಿಯದು. ಇದಲ್ಲದೆ ಮತ್ತೆರಡು ಬಲವಾದ ಕಾರಣಗಳೂ ಇವೆ. ಏನೆಂದರೆ— ಈ ಕಾಗದವು ಮತ್ತಾರ ಕೈಗೆ ಸಿಕ್ಕಿದ್ದರೂ ಮಡಿಸಲ್ಪಟ್ಟು, ಅಂದಗೆಟ್ಟು ಹೋಗುತ್ತಿದ್ದಿತು. ಹಾಗಾಗದೆ ಅವರ ಕೈಗೆ ಸಿಕ್ಕಿದುದರಿಂದ, ಇದನ್ನು ಸೂಜಿಯೊಡನೆಯೇ ತೆಗೆದು ಮಡಿಸದೆ ನಿನ್ನ ಕೈಯ್ಯಿಗೆ ಕೊಟ್ಟಿರಬೇಕೆಂದೂ ಅದನ್ನು ನೀನು ನಿನ್ನ ದಿನಚರಿಪುಸ್ತಕದ ಅಳತೆಗೆ ಸರಿಯಾಗಿ ಮಡಿಸಿಟ್ಟು ಕೊಂಡಿರಬೇಕೆಂದೂ ಇದನ್ನು ನೋಡಿದ ಕೂಡಲೇ ಹೇಳಬಹುದು. ಎರಡ ನೆಯದು ಠಾಕೂರರು ನೋಡಲಿಕ್ಕೆ ಮೊದಲಾಗಲೀ, ಆ ಬಳಿಕಾಗಲೀ ಇದು, ಅದೇ ಗುಂಪಿನವರಲ್ಲದೆ ಬೇರೆಯವರ ಕಣ್ಣಿಗೆ ಬಿದ್ದಿದ್ದ ಪಕ್ಷದಲ್ಲಿ ಇದುವರೆಗೆ ಈ ಸಮಾಚಾರವು ಎಲ್ಲೆಲ್ಲಿಯೂ ಹಬ್ಬಿ ಹೋಗುತ್ತಿದ್ದಿತು. ಇವೆರಡು ಕಾರಣಗಳೂ ಈ ಕಾಗದವು ಠಾಕೂರರಿಗೇ ಸಿಕ್ಕಿರುವುದೆಂಬು ದನ್ನು ಸ್ಥಿರಪಡಿಸಲು ಸಾಕಾಗಿವೆ.

**ದು. ಪ್ರ:**— (ಕುತೂಹಲದಿಂದ—) 'ಆಯಿತು, ವಾಹನ ಮತ್ತು ಅನುಚರರ ವಿಷಯವಾಗಿ ಹೇಳಿದುದಕ್ಕೆ ಕಾರಣಗಳೋ?'

**ವಿಕ್ರಮ:**—'ಅದೇ? ನೀನು ನನ್ನಲ್ಲಿ ಈ ಮಾತಿಗೆ ಮೊದಲು ಮಾಡಿದಾಗಳೇ ನನಗೆ ಈ ಗೋಡೆಯ ಹೊರಗಡೆಯಲ್ಲಿ ಜನರು ಹೊಂಚು ಕೇಳುತ್ತಿರಬಹುದೆಂಬ ಶಂಕೆಯುಂಟಾಯಿತು. ಆದರೂ ಸುಮ್ಮನಿದ್ದೆನು. ಮತ್ತೆ ಒಂದೆರಡು ನಿಮೇಷದೊಳಗಾಗಿ ಇಬ್ಬರೋ ಅಥವಾ ಮೂವರೋ ವಿದ್ಯಮಾನವೇನೆಂದು ತಿಳಿಯಬೇಕೆಂಬ ಸಡಗರದಿಂದ ಬಲವಾಗಿ ಉಸಿ

ರಾಡುವ ಶಬ್ದವು ಕೇಳಿಸಿತು. ಈ ಸುಳಿವು ತಿಳಿದೊಡನೆಯೇ ನಾನು ನಿನ್ನಲ್ಲಿ ಮಾತನ್ನು ನಿಲ್ಲಿಸಿ, ಹೊರಗೆ ಹೋಗಿ ನೋಡಿದೆನು. ಪಾಪ ! ನನ್ನ ಬರುವಿಕೆಯನ್ನು ತಿಳಿಯದೆ ಇತ್ತ ಕಡೆಯಲ್ಲಿಯೇ ಗಮನವಿಟ್ಟು ಕೇಳುತ್ತಿದ್ದ ಇಬ್ಬರನ್ನು ಕಂಡೆನು. ಕೂಡಲೆ ನನ್ನೆರಡು ಮುಷ್ಟಿಗಳಿಂದಲೂ ಇಬ್ಬರ ಬೆನ್ನಿನ ಮೇಲೆಯೂ ಗುದ್ದಿದೆನು. ಅಷ್ಟರಲ್ಲಿಯೇ ಅವರು ತಮ್ಮ ಗುರುತನ್ನು ತೋರಪಡಿಸದಿರುವುದಕ್ಕಾಗಿ ಮುಸುಕನ್ನೆಳೆದು ಮೋರೆಗೆ ಮರೆಮಾಡಿಕೊಂಡು, ಹಿಂತಿರುಗಿ ನೋಡದೆ ಓಡಿ ಹೋದರು. ನಾನೂ ಅವರ ಹಿಂದೆ ನಾಲ್ಕಾರು ಮಾರು ದೂರ ಹೋಗುವುದರೊಳಗಾಗಿ, ಅವರೊಡನೆ ಮತ್ತಿಬ್ಬರು ಸೇರಿಕೊಂಡುದರಿಂದ, ನಾಲ್ವರೂ ಸಂದಿಯನ್ನು ಹೊಕ್ಕು ತಲೆತಪ್ಪಿಸಿಕೊಂಡು ಓಡಿಹೋದರು. ಇಷ್ಟು ಮಾಡಿದ ಬಳಿಕ ನಾನು ನಮ್ಮ ಮನೆಯಾಳನ್ನು ಹೊರಗೆ ನಿಲ್ಲಿಸಿ, ಇಲ್ಲಿಯ ಮಾತನ್ನು ಯಾರೂ ಕೇಳಲಾಗದಂತೆ ಮಾಡಿ ಇಲ್ಲಿಗೆ ಬಂದು ಸೇರಿದೆನು. ಇದರಿಂದ ಬಂದಿರುವವರು ನೀನಿತ್ತ ಹೊರಟುದನ್ನು ತಿಳಿದು ಹಿಂದೆಯೇ ಬಂದಿರಬೇಕೆಂದೂ, ಇವರಲ್ಲಿ ನಿನ್ನ ಮನೆಯೊಳಗಿನವರೂ ಸೇರಿರಬೇಕೆಂದೂ ವಾಹನವನ್ನೇನಾದರೂ ತಂದಿದ್ದರೆ, ಇಲ್ಲಿಗೆ ಬರಲಾಗದಂತೆ ದಾರಿಯಲ್ಲಿ ನಿನಗೆ ಅಪಕಂಟಕಗಳುಂಟಾಗುವ ಸಂಭವವಿದ್ದಿತು— ನೀನು ಕಾಲುನಡೆಯಿಂದ ವೇಗಗಮನದಲ್ಲಿ ನಿರಾಯುಧನಾಗಿ ಹಾಗೆಯೇ ಸೀಳುದಾರಿಯಲ್ಲಿ ಬಂದಿರುವುದರಿಂದ ಸುರಕ್ಷಿತನಾಗಿ ಬಂದು ಸೇರಿದೆಯೆಂದೂ ಊಹಿಸಿದೆನು.

**ದು. ಪ್ರ:—** ಅಣ್ಣ ! ನನಗೆ ಇದಾವುದೂ ಹೊಳೆಯಲೇ ಇಲ್ಲ. ಈ ಕಾಗದವನ್ನು ನೋಡಿದೆಯಷ್ಟೆ, ಇನ್ನು—ಯಾರ ಮೇಲೆ ಶನಿ ವಕ್ರಿಸಿರುವುದೆಂಬುದು ಮನಸ್ಸಿಗೆ ಹೊಳೆಯಿತೋ ?

**ವಿಕ್ರಮ:—** ( ನಸುನಕ್ಕು ) ‘ ಇನ್ನೂ ಅದನ್ನು ಈಗಲೇ ನಿರ್ಧರಿಸಿ ಹೇಳುವಂತಿಲ್ಲ. ಅಲ್ಲದೆ ಹೆಚ್ಚಿನ ಮಾತುಗಳಿಗೆ ಇದು ಸಮಯವೂ ಅಲ್ಲ. ತಕ್ಕ ವೇಳೆಯಲ್ಲಿ ಹೇಳುವೆನು. ’

**ದು. ಪ್ರ:—** ಹಾಗೆಯೇ ಆಗಲಿ, ಈಗ ನಾನು ಮಾಡಬೇಕಾದುದು ಏನಾದರೂ ಉಂಟೋ ?

**ವಿಕ್ರಮ:—** ಪ್ರಕೃತದಲ್ಲಿ ನೀನು ಮಾಡುವುದೆಂದರೆ, ಮನೆಯವ

ರನ್ನೇ ಆಗಲಿ ನಿನ್ನ ಕೈಕೆಳಗಿನ ಕೆಲಸಗಾರರನ್ನಾಗಲೀ ಯಾರನ್ನೂ ನಂಬಿ, ಈ ವಿಚಾರವನ್ನುಸಿರಬೇಡ, ಉಳಿದುದೇನಿದ್ದರೂ ನಾಳೆಯಾಗಲಿ. ಇನ್ನು ಏಳು, ಹೋಗಿ ಮಲಗುವ.

( ಇಬ್ಬರೂ ಎದ್ದು ಮಲಗುವುದಕ್ಕೆ ತೆರಳಿದರು.)

---

ಶ್ರೀ:

# ಚತುರ್ಥ ಪರಿಚ್ಛೇದ.

---

" ಅಹಂಕಾವದುರ್ಗೇಣ ಪೌರಜನ ಚರಿತ್ರಾನ್ವೇಷಣೇ ನಿಯುಕ್ತ: | ಪರಗೃಹ ಪ್ರವೇಶೇ ಪರಸ್ಯನಾ ಶಂಕನೀಯೇನ ಅನೇನ ಯಮುಪಟೇ ನ ಹಿಂಡಮಾನ: ಮಣಿಕಾರ ಶ್ರೇಷ್ಠಿನ. ಚಂಡನ ದಾಸಸ್ಯ ಗೇಹಂ ಪ್ರವಿಷ್ಟೋಽಸ್ಮಿ | "

( ಮುದ್ರಾರಾಕ್ಷಸ )

( ವಸ್ತುಸಂಗ್ರಹ. )

ಕಲ್ಯಾಣನಗರದ ಸಾಹುಕಾರ ಪೇಟೆಯ ಮಧ್ಯಭಾಗದಲ್ಲಿ ಪರಿಶೋಭಿಸುತ್ತಿದ್ದ ಉನ್ನತವಾಗಿ ಅಂದವಾದ ಉಪ್ಪರಿಗೆಮನೆಯ ಮುಂದಿನ ಪಟ್ಟಸಾಲೆಯ ಮೇಲೆ, ಬಾಗಿಲನ್ನು ಕಾಯುವ ಗೊಲ್ಲನೊಬ್ಬನು ತೂಕಡಿಸುತ್ತ ಕುಳಿತಿದ್ದನು. ಬೆಳಗಾಗಿ ಒಂದು ತಾಸಾ (ಹೋರೆ) ಗಿದ್ದರೂ ಮನೆಯೊಳಗೆ ಜನಸಂಚಾರದ ಗದ್ದಲವೇ ಕಾಣುತ್ತಿರಲಿಲ್ಲ. ಮನೆಯ ಮುಂದುಗಡೆ ಗುಡಿಸಿ ಸಾರಿಸಿ ಚೊಕ್ಕಟವಾಗಿದ್ದರೂ, ಅಂದವಾದ ರಂಗವಲ್ಲಿಯಿಂದ ಅಲಂಕರಿಸಲ್ಪಟ್ಟಿರಲಿಲ್ಲ. ಹೀಗಿರಲು .ಕಾರಣವೇನು? ಮನೆಯನ್ನು ನೋಡಿದರೆ, ಸಾಮಾನ್ಯರ ವಾಸಸ್ಥಾನದಂತೆ ತೋರುವುದಿಲ್ಲ; ಶ್ರೀಮಂತರೂ, ಗೌರವಸ್ಥರೂ, ಪೂರ್ವಾಚಾರಪರರೂ ಆದವರ ನಿಜನಿವಾಸದಂತೆಯೇ ಕಾಣುತ್ತಿರುವುದು. ಇಂತಹ ಮನೆಯಲ್ಲಿ ಹೀಗೆ ಮಲಿನತೆ ಕಾಣುತ್ತಿರುವ ಕಾರಣವು ಬಲವತ್ತರವೇ ಆಗಿರಬೇಕಲ್ಲವೇ? ( ಇರಲಿ; ಮುಂದೆ ತಿಳಿವುದು.)

ಗೊಲ್ಲನು ತೂಕಡಿಸುತ್ತಿದ್ದಂತೆಯೇ, ಕಾರ್ಯತತ್ಪರನಾಗಿ ಬಂದ ಬ್ರಹ್ಮಚಾರಿಯೊಬ್ಬನು ಮನೆಬಾಗಿಲನ್ನು ಮೆಟ್ಟಿ, ಗೊಲ್ಲನನ್ನು ಕುರಿತು– 'ಅಯ್ಯಾ! ಮಹಾಮಹೋಪಾಧ್ಯಾಯ ಮಧುಸೂದನ ಶರ್ಮರವರ ಮನೆಯು ಇದೇ ಅಲ್ಲವೆ?' ಎಂದನು.

**ಗೊಲ್ಲ:**— ಅಹುದು; ಏಕೆ?

**ಬ್ರಹ್ಮ:**— ಅವರನ್ನು ನೋಡಬೇಕಾಗಿದೆ, ಅವರೆಲ್ಲಿರುವರು?

**ಗೊಲ್ಲ:**— ಸ್ನಾನಮಾಡಲು ಹೋಗಿರುವರು.

**ಬ್ರಹ್ಮ:**— ಅವರ ಹಿರಿಯರಾದರೂ ಇರುವರೆ?

**ಗೊಲ್ಲ:**— ಅವರು ಕಾಲಗತಿ ಹೊಂದಿ ಹದಿನೈದು ದಿನಗಳಾದುವು.

**ಬ್ರಹ್ಮ:**— ಅವರ ಬಂಧುವರ್ಗದವರೆಲ್ಲರೂ ಇಲ್ಲಿಯೇ ಇರುವರೇ?

**ಗೊಲ್ಲ:**— (ತೂಕಡಿಸುತ್ತಿದ್ದವನು ಪುನಃ ಪುನಃ ಪ್ರಶ್ನೆಗಳನ್ನು ಕೇಳಿ ಬೇಸರದಿಂದ) 'ಯಾವ ಸೀಮೆಯವರಯ್ಯ—ನೀವು? ಬೆಳಕು ಹರಿವುದೆ ತಡ, ಓಡಿಬಂದು ಮನೆಯವರ ವಿಚಾರವನ್ನು ಪ್ರಸ್ತಾಪಿಸುತ್ತಿರುವಿರಿ. ನಿಮಗೇನಾದರೂ ಹುಚ್ಚುಗಿಚ್ಚು ಹಿಡಿದಿರುವುದೊ? ದೊಡ್ಡವರ ಮನೆಬಾಗಿಲಿಗೆ ಬರುವುದಕ್ಕೆ ಎಷ್ಟು ಕೆಚ್ಚು?'

**ಬ್ರಹ್ಮ:**— ಅಯ್ಯ! ಕೋಪಿಸಬೇಡ, ಹುಚ್ಚುಹಿಡಿಯದ ಮನುಷ್ಯರೇ ಇರುವುದಿಲ್ಲ, ಒಬ್ಬೊಬ್ಬರಿಗೆ ಒಂದೊಂದು ಬಗೆಯಾದ ಹುಚ್ಚು ಇದ್ದೇ ಇರುವುದು. ನಾನಿಲ್ಲಿಗೆ ಕೆಚ್ಚಿನಿಂದೇನೂ ಬಂದಿಲ್ಲ. ಸುಮ್ಮನೇಕೆ ಬೇಸತ್ತು ಗದರಿಸುವೆ? ನಾನು ಬಂದಿರುವುದು ಬಹುದೂರ ದೇಶದಿಂದ.

**ಗೊಲ್ಲ:**— (ತನ್ನ ಮಾತಿಗೆ ಅಸಮಾಧಾನಪಡದೆ ನಗುಮೊಗದಿಂದಲೇ ಉತ್ತರವಿತ್ತುದನ್ನು ನೋಡಿ ಲಜ್ಜಿತನಾಗಿ) 'ಅಲ್ಲ—ಸ್ವಾಮಿ! ಅದಕ್ಕಲ್ಲ ನಾನು ಹೇಳಿದುದು, ನನ್ನಲ್ಲಿ ಇಷ್ಟೆಲ್ಲಾ ಪ್ರಸ್ತಾಪಿಸುವುದು ಮರ್ಯಾದೆಯಲ್ಲವೆಂದು ಹೇಳಿದೆ. ಅಷ್ಟೇ, ಅದು ಹೋಗಲಿ. ನೀವು ಈ ಕಡೆಯವರಲ್ಲದಿದ್ದರೆ, ಮತ್ತೆಲ್ಲಿಂದ ಬಂದಿರುವಿರಿ? ನಿಮ್ಮ ಹೆಸರೇನು? ಯಾವ ಕೆಲಸಕ್ಕಾಗಿ ಬಂದಿರುವಿರಿ?'

**ಬ್ರಹ್ಮ:**— ಅಯ್ಯ! ನೀನು ಹೇಗಾದರೂ ಹೇಳು. ನನಗದರಿಂದ ಕುಂದೇನು? ವಿದ್ಯಾರ್ಜನೆಗೆಂದು ದೇಶಕೋಶಗಳನ್ನೂ ಸ್ವಜನಬಾಂಧವ

ರನ್ನೂ ಬಿಟ್ಟುಬಂದಿರುವ ನಮ್ಮಂತಹರಿಗೆ ತಾಳ್ಮೆಯೊಂದೇ ಮುಖ್ಯವಾದುದ ರಿಂದ, ಯಾರು ಹೇಗೆ ಹೇಳಿದರೂ ಕೊರತೆಯಾಗುವದಿಲ್ಲ; ಅದಿರಲಿ. ನಮ್ಮ ಸ್ಥಳವು ಭಾವನಗರದ ಒಂದು ಸಣ್ಣ ಗ್ರಾಮ. ಬಂದಿರುವುದು ಮಹಾ ಮಹೋಪಾಧ್ಯಾಯರಲ್ಲಿ ಶಿಷ್ಯವೃತ್ತಿಗಾಗಿ; ಗುರುಜನರ ಮುಂದೆ, ಅಭಿ ವಾದನ ಸಮಯದಲ್ಲಲ್ಲದೆ ಉಳಿದ ಕಾಲದಲ್ಲಿ, ನಮ್ಮ ಹೆಸರನ್ನು ನಾವೇ ಹೇಳಿಕೊಳ್ಳುವುದು ನಮ್ಮ ವಾಡಿಕೆಯಾಗಿಲ್ಲ.

**ಗೊಲ್ಲ:**— ಅದೇನು, ಅಷ್ಟು ದೂರದಿಂದ ಬಂದಿರುತ್ತೀರಿ? ಅಲ್ಲಿ ವಿದ್ಯಾವಂತರಾರೂ ಇರಲಿಲ್ಲವೇ?

**ಬ್ರಹ್ಮ** — ಅಯ್ಯ! ವಿದ್ಯಾವಂತರಿಗೇನೂ ಅಭಾವವಿಲ್ಲ. ಆದರೆ ಭಾವನೆಯೆಲ್ಲಿ ಆಕರ್ಷಿಸಲ್ಪಡುವದೋ, ಅಲ್ಲಿಯೇ ಸಿದ್ಧಿರಸವೂ ಉತ್ಪನ್ನ ವಾಗುವುದೆಂಬದನ್ನು ನಂಬಿ ಬರಬೇಕಾಯಿತು. ಅದಿರಲಿ, ಮಹಾಮಹೋ ಪಾಧ್ಯಾಯರು ಬರುವವರೆಗೆ ಒಳಗೆ ವಿಶ್ರಮಿಸಿಕೊಂಡಿರಲು ಅವಕಾಶ ವುಂಟೋ?

**ಗೊಲ್ಲ** — ಮನೆಯ ಯಜಮಾನಿಯವರ ಅಪ್ಪಣೆಯಿಲ್ಲದೆ ಅದಕ್ಕೆ ಅವಕಾಶವಿಲ್ಲ. ಯಜಮಾನಿಯರನ್ನು ಕಾಣಬೇಕೆಂದರೂ, ಇನ್ನೂ ಬಹಳ ಹೊತ್ತು ಕಾದಿರಬೇಕು.

**ಬ್ರಹ್ಮ:**— 'ಆಗಲಿ' (ಎಂದು ತಾನೂ ಬಾಗಿಲ ಪಡಸಾಲೆಯ ಮೇಲೆಯೇ ಕುಳಿತನು. ಅಷ್ಟರಲ್ಲಿ ಮನೆಯೊಳಗಿಂದ ಯಾರೋ ಕೂಗಿ ದಂತಾಗಲು ಗೊಲ್ಲನು ಎದ್ದು ಒಳಗೆಹೋದನು. ಈತನು ಹೊರಟು ಹೋದ ನಾಲ್ಕಾರು ನಿಮಿಷಗಳಲ್ಲಿಯೇ ಹದಿನೇಳು-ಹದಿನೆಂಟು ವರ್ಷದ ಲಾವಣ್ಯಮಯಿಯಾದ ತರುಣಿಯೋರ್ವಳು ಬಂದು ಬಾಗಿಲ ಬಳಿಯಲ್ಲಿ ನಿಂತು ನೋಡುತ್ತ ಹೀಗೆ ಮೆಲ್ಲನೆ ಕೇಳಿದಳು—) 'ಯಾರಪ್ಪ ಕುಳಿತಿರು ವವರು?'

**ಬ್ರಹ್ಮ**— (ವಿನಯದಿಂದೆದ್ದು) 'ತಾಯಿ! ನಾನೊಬ್ಬ ಪ್ರವಾಸಿ; ವಿದ್ಯಾರ್ಥಿಯಾಗಿ ಮಹಾಮಹೋಪಾಧ್ಯಾಯರನ್ನು ಗುರುವಾಗಿ ವರಿಸಿ ಬಂದಿರುವೆನು.'

**ಗೊಲ್ಲ** —ಅವರು ಇನ್ನು ಒಂದೆರಡು ಗಳಿಗೆಯೊಳಗಾಗಿಯೇ ಬರುತ್ತಾರೆ.

**ಬ್ರಹ್ಮ** — ' ತಾಯಿ ! ಅವರ ಯಶಸ್ಸು ಬಹುದೂರ ಹಬ್ಬಿರುವುದು. ಅವರಲ್ಲಿ ಶಿಷ್ಯವೃತ್ತಿಗಾಗಿ ಬರಲು ಬಹುಮಂದಿ ಸಿದ್ಧರಾಗಿರುವರು, ಮುಖ್ಯ ವಾಗಿ, ಇಂತಹ ಮಹನೀಯರಲ್ಲಿ ಗುರುಕುಲವಾಸವಮಾಡಿ ವಿದ್ಯಾಲಾಭ ಹೊಂದುವುದು ಸಾಮಾನ್ಯರ ಪಾಲಿಗೆ ಬರಲಾರದು, ಅದಕ್ಕೂ ಸುದೈವ (ಯೋಗ) ಇರಬೇಕು. ಅವರ ಮಕ್ಕಳೂ, ಇತರ ಬಂಧುವರ್ಗಕ್ಕೆ ಸೇರಿದ ವಿದ್ಯಾರ್ಥಿಗಳೂ ಎಷ್ಟರ ಪುಣ್ಯಾತ್ಮರೋ ?''

**ತರುಣಿ** — ಇರಬಹುದು ! ಅವರಲ್ಲಿ ವಿದ್ಯಾವ್ಯಾಸಂಗ ಮಾಡಿದ ವಿದ್ಯಾರ್ಥಿಗಳೆಲ್ಲರೂ ಉನ್ನತಪದಕ್ಕೆ ಬರುತ್ತಾರೆಂಬುದು ನಿಜವಾದ ಮಾತು. ಆದರೆ ಅವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೂ ವಿದ್ಯಾಲಾಭದಿಂದ ಪದವೀ ಧರರೆನ್ನಿಸಿಕೊಳ್ಳುವಷ್ಟರ ಸುಯೋಗವು ಈಗಲೇ ಬರುವಂತಿಲ್ಲ. ದೇವರ ಕೃಪೆಯಿದ್ದರೆ ಆಗುವುದು. ಇಲ್ಲಿ ಕುಳಿತಿರಲೇಕೆ ? ನಡುಮನೆಯ ಹಜಾರ ದಲ್ಲಿ ಕುಳಿತುಕೊಂಡಿದ್ದರೆ, ಅವರು ಬಂದಮೇಲೆ ದರ್ಶನವನ್ನು ಕೊಡುವರು.' ಎಂದು ಹೇಳಿ ಬ್ರಹ್ಮಚಾರಿಯನ್ನು ಕರೆದು ಹಜಾರದಲ್ಲಿ ಹಾಸಿದ್ದ ಚಾಪೆ ಯನ್ನು ತೋರಿಸಿ, ಅದರ ಮೇಲೆ ಕುಳಿತುಕೊಳ್ಳುವಂತೆ ಹೇಳಿ ಹೊರಟು ಹೋದಳು. ಬಾಗಿಲನ್ನು ಕಾಯುತ್ತಿದ್ದ ಗೊಲ್ಲನು ಮತ್ತೆ ಅಲ್ಲಿಗೆ ಬಂದು, ಬ್ರಹ್ಮಚಾರಿಯ ಕಾವಲಿಗಾಗಿ ಕುಳಿತನು. ಬ್ರಹ್ಮಚಾರಿ ಚಾಪೆಯ ಮೇಲೆ ಕುಳಿತು, ಕವುಂಕಳಲ್ಲಿದ್ದ ಪುಸ್ತಕಗಳ ಕಂತೆಯನ್ನು ಕೆಳಗಿಳಿಸಿ, ಒಂದೊಂದ ನ್ನಾಗಿ ಬಿಚ್ಚಿ, ಹಾಳೆಗಳನ್ನು ತಿರುವಿಹಾಕುತ್ತ ಕುಳಿತನು.

(ಬಳಿಕ ಅರ್ಧಘಂಟೆಯೊಳಗಾಗಿಯೇ ಸ್ನಾನಾಹ್ನಿಕಗಳನ್ನು ಮುಗಿಯಿ ಸಿಕೊಂಡು ಅಯಿವತ್ತು-ಅಯಿವತ್ತಯ್ದು ವರ್ಷ ವಯಸ್ಸಿನ ಮಹಾಮಹೋ ಪಾಧ್ಯಾಯನು ಬಂದನು. ಕುಳಿತಿದ್ದ ಗೊಲ್ಲನೆದ್ದು ಬ್ರಹ್ಮಚಾರಿಯನ್ನು ಕುರಿತು,–'ಅಯ್ಯ ಇದೋ ಬಂದರು, ಇವರೇ ಯಜಮಾನರು.' (ಎಂದು ಹೇಳಿ, ಮಧುಸೂದನಶರ್ಮನ ಕಡೆಗೆ ಕೈಮುಗಿದು ವಿನಯದಿಂದ) 'ದರ್ಶ ನಕ್ಕಾಗಿ ವಿದ್ಯಾರ್ಥಿಯೊಬ್ಬರು ಬಂದಿರುವರು.' (ಎಂದು ಹೇಳಿ, ಬಾಗಿಲ ಕಡೆಗೆ ಹೊರಟು ಹೋದನು.)

( ಬ್ರಹ್ಮಚಾರಿ— ಎದ್ದು ಬಂದು ವಿನಯದಿಂದ, ಮಧುಸೂದನನ ಮುಂದೆ– ' ಮಹಾಮಹೋಪಾಧ್ಯಾಯರ ಪಾದಸನ್ನಿಧಿಯಲ್ಲಿ, ಬ್ರಹ್ಮಚಾರಿ

ವಾಮನ ಗೋಸ್ವಾಮಿಶರ್ಮನು ಅಭಿವಂದಿಸುವನು.'— ಎಂದು ಹೇಳುತ್ತ ನೆಲವನ್ನು ಮುಟ್ಟಿ ವಂದಿಸಿ, ಕೈ ಕಟ್ಟಿ ನಿಂದನು.)

**ಮಧು** – 'ಸಾಧು; ಸುಬ್ರಾಹ್ಮಣ! ಸಾಧುಸಾಧು!! ಭಗವತ್ಕೃಪಾ ಪಾತ್ರನಾಗುವೆ, ಕುಳ್ಳಿರು.' (ಎಂದು ಹೇಳಿ ತಾನು ಚಾಪೆಯ ಮೇಲೆ ಕುಳಿತನು.)

(ಬ್ರಹ್ಮಚಾರಿ ವಿನಯದಿಂದ ದೂರದಲ್ಲಿ ತಲೆಬಾಗಿ ಕುಳಿತನು.)

**ಮಧು** — (ಪ್ರೀತಿವ್ಯಂಜಕಸ್ವರದಿಂದ ಬ್ರಹ್ಮಚಾರಿಯನ್ನು ಕುರಿತು) 'ಏನಯ್ಯಾ, ವಾಮನಶರ್ಮ! ನೀನು ಬಂದಿರುವ ಉದ್ದೇಶವೇನು?'

**ವಾಮನ** — ಗುರುದೇವ! ಭ್ರಮರವು ಪುಷ್ಪವಿದ್ದಲ್ಲಿಗೆ ಬರುವ ಉದ್ದೇಶವಾವುದು? ಸೌರಭಕ್ಕಲ್ಲವೆ?

**ಮಧು** — (ಬ್ರಹ್ಮಚಾರಿಯ ಮಾತಿಗೆ ಸಂತುಷ್ಟನಾಗಿ ಪ್ರಸನ್ನ ಮುದ್ರೆಯಿಂದ) ಬುದ್ಧಿವಂತನಾಗಿಯೇ ಕಾಣುವೆ, ಸಂತೋಷ! ಯೋಗ್ಯರಾದ ಶಿಷ್ಯರು ದೊರೆವುದೂ ಒಂದು ಯೋಗವೇ ಸರಿ, ಆಗಲಿ. ಸೌರಭಕ್ಕೆಂದು ಬಂದಿರುವ ಭ್ರಮರಕ್ಕೆ ಇಲ್ಲಿ ಎಂತಹ ಸೌರಭವಾಗಬೇಕೋ ತಿಳಿಯಬೇಕಷ್ಟೆ?'

**ವಾಮನ.**— ಪೂಜ್ಯಪಾದರೇ? ತರ್ಕವ್ಯಾಕರಣಗಳಲ್ಲಿ ತಕ್ಕ ಮಟ್ಟಿಗೆ ಜ್ಞಾನವುಂಟಾಗಿರುವುದು. ಸಾಹಿತ್ಯವೂ ಹಾಗೆಯೇ. ಆದರೆ ಪೂರ್ವೋತ್ತರ ಮೀಮಾಂಸಗಳನ್ನು ಸಂಪೂರ್ಣವಾಗಿ ತಿಳಿಯಬೇಕೆಂಬ ಅಭಿಲಾಷೆಯಿಂದ ಬಂದಿರುವೆನು. ಆಶ್ರಯವಿತ್ತು ಅನುಗ್ರಹಿಸಿದರೆ, ಧನ್ಯನಾಗುವೆನು.

**ಮಧು** — ಅಯ್ಯ! ನನಗೆ ತಿಳಿದಿರುವುದನ್ನು ವಂಚನೆಯಿಲ್ಲದೆ ನಿನಗೆ ಹೇಳಲು ಅಡ್ಡಿಯಿಲ್ಲ. ಆದರೆ ನೀನು ಇಲ್ಲಿ ಎಲ್ಲಿಯಾದರೂ ವಸತಿಯನ್ನು ಕಲ್ಪಿಸಿಕೊಂಡು ಬಂದಿರುವೆಯೋ ಹೇಗೆ?

**ವಾಮನ:**— ಮಹಾತ್ಮರೇ, ನಾನು ಇಲ್ಲಿಗೆ ಈಗಲೇ ಬಂದುದು, ಮತ್ತೆಲ್ಲಿಯೂ ಹೋಗಿಲ್ಲ. ಮಹೋನ್ನತರಾದ ತಮ್ಮ ಘನಸನ್ನಿಧಾನದಲ್ಲಿಯೇ ಆಶ್ರಯವಿತ್ತು, ನನಗೆ ಗುರುಕುಲವಾಸವು ನಿರಂತರವೂ ಅವಿಚ್ಛಿನ್ನವಾಗಿರುವಂತೆ ಕಟಾಕ್ಷಿಸಿ, ಅನುಗ್ರಹಿಸುವುದಾದರೆ ಕೃತಾರ್ಥನಾಗುವೆನು.

**ಮಧು** — ಅಯ್ಯ, ಅದೇನೂ ಅಗಾಧವಾದ ಕಾರ್ಯವಲ್ಲ. ಆದರೆ ನಾನೇನು ಮಾಡಲಿ ? ಸದ್ಯಸ್ಥಿತಿಯಲ್ಲಿ ಬಹು ಅನಿವಾರ್ಯ ಕಾರಣಗಳಿರುವುವು. ವೃದ್ಧರಾಗಿದ್ದ ನಮ್ಮ ಯಜಮಾನರು ಪರಂಧಾಮವನ್ನು ಸೇರಿ ಹದಿನೈದು ದಿನಗಳಾದುವು. ಅದಕ್ಕೆ ಮೊದಲೇ ಎಂದರೆ, ಈಗ ಇಪ್ಪತ್ತು ದಿನಗಳಿಗೆ ಹಿಂದೆಯೇ, ಗೃಹಸ್ವಾಮಿನಿಯಾಗಿದ್ದ ನನ್ನ ಜ್ಯೇಷ್ಠಪತ್ನಿ ತನ್ನ ತಾಯಿ ಮುಮೂರ್ಷಾವಸ್ಥೆಯಲ್ಲಿರುವಳೆಂದು ವರ್ತಮಾನವನ್ನು ಕೇಳಿ, ತಾಯಿಯನ್ನು ನೋಡಲು ಹೊರಟುಹೋದಳು. ಇದುವರೆಗೂ ಸಮಾಚಾರವೇನೂ ಬಂದಿಲ್ಲ. ಇದೊಂದು ಪ್ರಬಲ ಚಿಂತೆಯಾಗಿ ಇರುಳೂ ಹಗಲೂ ನನ್ನನ್ನು ತಪಿಸುತ್ತಿರುವುದು. ಗೃಹಸ್ವಾಮಿನಿಯೂ ಹೊರಟು ಹೋಗಿ, ಹಿರಿಯರೂ ಕಾಲವಶರಾಗಿರುವುದರಿಂದ, ಮನೆಯಾಡಳಿತದಲ್ಲಿ ಅನೇಕ ಛಿದ್ರಗಳಿಗೆ ಅವಕಾಶವಾಗಿರುವುದು. ಈಗ ನನ್ನ ಮನೆಯಲ್ಲಿರುವರಲ್ಲಿ ಹದಿನೆಂಟು ವರ್ಷ ವಯಸ್ಸಿನ,— ಇನ್ನೂ ನಿರ್ವಾಹಶಕ್ತಿಯಿಲ್ಲದ ನನ್ನ ದ್ವಿತೀಯ ಪತ್ನಿ ಮತ್ತು ಅವಳ ಮೂರು ವರ್ಷದ ಒಬ್ಬ ಬಾಲಕ,— ಇಬ್ಬರಲ್ಲದೆ ನನ್ನ ಮನೆಗೆ ಸೇರಿದವರು ಇನ್ನು ಆರೂ ಇಲ್ಲವಾದರೂ ಮನೆಯ ತುಂಬ ಮಂದಿಗಳಿರುವರು. ಇದರಿಂದ ಮನೆಯಲ್ಲಿರುವವರು ನನಗೆ ತಿಳಿಯದಂತೆ ವಿದ್ಯಾರ್ಜನೆಗಾಗಿ ಪರಸ್ಥಳದಿಂದ ಬಂದಿರುವ ವಿದ್ಯಾರ್ಥಿಗಳನ್ನು ಕ್ರೂರವಾಗಿ ದಂಡಿಸಿ, ಅವರಿಂದ ಅನೇಕ ವಿಧವಾದ ಕಷ್ಟದ ಕೆಲಸಗಳನ್ನು ಮಾಡಿಸಿ, ನಿರ್ದಯೆಯಿಂದ ಅವರ ಮನಸ್ಸನ್ನು ನೋಯಿಸುವರು. ಅವರು ಹಾಗೆ ದುಡಿದು, ಮಿಡುಕಾಡುತ್ತಿರುವುದು ನನಗೆ ಅಧಿಕ ಯಾತನೆಯನ್ನೇ ಉಂಟು ಮಾಡುವುದು. ಅದಕ್ಕಾಗಿಯೇ, ಈವರೆಗೂ ಮನೆಯಲ್ಲಿದ್ದ ವಿದ್ಯಾರ್ಥಿಗಳನ್ನು ತಕ್ಕಷ್ಟು ಸಹಾಯ ದ್ರವ್ಯಗಳನ್ನು ಕೊಟ್ಟು ಬೇರೆ ಕಡೆಯಲ್ಲಿರುವಂತೆ ನೇಮಿಸಿ ಕಳಿಹಿರುವೆನು ನನ್ನ ಅವಸ್ಥೆ ಹೀಗಾಗಿರುವುದರಿಂದ, ಈಗ ನೀನು ಈ ಮನೆಯಲ್ಲಿಯೇ ಇರಲು ಹೇಗೆ ಅಭಯವನ್ನು ಕೊಡಲಿ ?

**ವಾಮನ** — ( ವಿನಯದಿಂದ– ) ‘ ಸಾಧ್ವಿದ್ದರೆ ನಿರಂತರನಾನ್ನಿಧ್ಯವು ಲಭಿಸಲೆಂದೇ ಪ್ರಾರ್ಥಿಸಿದೆನಲ್ಲದೆ ಯತ್ನವಿಲ್ಲದ ಕಾರ್ಯಕ್ಕೆ ಏನು ಮಾಡಲಾದೀತು ? ಇದರಿಂದ ಚಿತ್ತಕ್ಕೆ ಆಯಾಸಪಟ್ಟುಕೊಳ್ಳಬಾರದು.

ಈ ದಿನವೇ ಮತ್ತೆಲ್ಲಿಯಾದರೂ ವಸತಿಯನ್ನು ಕಲ್ಪಿಸಿಕೊಳ್ಳುವೆನು.'

**ಮಧು** — ನೀನು ಪರಸ್ಥಳದವನೆಂದೂ ಇದೇ ಮೊದಲನೆಯಸಲ ಈವೂರಿಗೆ ಬಂದಿರುವೆನೆಂದೂ ಹೇಳುವೆ, ನಿನ್ನ ಯೋಗಕ್ಷೇಮವನ್ನು ನಾನು ವಹಿಸಬೇಕಾದುದು ಧರ್ಮವು. ಪ್ರಕೃತದಲ್ಲಿ ನಿನಗೆ ದ್ರವ್ಯಸಾಹ್ಯವನ್ನು ಕೊಡುವೆನು. ನನ್ನ ಜ್ಯೇಷ್ಠಪತ್ನಿ ಬರುವವರೆಗೆ ಬೇರೆ ಕಡೆಯಲ್ಲಿದ್ದರೆ, ಆ ಬಳಿಕ ಇಲ್ಲಿಯೇ ಕರೆಯಿಸುವೆನು

**ವಾಮನ** — (ಸಂತೋಷದಿಂದ–) 'ಪೂಜ್ಯಪಾದರೆ! ಅನುಗೃಹೀತ ನಾದೆನು. ಆದರೆ ನನಗೆ ಜ್ಞಾನದಾಯಕರೂ ಅನ್ನದಾತರೂ ಆದ ತಾವು ಪಿತೃಸಮಾನರು. ಪಿತೃಪತ್ನಿಯರು ಮಾತೃಸಮಾನರು. ಆದುದರಿಂದ ಪಿತೃ ಸಮ್ಮುಖದಲ್ಲಿ ಮಾತೆಯರ ವಿಷಯದಲ್ಲಿ ನಾನೇನಾದರೂ ಪ್ರಶ್ನೆ ಮಾಡಿದರೆ ಅದು ಅಸಭ್ಯವಾಗಲಾರದಷ್ಟೆ? ಗೃಹಸ್ವಾಮಿನಿ ಹೊರಟುಹೋದಂದಿನಿಂದ ಮನಸ್ಸಿಗೆ ಚಿಂತೆ ಬಲವಾಗಿರುವುದೆಂದು ಹೇಳಿದುದರಿಂದ ಕೆಲವು ಅಂಶ ಗಳನ್ನು ತಿಳಿದುಕೊಳ್ಳಬೇಕೆಂಬ ಮನಸ್ಸಾಗಿರುವುದು.

**ಮಧು:**— ಅಯ್ಯಾ! ಕೇಳಬೇಕಾದುದನ್ನು ಸ್ಪಷ್ಟವಾಗಿ ಕೇಳು, ಅವಶ್ಯಕವಾಗಿ ಹೇಳುವೆನು. ನೀನು ನನ್ನ ಮಾತಿಗೆ ಬೇರೆಬೇರೆ ಅರ್ಥವನ್ನು ಕಲ್ಪಿಸಿರುವಂತೆ ತೋರುತ್ತಿದೆ ನಾನು ನಿಜಸ್ಥಿತಿಯನ್ನು ಮರೆಮಾಜದೆ ಹೇಳಿದೆನಲ್ಲದೆ, ನಿನಗೆ ಇಲ್ಲಿ ಆಶ್ರಯವನ್ನು ಕೊಡಬಾರದೆಂದು ಹೇಳಲಿಲ್ಲ.

**ವಾಮನ** — ಗುರುದೇವ! ತಾವು ವಿಹಿತವೂ ಶ್ರೇಯಸ್ಕರವೂ ಆದ ಮಾತನ್ನೇ ಹೇಳಿರುವಿರಿ. ನಾನು ಕೇಳಬೇಕೆಂದಿರುವುದು ಬೇರೆ ವಿಷಯ.

**ಮಧು** — ಅದು ವಿದ್ಯಾರ್ಥಿಗಳಿಗೆ ಭೂಷಣವಾದ ಗುಣವು; ಅದಿ ರಲಿ, ಅಯ್ಯಾ, ವಾಮನಗೋಸ್ವಾಮಿ! ನಿನ್ನನ್ನು ನೋಡಿದರೆ ಇಪ್ಪತ್ತೈಯ್ದು ವರ್ಷಕ್ಕೆ ಮೀರಿದವನಾಗಿ ತೋರುವೆ. ಗೃಹಸ್ಥನಾಗಿರಬೇಕಾದ ದಿವಸದಲ್ಲಿ ಇನ್ನೂ ಬ್ರಹ್ಮಚರ್ಯೆಯನ್ನು ಬಿಡದೆ ವಿದ್ಯಾರ್ಜನೆಯಲ್ಲಿಯೇ ಇರುವುದನ್ನು ನೋಡಿದರೆ ಆಶ್ಚರ್ಯವಾಗುತ್ತಿದೆ! ಕಾರಣವೇನು? ನಿನ್ನ ಮಾತಾಪಿತರು ಹೇಗೆ ಸಮ್ಮತಿಸಿರುವರು?

**ವಾಮನ** — ಸ್ವಾಮಿ! ನನ್ನ ಮಾತಾಪಿತರು, ನನ್ನ ಬಾಲ್ಯದಲ್ಲಿಯೇ ನನಗೆ ವಿವಾಹವನ್ನು ಮಾಡಿ, ತಾವು ಕಾಲಾಧೀನರಾಗಿ ಹೋದರು. ಆದರೆ

ದೈವಾಜ್ಞೆಯಿಂದ ನನಗೆ ಸದ್ಯದಲ್ಲಿಯೇ ಪತ್ನಿಯನ್ನು ಅಗಲುವ ಯೋಗ ವುಂಟಾದುದಲ್ಲದೆ, ನೈಷ್ಠಿಕವ್ರತವನ್ನು ಹಿಡಿದು ವಿದ್ಯಾಸಾರವನ್ನು ಸಂಗ್ರಹಿಸಿ, ದೇಶಸೇವೆ ಮಾಡಬೇಕೆಂಬ ದೈವಪ್ರೇರಣೆಯಾದುದರಿಂದ, ನಾನು ಹೀಗೆ ದೇಶಾಟನೆಯಲ್ಲಿ ತೊಡಗಿ ಇಲ್ಲಿಗೆ ಬಂದು ಸೇರಿದೆನು.

**ಮಧು —** ಬಹು ಸಂತೋಷವಾಯಿತಯ್ಯಾ! ನೀನೇ ಸುಕೃತಶಾಲಿ. ನಿನ್ನನ್ನು ನೋಡಿದುದು ಮೊದಲು, ನನಗೆ ನಿನ್ನಲ್ಲಿ ಒಂದು ಬಗೆಯಾದ ಅನಿಮಿತ್ತ ಸ್ನೇಹವೇ ಉಕ್ಕಿಬರುತ್ತಿದೆ. ಇದಕ್ಕೆ ನಮ್ಮಿಬ್ಬರ ಪೂರ್ವಜನ್ಮದ ಬಲವತ್ಸಂಬಂಧವಾವುದೋ ಇರಬೇಕೆಂದು ಭಾವಿಸುವೆನು.

**ವಾಮನ —** ಗುರುದೇವ! ನನಗೂ ಹಾಗೆಯೇ ಆಗಿರುವುದು. ಅದಕ್ಕಾಗಿಯೇ ನಾನು ತಮ್ಮ ಸಂಸಾರದ ಕ್ಷೇಮಲಾಭವನ್ನು ತಿಳಿಯಲು-ಕುತೂಹಲಿಯಾಗಿದ್ದೇನೆಂದು ಹೇಳಿದೆನು.

**ಮಧು·**—ಬಹು ಸಂತೋಷ ಕೇಳಬೇಕಾದುದೆಲ್ಲವನ್ನೂ ಸಂಕೋಚ ಪಡದೆ ಕೇಳು. ಎಲ್ಲವನ್ನೂ ನಿಜವಾಗಿ ಹೇಳುವೆನು.

**ವಾಮನ —** ತಮ್ಮ ಜ್ಯೇಷ್ಠಪತ್ನಿಯ ತವರ್ಮನೆಯೆಲ್ಲಿರುವುದು?

**ಮಧು —** ಕನಕಗಿರಿ ದುರ್ಗದಲ್ಲಿ.

**ವಾಮನ —** ಕೇಳಿ ಬಲ್ಲೆನು. ಯಾರ ಮನೆತನದಲ್ಲಿ ಹುಟ್ಟಿದವರು?

**ಮಧು:**—ಕನಕಗಿರಿದುರ್ಗಾಭಿಮಾನ ದೇವತೆಯ ಮುಖ್ಯೋಪಾಸಕರಾದ ಅಂಬಿಕಾತನಯರೆಂಬ ಸುಪ್ರಸಿದ್ಧ ಶ್ರೀಮಂತರೇ ನಮ್ಮ ಮಾವಂದಿರು.

**ವಾಮನ —**ಅವರನ್ನು ಒಂದೆರಡುಸಲ ನೋಡಿರುವೆನು. ಅವರಿಗೆ ಲಲಿತಾದೇವಿಯು ಸುಪ್ರಸನ್ನೆಯಾಗಿರುವಳೆಂದು ತಿಳಿದವರೆಲ್ಲರೂ ಹೇಳುವರು.

**ಮಧು —** ಅವರ ಏಕಮಾತ್ರಪುತ್ರಿಯೇ ನನ್ನ ಜ್ಯೇಷ್ಠಪತ್ನಿ. ಅವಳ ಹೆಸರೂ ತಂದೆಯ ಉಪಾಸ್ಯದೇವತೆಯ ಹೆಸರೇ ಆಗಿರುವುದು.

**ವಾಮನ —** ಹಾಗಾದರೆ ಈಗ ಅವರು ಕನಕಗಿರಿಗೆ ಹೋಗಿರುವರೆ?

**ಮಧು —** ಅಹುದು.

**ವಾಮನ:**— ಇಲ್ಲಿಂದ ಕನಕಗಿರಿಗೆ ಹೋಗುವ ಮಾರ್ಗವು ಸುಗಮವಾಗಿರುವುದಷ್ಟೆ?

**ಮಧು:**— (ಈ ಪ್ರಶ್ನೆಯಿಂದ ಒಂದು ಬಗೆಯಆತಂಕವುಂಟಾಗಲು

ನಿಟ್ಟುಸಿರುಬಿಟ್ಟು) ಎಲ್ಲಿ ಬಂತಪ್ಪ! ಉದ್ದಕ್ಕೂ ಗುಡ್ಡದದಾರಿ. ಅಲ್ಲಿ ಗಲ್ಲಿಗೆ ಅಡ್ಡ ಹಳ್ಳಗಳೂ, ಮುಳ್ಳು ಮೆಳೆಗಳೂ ಇರುವವು. ಅವೆಲ್ಲವನ್ನೂ ಹಾಯ್ದು ಬಳಸಿ ಸುತ್ತಿಸುತ್ತಿ ಹೋಗಬೇಕು. ಅಲ್ಲಿಗೆ ಹೋಗಿ ಬರುವು ದೆಂದರೆ ಬಹು ಕಷ್ಟ. ಅಂಚೆಯುವರೂ ವಾರಕ್ಕೆರಡು ಸಲವೇ ಅಲ್ಲಿಗೆ ನಿರ್ವಾಹವಿಲ್ಲದೆ, ಬಹು ಕಷ್ಟಪಟ್ಟು ಹೋಗಬೇಕಾಗಿರುವುದು.

**ವಾಮನ:—** ಹಾಗಿದ್ದರೆ, ತಮ್ಮ ಮನೆಯವರು ಹೇಗೆ ಪ್ರಯಾಣ ಮಾಡಿದರು? ಸಹಾಯಕ್ಕೆ ಹೋಗಿದ್ದವರಾರು? ಇಲ್ಲಿಗೆ ಎಷ್ಟುದಿನದ ಪ್ರಯಾಣವಾಗಬಹುದು?

**ಮಧು —** ಅಯ್ಯ! ಇಲ್ಲಿಗೆ ನಾಲ್ಕು ದಿನದ ಪಯಣವಾಗುವುದು. ಅವಳು ಪಾಲ್ಕಿಯಲ್ಲಿ ಪ್ರಯಾಣಮಾಡಿರುವಳು. ಸಹಾಯಕ್ಕೆ ಮನೆಯಲ್ಲೇ ಇದ್ದ ಹದಿನಾರು ಮಂದಿ ಬೋಯಿಗಳೂ, ಒಬ್ಬಳು ದಾದಿಯೂ ಹೋಗಿ ರುವರು.

**ವಾಮನ —** ಕಾಡುಮೃಗಗಳ ಬಾಧೆಯನ್ನು ತಪ್ಪಿಸಿಕೊಳ್ಳುವುದ ಕ್ಕಾಗಿ ಆಯುಧವೇನಾದರೂ ಅವರ ಹತ್ತಿರದಲ್ಲಿದ್ದಿತೋ?

**ಮಧು —** ಬೋಯಿಗಳ ಬಳಿಯಲ್ಲಿ ಬಲವಾದ ದೊಣ್ಣೆಗಳಿದ್ದು ವಲ್ಲದೆ, ಮತ್ತಾವುದೂ ಇರಲಿಲ್ಲ.

**ವಾಮನ —** ಅವರು ಪ್ರಯಾಣವನ್ನು ಬೆಳೆಯಿಸಿದ ಬಳಿಕ ಸಮಾ ಚಾರವೇನೂ ಬರಲಿಲ್ಲವೇ?

**ಮಧು —** ಇಲ್ಲ. ಸಮಾಚಾರವೇನೆಂದು ತಿಳಿದುಬರಲು ಮನೆಯ ಇಬ್ಬರು ಆಳುಗಳನ್ನೂ ಕಳಿಹಿದೆನು. ಅವರು ಹೋಗಿ ಏಳೆಂಟು ದಿನಗಳಾ ದರೂ ಇನ್ನೂ ಬಂದಿಲ್ಲ. ಈ ದಿವಸವಾದರೂ ಬರುವರೋ ಹೇಗೋ ತಿಳಿಯದು.

**ವಾಮನ:—** ಹಾಗಿದ್ದರೆ ಆಲೋಚಿಸತಕ್ಕ ವಿಷಯವೇ ಸರಿ. ಆದರೆ ಅವರು ಪ್ರಯಾಣಮಾಡಿದ ಏಳೆಂಟು ದಿನಗಳ ಮೇಲೆ ತಮ್ಮ ಯಜಮಾನರು ಕಾಲಾಧೀನರಾದರಲ್ಲವೆ?

**ಮಧು —** ಅಹುದು.

**ವಾಮನ —** ಅವರು ದೇಹಾಲಸ್ಯದಲ್ಲೇನಾದರೂ ಇದ್ದರೋ?

**ಮಧು** — (ದುಃಖಸ್ಮರಣೆಯಾದುದರಿಂದ ನಿಟ್ಟುಸಿರು ಬಿಟ್ಟು–) ಅಯ್ಯ! ದೇಹಾಲಸ್ಯವೆಂಬುದನ್ನು ಅವರು ಹುಟ್ಟಿದುದು ಮೊದಲು ಕಂಡವರೇ ಅಲ್ಲ. ಅಂತಹ ಮಹನೀಯರು ಈ ಕಾಲದಲ್ಲಿ ಕೇವಲ ವಿರಳರು. ವಯೋಧರ್ಮಸಹಜವಾದ ದೃಷ್ಟಿಮಾಲಿನ್ಯವೊಂದಲ್ಲದೆ ಮತ್ತಾವ ರೋಗವೂ ಅವರಿಗಿರಲಿಲ್ಲ.

**ವಾಮನ** — ಹಿರಿಯ ಸೊಸೆ ಹೊರಟುಹೋದ ಬಳಿಕ, ಅವರ ಶುಶ್ರೂಷೆಯನ್ನು ಕಿರಿಯ ಸೊಸೆಯೇ ಮಾಡುತ್ತಿದ್ದರೋ? ಮತ್ತಾರಾದರೂ ಮಾಡುತ್ತಿದ್ದರೋ?

**ಮಧು** — ಪರಿಚಾರಕರೇ ನೋಡಿಕೊಳ್ಳುತ್ತಿದ್ದರು.

**ವಾಮನ** — ಕ್ಷಮಿಸಬೇಕು ಹಾಗಾದರೆ ಆಕಸ್ಮಿಕ ಮರಣವೇ ಸಂಭವಿಸಿರಬೇಕು. ಆದರೂ ಅವರ ಅಂತ್ಯಕಾಲದಲ್ಲಿ ಅವರಿಗೆ ವಾಂತಿ ಭೇದಿಯ ಚಿಹ್ನೆಯಾಗಲೀ ಮೂರ್ಛೆಯಾಗಲೀ ಉಂಟಾಗಿರಬಹುದು!

**ಮಧು** — ಚಕಿತನಾಗಿ–' ಕಂಡಂತೆಯೇ ಹೇಳುವೆಯಲ್ಲ. ನಿನಗೆ ಯಾರಾದರೂ ಹೇಳಿರಬಹುದೇ? ಇಲ್ಲವೆ ನಿನ್ನ ತರ್ಕಶಕ್ತಿಯಿಂದಲೇ ಇದನ್ನು ಊಹಿಸಿರುವೆಯಾ? ಹಾಗಿದ್ದರೆ ನಿನ್ನ ತರ್ಕಶಕ್ತಿ ಅಪ್ರತಿಮವು!

**ವಾಮನ** — ವಾಚಾಳಕತೆಗೆ ಕ್ಷಮಿಸಬೇಕು ನಾನಿಲ್ಲಿಗೆ ಹೊಸಬನಾದುದರಿಂದ ಯಾರನ್ನೂ ಕೇಳಿ ತಿಳಿದುಕೊಳ್ಳಲಾಗಿಲ್ಲವೆಂದೂ ಇಷ್ಟು ಬೇಗ ನನಗಿಲ್ಲಿ ಅಂತಹ ಆಪ್ತರೂ ಗೋಚರಿಸಿಲ್ಲವೆಂದೂ ಬೇರೆ ಅರಿಕೆ ಮಾಡಬೇಕೇ? ಪ್ರಾರಂಭದಿಂದಲೂ ನನಗೆ ಯಾವ ವಿಷಯವನ್ನೇ ಆಗಲಿ, ಕೂಲಂಕಷವಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲವು. ಇದು ಸಾಮಾನ್ಯವಾಗಿಊಹಿಸಿಕೊಳ್ಳಬಹುದಾದ ವಿಷಯವು. ಇದರಲ್ಲಿ ತಪ್ಪಿದ್ದರೂ ತಿಳಿಸಬೇಕು.

**ಮಧು** — ಅಯ್ಯ! ನಿನ್ನ ಬುದ್ಧಿಶಕ್ತಿ, ಊಹಾಪೋಹ, ವಿನಯಶೀಲತೆ ಇವುಗಳಿಗಾಗಿ ನಾನು ಬಹಳ ಸಂತೋಷಪಡುವೆನು. ಇದರಲ್ಲಿ ನಿನ್ನ ಊಹೆಯೇನೂ ತಪ್ಪಾಗಿಲ್ಲ. ಅವರ ಉತ್ಕ್ರಮಣಕಾಲಕ್ಕೆ ಮೊದಲು ಎಂದರೆ– ಆ ದಿನದ ಬೆಳಗಿನಿಂದಲೂ ಅವರ ಸ್ಥಿತಿ ವಿಪರೀತವಾಗಿ ಬುದ್ಧಿ ಭ್ರಮೆಯುಂಟಾಗಿದ್ದಿತು. ಅಲ್ಲದೆ ಆ ದಿನ ಒಂದೆರಡು ಸಲ ಭೇದಿಯೂ ರಕ್ತ

ರಕ್ತವೇ ವಾಂತಿಯೂ ಆಯಿತು. ಅಲ್ಲದೆ ಸಾವುದಕ್ಕೆ ನಾಲ್ಕಾರು ನಿಮೇಷಕ್ಕೆ ಮೊದಲು, ಕಂಪವಾಯು ಕಾಣಿಸಿಕೊಂಡು, ದೇಹವೆಲ್ಲವೂ ನೀಲದಬಣ್ಣಕ್ಕೆ ತಿರುಗಿ, ಅದರೊಡನೆಯೇ ಪ್ರಾಣವಾಯುವೂ ಹಾರಿಹೋಯಿತು. ಇನ್ನು ಅಂತಹ ಸದ್ವೈದ್ಯರನ್ನು ಕಾಣುವುದು ನನ್ನ ಪಾಲಿಗೆ ದುರ್ಲಭವಾಯಿತು.

**ವಾಮನ.**— ಕಾಲವೇ ವ್ಯತ್ಯಸ್ತವಾಗಿರುವುದು. ಅಂತಹ ಪುಣ್ಯಾ ಪುರುಷರಿಗೂ ಇಂತಹ ಶ್ಲೇಷ್ಮವಾತರೋಗಗಳ ಬಾಧೆಯುಂಟಾದುದು ಶೋಚ ನೀಯ ವಿಷಯವೇ ಸರಿ, ಆದರೆ, ತಮ್ಮ ಜ್ಯೇಷ್ಠಪತ್ನಿಯವರು, ತಮ್ಮ ಹಿರಿ ಯರ ಮರಣ ವೃತ್ತಾಂತವನ್ನು ಕೇಳಿ, ಅವರಿಗೂ ಸೇವಿಸುತ್ತಿದ್ದ ತಮಗೆ– ಅವರ ಅಂತ್ಯಕಾಲದ ಸೇವೆ ದೊರೆಯದೆ ಹೋಯಿತೆಂದು ಖೇದಪಡದೆ ಇರ ಲಾರರು. ಆದರೂ ಯತ್ನವಿಲ್ಲದ ಕಾರ್ಯವಾಗಿರುವುದು. ಇಷ್ಟು ದೂರ ನಾನು ಮರ್ಯಾದೆಯನ್ನು ಮೀರಿ, ಪೂರ್ಣ ಸ್ವಾತಂತ್ರ್ಯವನ್ನು ವಹಿಸಿದುದ ಕ್ಕಾಗಿ ಮತ್ತೆ ಮತ್ತೆಯೂ ಕ್ಷಮೆಯನ್ನು ಕೇಳಿಕೊಳ್ಳುವೆನು.

**ಮಧು.**— ಅಯ್ಯಾ! ನೀನು ಹೇಳಿಕೇಳಿದುದರಲ್ಲಿ ಮರ್ಯಾದೋ ಲ್ಲಂಘನೆಯೇನೂ ತೋರಲಿಲ್ಲ ಇದೆಲ್ಲವೂ ನನಗೆ ಸಮ್ಮತವೂ, ಸಮಾಧಾ ನಕರವೂ ಆಗಿದೆ. ಏಕೆಂದರೆ– ಪಿತೃ ಕೈಂಕರ್ಯಕ್ಕಾಗಿ ನಾನು ರಜಾ ಪಡೆದು ಈಗಾಗಲೇ ಹದಿನೇಳು ದಿನಗಳಾದುವು ಇನ್ನೂ ನಾಲ್ಕಾರು ದಿನಗಳ ಅವಧಿಯೂ ಇರುವುದು. ಈ ಮಧ್ಯದಲ್ಲಿ ನನ್ನ ಕಷ್ಟ ಸುಖಗಳನ್ನು ಕೇಳಿ, ಸಮಾಧಾನವನ್ನು ಹೇಳತಕ್ಕ ಸುಹೃದರಾಗಲೀ, ನನ್ನ ಬಳಿಯಲ್ಲಿ ವ್ಯಾಸಂಗಿ ಸುತ್ತ ನನ್ನ ಮನಸ್ಸಂತೋಷಪಡಿಸುತ್ತಿರುವ ಈ ನಗರದ ಸಂಸ್ಕೃತಪಾಠ ಶಾಲೆಯ ವಿದ್ಯಾರ್ಥಿಗಳಾಗಲೀ ಯಾರೂ ನನ್ನಲ್ಲಿ ಬಂದು ಮಾತನಾಡುವಷ್ಟು ಅವಕಾಶವುಂಟಾಗಿಲ್ಲ ಇದರಿಂದ ನನ್ನ ದುಃಖವು ಹೊರಗೆ ಬೀಳಲಾರದೆ ಒಳಗೇ ಬಹುವಾಗಿ ಕುದಿಯುತ್ತಿದ್ದಿತು ದೈವಯೋಗದಿಂದ ನಿನ್ನಂಥ ಪ್ರತಿಭಾಶಾಲಿಯೂ, ವಿನಯ ಸಂಪನ್ನನೂ ಆದ ಶಿಷ್ಯನು ಲಭಿಸಿದುದಕ್ಕಾಗಿ ಅಧಿಕವಾಗಿ ಸಂತೋಷಪಡುತ್ತಿರುವೆನು.

**ವಾಮನ:**— ಪೂಜ್ಯಪಾದರೇ! ತಮ್ಮ ಈ ಅನಿಮಿತ್ತವಾತ್ಸಲ್ಯ ವಿಶೇಷದಿಂದ ಧನ್ಯನಾದೆನು. ಹೀಗೆಯೇ ನನ್ನನ್ನು ನಿರಂತರವೂ ಅನು ಗ್ರಹಿಸುತ್ತಿರಬೇಕೆಂಬುದೇ ನನ್ನ ಪ್ರಾರ್ಥನೆಯಲ್ಲದೆ, ಪರಮಪೂಜ್ಯರಾದ

ತಮ್ಮ ಮತ್ತು ತಮ್ಮ ಪರಿವಾರದವರ ಶುಶ್ರೂಷೆಯನ್ನು ಮಾಡಿ, ನನ್ನ ಜನ್ಮ ಸಾಫಲ್ಯಮಾಡಿಕೊಳ್ಳಬೇಕೆಂದಿರುವ ನನ್ನ ಸಂಕಲ್ಪವು ಸಿದ್ಧಿಸುವಂತೆ, ಆಶೀರ್ವದಿಸಬೇಕೆಂದೂ ಕೋರುವೆನು.

**ಮಧು**:— ಅಯ್ಯಾ ! ನಿನ್ನ ಪ್ರತಿಯೊಂದು ನುಡಿಯೂ ನಿನ್ನಲ್ಲಿರುವ ದೃಢತರವಾದ ದೈವಭಕ್ತಿ, ಪರದುಃಖಸಹಾನುಭೂತಿಯನ್ನು ಪ್ರಕಾಶಪಡಿಸತಕ್ಕುದಾಗಿದೆ. ಇಂತಹ ಸತ್ಯಸಂಕಲ್ಪನಾದ ನಿನಗೆ ದೈವ ಸಾಹಾಯ್ಯಕ್ಕೂ, ಗುರುಜನರ ಅನುಗ್ರಹಕ್ಕೂ ಕೊರತೆಯೇನು ?

**ವಾಮನ**— ಅನುಗೃಹೀತನಾದೆನು. ಅಪ್ಪಾದರೆ ನಾಕು. ನಾನಿನ್ನು ಹೋಗಿ ನಗರದಲ್ಲಿ ಎಲ್ಲಿಯಾದರೂ ವಸತಿಯನ್ನು ಕಲ್ಪಿಸಿಕೊಳ್ಳುವೆನು. ಸನ್ನಿಧಾನಕ್ಕೆ ಈಗ ಉಂಟಾಗಿರುವ ಚಿಂತೆ ನಿವೃತ್ತಿಯಾದಬಳಿಕ ನನ್ನ ವಿದ್ಯಾವ್ಯಾಸಂಗಕ್ಕೆ ಪ್ರಾರಂಭಮಾಡುವುದೊಳಿತಲ್ಲವೇ ?

**ಮಧು**:— ಬುದ್ಧಿವಂತನಾದ ನಿನ್ನ ಇಷ್ಟದಂತೆಯೇ ಆಗಲಿ. ದೈವಾನುಗ್ರಹವಿದ್ದರೆ, ನಾನೂ ನನ್ನ ಪತ್ನಿಯನ್ನು ಬೇಗ ಬರಮಾಡಿಕೊಂಡು, ನಿನ್ನನ್ನು ಸಮೀಪದಲ್ಲಿಯೇ ಇರಿಸಿಕೊಳ್ಳುವೆನು.

( ಬ್ರಹ್ಮಚಾರಿ,— ವಾಮನಗೋಸ್ವಾಮಿ, ಮತ್ತೊಂದುಸಲ ಕೈ ಮುಗಿದು, ಕೆಳಗಿರಿಸಿದ್ದ ಪುಸ್ತಕಗಳ ಗಂಟನ್ನು ಮತ್ತೆ ಕವುಂಕುಳಲ್ಲಿರಿಸಿಕೊಂಡು 'ವಿಚಾರವಿಮರ್ಶೆಯಿಂದ ವಸ್ತುಸಂಗ್ರಹವಾಯಿತೆಂದು' ತನ್ನಲ್ಲಿಯೇ ಹೇಳಿಕೊಳ್ಳುತ್ತ ಹೊರಟುಹೋದನು. )

ಶ್ರೀ:

# ಪಂಚಮ ಪರಿಚ್ಛೇದ.

"ನೂನಂ ವ್ಯಾಕರಣಂ ಕೃತ್ಸ್ನಮನೇನ ಬಹುಧಾಶ್ರುತಮ್ ||
ಬಹುವ್ಯಾಹರತಾನೇನ ಕಿಂಚಿದಪಶಬ್ದಿತಮ್ ||"

(ರಾಮಾಯಣ)

(ಶಂಕಾತಂಕ ವಿಚಾರ)

"ದುರ್ಗಾಪ್ರಸಾದ! ವಿಶೇಷವೇನು? ವಿಕ್ರಮನಲ್ಲಿಗೇನಾದರೂ ಹೋಗಿದ್ದೆಯಾ?"

"ವಿಕ್ರಮಸೇನನನ್ನು ನೋಡಿದ್ದೆನು. ಆತನು, ಪ್ರಕೃತದಲ್ಲಿ ತಾನು ಕೌಟುಂಬಿಕ ಪ್ರಯಾಸಗಳಿಂದ ಅಧಿಕವಾಗಿ ಬಳಲಿರುವೆನೆಂದೂ, ಈಗ ತನ್ನಿಂದ ಯಾರಿಗೂ ಯಾವ ಉಪಕಾರವನ್ನಾಗಲೀ ಸಹಾಯವನ್ನಾಗಲೀ ಮಾಡುವ ಭಾಗದಲ್ಲಿ ತನಗೆ ನಿರ್ವಾಹಶಕ್ತಿಯಿಲ್ಲನೆಂದೂ ಹೇಳಿದನು."

"ಹಾಗಾದರೆ, ಉಪಾಯವೇನು?"

ಈ ಬಗೆಯ ಪ್ರಶ್ನೋತ್ತರಗಳು ಮೇಲ್ಮಾಳಿಗೆಯಲ್ಲಿ ಸುಖಾಸನಾಸೀನರಾಗಿ ಕುಳಿತಿದ್ದ ದಯಾನಾಥಠಾಕೂರ, ದುರ್ಗಾಪ್ರಸಾದ ಇವರಿಬ್ಬರಿಗೂ ನಡೆಯುತ್ತಿದ್ದುವು. ಇಬ್ಬರ ಮುಖದಲ್ಲಿಯೂ ವ್ಯಗ್ರತೆಯ ಚಿಹ್ನಗಳು ಕಾಣುತ್ತಿದ್ದುವು.

**ದಯಾನಾಥ**— ಏಕೆ ಉತ್ತರವಿಲ್ಲ? ಪ್ರಸಾದ! ಈಗ ಉಪಾಯವೇನು?

**ದು. ಪ್ರ.**— 'ಕರ್ತವ್ಯಜಾಗ್ರತೆ ಮತ್ತು ಕಾಲನಿರೀಕ್ಷೆಗಳೇ ಉಪಾಯ.'

**ದಯಾನಾಥ:**— ಹಾಗಾದರೆ, ಈ ವಿಷಯದಲ್ಲಿ ವಿಕ್ರಮಸೇನನು ಕೈಬಿಟ್ಟಂತೆಯೇ?

**ದು. ಪ್ರ.**— ಕೈ ಬಿಟ್ಟನೆಂದಾಗಲೀ, ಕೈ ಕಟ್ಟಿ ನಿಲ್ಲುವನೆಂದಾಗಲೀ ಹೇಳಲಾರೆನು. ಸದ್ಯಸ್ಥಿತಿಯಲ್ಲಿ, ಆತನ ಸಹಾಯವುಂಟಾಗುವುದೆಂಬ ಆಶೆ, ಮಾನಸಿಕವಾಗಿರಬೇಕೆಂದು ಹೇಳಬಲ್ಲೆನು.

(ಇಬ್ಬರ ಮಾತಿನ ಮಧ್ಯದಲ್ಲಿಯೇ ಮನೆಗಾವಲಿನ ಗೊಲ್ಲನು, ಮತ್ತೊಬ್ಬ ಚಾರನೊಡನೆ ಬಂದು ವಿನಯದಿಂದ) 'ಮಹಾಸ್ವಾಮಿಾ! ಸನ್ನಿಧಾನಕ್ಕೆ ಈ ಚಾರನು ವರ್ತಮಾನವನ್ನು ತಂದಿರುವನು. (ಎಂದು ಹೇಳಿ ಹೊರಟು ಹೋದನು.)

**ದಯಾನಾಥ:**— (ಕುತೂಹಲದಿಂದ–) 'ಅಯ್ಯ! ನೀನಾರಕಡೆಯುವನು, ಬಂದುದೇನು?

**ಚಾರ.**—ನಾನು ಅನಾಥಬಂಧು ವಿಕ್ರಮಸೇನರಾಯರ ಕಡೆಯವನು.

**ದಯಾ** — (ಆತುರದಿಂದ–) 'ಏನುಬಂದೆ? ಅನಾಥಬಂಧುಗಳಿಗೆ ಕುಶಲವಷ್ಟೆ?'

**ಚಾರ** — ನಾನು ಏನು ಹೇಳಲಿ! ಅವರು ಸ್ವಹಸ್ತದಿಂದ ಬರೆದು ಕೊಟ್ಟಿರುವ ಈ ಪತ್ರಿಕೆಯಿಂದಲೇ ಎಲ್ಲವನ್ನೂ ತಿಳಿಯಬೇಕು.

(ಎಂದು ಪತ್ರಿಕೆಯನ್ನು ಭಯಭಕ್ತಿಭಾವದಿಂದ ದಯಾನಾಥನ ಕೈಗೆ ಕೊಟ್ಟನು.)

ದಯಾನಾಥನು—ತ್ವರೆಯಿಂದ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು, ಅದಕ್ಕೆ ಹಾಕಿದ್ದ ಅಂಟನ್ನು ಬಿಡಿಸಿ ಪತ್ರವನ್ನು ದುರ್ಗಾಪ್ರಸಾದನು ಕೇಳುವಂತೆ ಗಟ್ಟಿಯಾಗಿ ಅದರಲ್ಲಿದ್ದ ಒಕ್ಕಣೆಯನ್ನು ಹೀಗೆ ವಾಚಿಸಿದನು.

ಪೂಜ್ಯಪಾದರಲ್ಲಿ—

ಆಶ್ರಿತನ ವಂದನೆ ಮತ್ತು ನಿವೇದನಗಳು.

ಆಯುಷ್ಮಂತನಾದ ದುರ್ಗಾಪ್ರಸಾದನ ಮೂಲಕ ಅನುಗ್ರಹಿಸಿದ ನಿರೂಪವು, ನನಗೆ ಮೊನ್ನೆಯ ರಾತ್ರಿಯೇ ಮುಟ್ಟಿತು. ತಮ್ಮಿಂದ ನಿರೂಪಿಸಲ್ಪಡುವುದಕ್ಕೆ ಮೊದಲೇ ಅದನ್ನು ನಿರ್ವಹಿಸಬೇಕಾದುದು ನನ್ನ ಕರ್ತವ್ಯವಾಗಿದ್ದಿತು. ತಮ್ಮ ನಿರೂಪವು ಮುಟ್ಟಿದಬಳಿಕವಾದರೂ ಅದನ್ನು ಮಾಡಿ ಕೃತಾರ್ಥನಾಗಬೇಕೆಂದರೆ, ಅದಕ್ಕೂ ಅವಕಾಶವನ್ನು ಕೊಡದೆ, ಹಲವು ತಾಪತ್ರಯಗಳು ಕಾಡುತ್ತಿರುವವು. ಇದರಿಂದ ಹೇಗೂ ನನಗೆ ಬಿಡುವಿಲ್ಲವೆಂದೇ ಭಾವಿಸಬೇಕಾಗಿದೆ. ಏನುಮಾಡಲಿ?

ಪ್ರಸಾದನು ಹೊರಟುಹೋದ ದಿನವೇ ನನಗೆ ಹೃತ್ಕೋಶದಲ್ಲಿ ಒಂದು ಬಗೆಯ ಯಾತನೆಯುಂಟಾಗಿ, ಅದು ಕ್ಷಣಕ್ಷಣಕ್ಕೂ ವಿಷವೇರಿದಂತೆ ಏರಿ

ಬಂದು, ಈಗ ಶ್ವಾಸೋಚ್ಛ್ವಾಸಕ್ಕೂ ಕಷ್ಟವಾಗಿ ತಿರುಗಿದೆ. ಇದರ ಬಾಧೆಯಿಂದ ಚಲನವಲನಕ್ಕೂ ಅವಕಾಶವಿಲ್ಲದೆ, ಚಿಂತೆ ಮತ್ತು ವಿಚಾರಗಳಲ್ಲಿ ಮಗ್ನನಾಗಿ ಮಾಡಿರುವುದು. ಇಂತಿರುವ ನನ್ನಿಂದ ಯಾರಿಗೇ ಆಗಲೀ ಯಾವ ಸಹಾಯವಾದೀತೆಂಬ ಶಂಕೆಯೊಂದು ನನ್ನನ್ನು ಎಡೆಬಿಡದೆ ಕಾಡುತ್ತಿರುವುದು

ಇಷ್ಟಾಗಿದ್ದರೂ ನನ್ನ ಪತ್ನಿ—ನನ್ನ ಛಾಯಾನುವರ್ತಿನಿ—ಆರೋಗ್ಯದಲ್ಲಿರುತ್ತಿದ್ದ ಪಕ್ಷದಲ್ಲಿ ನನಗಾಗಲೀ ನನ್ನನ್ನೇ ಆಶ್ರಯಿಸಿ ಜೀವಿಸುತ್ತಿರುವ ದೀನಾನಾಥವರ್ಗಕ್ಕಾಗಲೀ ಇಷ್ಟು ಬೇಗೆಯುಂಟಾಗುತ್ತಿರಲಿಲ್ಲ. ಈಗ ಅದಕ್ಕೂ ಮಾರ್ಗವಿಲ್ಲ. ಆ ನನ್ನ ಪತ್ನಿ ನನ್ನ ರೋಗದ ಮೂಲವನ್ನು ತಿಳಿದುಬರಲು, ಪರೋಕ್ಷಜ್ಞಾನಿಯೊಬ್ಬನಬಳಿಗೆ ಹೋಗಿ ಬರುತ್ತಿದ್ದು ದಾರಿಯಲ್ಲಿ ಸುಂಟರುಗಾಳಿಯ ಹೊಡೆತಕ್ಕೆ ಹೆದರಿಬಿದ್ದು, ಬಹುವಾಗಿ ನೊಂದು ಹೇಗೋ ಮನೆಗೆ ಬಂದುಸೇರಿ, ಮೈ ಮರೆದು ಮಲಗಿದಳು, ಇನ್ನೂ ಜಾಗ್ರದವಸ್ಥೆಗೆ ಬಂದಿಲ್ಲ. ಹೀಗೆ ರೋಗಭೀತಿಯಿಂದ ಪರಿತಪಿಸುತ್ತಿರುವ ನಮ್ಮಿಬ್ಬರನ್ನೂ ನೋಡಿ, ಅನಾಥಬಾಲಕರು ಪೇಚಾಟಪಡುತ್ತಿರುವದನ್ನು ಎಷ್ಟು ವಿವರಿಸಿ ಬರೆದರೂ ಸ್ವಲ್ಪವಾಗಿಯೇ ಕಾಣುವುದು.

ಪರಮಪೂಜ್ಯ !

ಈ ವೇಳೆಯಲ್ಲಿ ತಮ್ಮಿಂದ ನಮಗಾಗಬೇಕಾದ ಸಹಾಯವೆಂದರೆ—ಈ ಪತ್ರಿಕಾವಲೋಕನಮಾತ್ರದಿಂದ ತಾವಾಗಲೀ, ಪ್ರಸಾದನಾಗಲೀ ಕಾತರರಾಗಿ ಕರ್ತವ್ಯವನ್ನು ಬಿಟ್ಟು ಓಡಿಬರುವುದು ಉಚಿತವಲ್ಲವೆಂದೂ ಶಾಂತಸ್ಥಿತಿಯಲ್ಲಿದ್ದು ನಮ್ಮ ಕ್ಷೇಮಕ್ಕಾಗಿ ತಾವು ಅಲ್ಲಿದ್ದೇ ಆಶೀರ್ವದಿಸುತ್ತಿರಬೇಕೆಂದೂ ಕೇಳಿಕೊಳ್ಳುವೆನಲ್ಲದೆ ನಮ್ಮಿಬ್ಬರ ಚಿಕಿತ್ಸೆಗಾಗಿ, ನಮ್ಮ ಪರಮಾಪ್ತಬಾಂಧವರಾದ ರಾಜವೈದ್ಯ ಅಭಿನವಧನ್ವಂತರೀ ಮಹಾಶಯರನ್ನು, ಈ ಚಾರನೊಡನೆ ಚಿಕಿತ್ಸಾಸಾಧನ ಸಮೇತರಾಗಿ ರಾತ್ರಿ ಎಂಟು ಗಂಟೆಗೆ ಸರಿಯಾಗಿ ಇಲ್ಲಿಗೆ ಬಂದು ಸೇರುವಂತೆ ಹೇಳಿಕಳಿಹಬೇಕೆಂದೂ ಪ್ರಾರ್ಥಿಸುವೆನು. ಹಾಗೆ ಅವರು ಬರುವವರಾಗಿದ್ದರೆ, ಜತೆಯಲ್ಲಿ ಮತ್ತಾರನ್ನೂ ಕರೆತರಲಾಗದೆಂದು ಖಂಡಿತವಾಗಿ ಹೇಳಿರಬೇಕು. ಅಲ್ಲದೆ, ಕ್ಲಪ್ತಕಾಲಕ್ಕೆ ಮೊದಲಾಗಲೀ ಅದನ್ನು ಮೀರಿಯಾಗಲೀ ಬಂದರೆ, ನಮ್ಮ ಸ್ಥಿತಿಯನ್ನು ಕಂಡು ಹಿಡಿಯಲು

ಸಾಧ್ಯವಾಗಲಾರದು. ಮತ್ತೊಮ್ಮೆ ಹೇಳುವದೇನಂದರೆ, ನಮ್ಮ ಪ್ರಸಾದನು ಕಾತರನಾಗಿ ಇಲ್ಲಿಗೆ ಓಡಿಬರಲು ಪ್ರಯತ್ನಿಸ ಬಹುದಾದುದರಿಂದ, ಸರ್ವ ಪ್ರಕಾರದಿಂದಲೂ ಅವನಿಗೆ ಸಮಾಧಾನಹೇಳಿ ನಿಲ್ಲಿಸಿಕೊಳ್ಳಬೇಕಲ್ಲದೆ, ಇಲ್ಲಿಗೆ ತಾವಾಗಲೀ, ಅವನಾಗಲೀ ಬರುವುದರಿಂದ ನಮ್ಮೆಲ್ಲರಿಗೂ ಅನಿಷ್ಟ ಸಂಭವಿಸಬಹುದೆಂದು ತಿಳಿದು, ಸ್ಥಿರತೆಯಿಂದ ನನಗೆ ಅಭ್ಯುದಯವಾಗು ವಂತೆ ಹಾರೈಸುತ್ತಿರಬೇಕೆಂದು ಕೋರುವೆನು. ಮುಖ್ಯವಾಗಿ ತಮ್ಮ ಅನು ಗ್ರಹವಿದ್ದರೆ ಕ್ಷೇಮವಾಗುವುದೆಂದು ನಂಬಿ, ಕಲ್ಯಾಣವನ್ನು ನಿರೀಕ್ಷಿಸುತ್ತಿ ರುವ ವಿಧೇಯನಾದ ವಿಕ್ರಮಸೇನನ ವಂದನೆಗಳು."

(ಪತ್ರಿಕಾವಲೋಕನದಿಂದ ದಯಾನಾಥನು ಅನುಕಂಪಿತನಾದನು. ದುರ್ಗಾಪ್ರಸಾದನು ಅವನ ಮುಂದೆ ಮೌನದಿಂದ ಕಣ್ಣೀರು ಸುರಿಸಲಾರಂಭಿ ಸಿದನು. ಅವನನ್ನು ಕುರಿತು ದಯಾನಾಥನು) 'ಪ್ರಸಾದ? ವಿಚಾರ ವನ್ನು ತಿಳಿದೆಯಷ್ಟೆ, ಈಗ ನಾವು ಮಾಡಬೇಕಾದುದೇನು? ನಮ್ಮನ್ನು ಅಲ್ಲಿಗೆ ಬರಲಾಗದೆಂದು ಖಂಡಿತವಾಗಿ ನಿಷೇಧಿಸಿರುವನು. ಇದಕ್ಕಿನ್ನಾವ ಉತ್ತರವನ್ನು ಕೊಡಬಹುದು?' ಎಂದು ಕೇಳಿದನು

**ದು. ಪ್ರ —** (ಸ್ವಲ್ಪ ಹೊತ್ತು ಚಿಂತಿಸುತ್ತಿದ್ದು ಬಳಿಕ ತಲೆಯೆತ್ತಿ ಏನನ್ನೋ ನೆನೆದು–) 'ಎಲ್ಲಿ? ಪತ್ರಿಕೆಯನ್ನು ನಾನೊಂದುಸಲ ನೋಡಿ ಹೇಳುವೆನು.' ಎಂದನು.

**ದಯಾನಾಥ:—** (ಪತ್ರಿಕೆಯನ್ನು ಕೊಟ್ಟು–) 'ನಾವು ಅಲ್ಲಿಗೆ ಹೋಗಲಿಕ್ಕಾಗಲೀ ಅಲ್ಲದಿದ್ದರೆ ಅವರನ್ನೇ ಇಲ್ಲಿಗೆ ಕರೆತರಲಿಕ್ಕಾಗಲೀ ಏನಾ ದರೂ ಉಪಾಯವಿದ್ದರೆ ಚನ್ನಾಗಿ ನೋಡಿ ತಿಳಿದು ಹೇಳು.'

**ದು. ಪ್ರ:—** (ಕಾಗದವನ್ನು ಕೈಗೆಕೊಂಡು ಚನ್ನಾಗಿನೋಡಿ, ಬಳಿಕ ಮೆಲ್ಲನೆ) 'ಪತ್ರಿಕೆಯಲ್ಲಿರುವ ವಿಷಯವು ಚಿಂತೆಯನ್ನುಂಟುಮಾಡುವು ದಾದರೂ, ದೂರದರ್ಶಿಯಾದ ವಿಕ್ರಮಸೇನನ ವಿಷಯವಾಗಿ ಕಳವಳಪಡ ಬೇಕಾಗಿಲ್ಲ. ಕಾಲದೇಶವರ್ತಮಾನಗಳಿಗೆ ತಕ್ಕಂತೆ ನಡೆಯಬಲ್ಲ ಆತನು, ಇಷ್ಟು ಖಂಡಿತವಾದ ನಿರೂಪವನ್ನು ಕಳಿಹುವದಕ್ಕೆ ಯಾವುದೋ ಬಲವಾದ ಕಾರಣವೇ ಇರಬೇಕು. ಅಲ್ಲಿಯ ಸಂದರ್ಭ ವಿಶೇಷಗಳೇನೆಂಬುದನ್ನು ತಿಳಿಯದೆ, ನಾವು ಆವುದನ್ನೂ ದುಡುಕಿ ಮಾಡುವುದು ಸರಿಯಲ್ಲ. ಆತನ

ಕೋರಿಕೆಯಂತೆಯೇ ವೈದ್ಯನನ್ನು ಕಳಿಹಿದರೆ, ಉಳಿದ ವಿದ್ಯಮಾನಗಳೆಲ್ಲವೂ ಆತನ ಮುಖದಿಂದಲೇ ತಿಳಿದುಬರುವುವು.'

( ಇವರ ಮಾತಿಗೆ ಮಧ್ಯದಲ್ಲಿಯೇ ನಮ್ಮ ಪೂರ್ವಪರಿಚಿತನಾದ ಬ್ರಹ್ಮಚಾರಿ-ವಾಮನಗೋಸ್ವಾಮಿಶರ್ಮನೊಡನೆ ಇಪ್ಪತ್ತಮೂರು ಇಪ್ಪತ್ತನಾಲ್ಕು ವರ್ಷಗಳ ತರುಣನೊಬ್ಬನು ಅಲ್ಲಿಗೆ ಬಂದನು, ಸೂಚನೆಯನ್ನು ಕೊಡದೆಯೇ ತಾವು ಕುಳಿತಿದ್ದಲ್ಲಿಗೆ ಬಂದ ತರುಣರಿಬ್ಬರನ್ನೂ ನೋಡಿ ಕುಳಿತಿದ್ದವರು ವಿಸ್ಮಿತರಾಗಿ ನೋಡಿದರು. ಇವರ ಮನೋಭಾವವನ್ನು ತಿಳಿದ ಆ ತರುಣನು ದಯಾನಾಥನನ್ನು ಕುರಿತು “ ಅಣ್ಣಾ ! ಈತನು ಭಾವನಗರ ನಿವಾಸಿ, ವಿದ್ಯಾರ್ಜನೆಗಾಗಿ, ಈಗ ತಾನೇ ಇಲ್ಲಿಗೆ ಬಂದಿರುವನು. ಹೆಸರು ವಾಮನಗೋಸ್ವಾಮಿ, ಪರಮಸಾಧುಸ್ವಭಾವದವನು. ಹಿಂದೆ ನಾನು ಪ್ರವಾಸಿಯಾಗಿದ್ದ ಕಾಲದಲ್ಲಿ ನನಗೆ ಈತನು ಮಾಡಿದ ಸಹಾಯವು ಎಂದಿಗೂ ಮರೆಯುವಂತಿಲ್ಲ. ಇಂತಹ ಸನ್ಮಿತ್ರನು ದೈವಪ್ರೇರಣೆಯಿಂದ ಈ ಕಡೆಗೆ ಬಂದುದೂ, ಮತ್ತೆ ಮುಂದೆ ನನ್ನ ಸಹಾಧ್ಯಾಯಿಯಾಗಿರಲು ಸಂಕಲ್ಪಿಸಿರುವುದೂ ನನ್ನ ಸುಕೃತವೆಂದೇ ಭಾವಿಸುವೆನು. ಈತನು ಆಶ್ರಯಕ್ಕಾಗಿ ಇಲ್ಲಿಗೆ ಬಂದಿರುವುದರಿಂದ, ಆಪದ್ಬಂಧುವನ್ನು ಆದರಿಸಬೇಕೆಂದು ಇಲ್ಲಿಗೆ ಕರೆತಂದಿರುವೆನು. ಈತನಿಂದ ನಮಗೆ ಎಷ್ಟೋವಿಷಯಗಳು ತಿಳಿಯಬಹುದಾಗಿರುವುವು ” ಎಂದನು.

**ದಯಾ** — ' ಏನಯ್ಯಾ, ವಾಮನಗೋಸ್ವಾಮಿಶರ್ಮ ! ಈ ನನ್ನ ಸೋದರನ ಆಪ್ತನಾದ ನಿನಗೆ ಸುಸ್ವಾಗತವು. ನಿನ್ನಿಂದ ನಮಗೆ ಎಷ್ಟೋ ವಿಷಯಗಳು ತಿಳಿವುವೆಂದು ಇವನಾಡಿದುದು ಭಾವಗರ್ಭಿತವಾಗಿರುವುದು ?

**ವಾಮನ** — ಅನುಗೃಹೀತನಾದೆನು. ಸ್ವಾಮಿವಾಕ್ಯವು ನಿಜವು, ಮತ್ತೆ ಬೇಕೆಂದಾಗ ಸಿದ್ಧನಾಗಿರುವೆನು.

**ದಯಾ** – ಆಗಲಿ, ವಿಚಾರಮಾಡುವೆನು. (ತರುಣನನ್ನು ಕುರಿತು) ಕಮಲಾಕಾಂತ ! ನಿನ್ನ ಅಭಿಪ್ರಾಯವನ್ನು ಅನುಮೋದಿಸಿರುವೆನು. ಗೋಸ್ವಾಮಿಯು ಇಲ್ಲಿರಲಿ. ನೀನು ಇಲ್ಲಿರುವ ಚಾರನನ್ನು ನಮ್ಮ ರಾಜವೈದ್ಯ ಅಭಿನವಧನ್ವಂತರಿಯವರಲ್ಲಿಗೆ ಕರೆದುಕೊಂಡು ಹೋಗಿ, ಇವನೊಡನೆ ವಿಕ್ರಮಸೇನ ಕುಮಾರರವರ ಬಳಿಗೆ ಚಿಕಿತ್ಸಾಸಾಧನಗಳೊಡನೆ

ರಾತ್ರಿ ಎಂಟು ಘಂಟೆಗೆ ಸರಿಯಾಗಿ ಹೋಗಿ ಸೇರಬೇಕೆಂದೂ ಖಂಡಿತವಾಗಿ ಹೇಳಿ, ಚಾರನನ್ನು ಅಲ್ಲಿಯೇ ಬಿಟ್ಟು, ಅವರು ಹೊರಡುವುದನ್ನು ತಿಳಿದು ಬರಬೇಕು, ತಪ್ಪಬೇಡ.

**ಕಮಲಾ —** ವಿಕ್ರಮಸೇನನಲ್ಲಿಗೆ ರಾಜವೈದ್ಯರೇಕೆ ?

**ದಯಾನಾಥ:—** ಆತನಿಗೂ, ಆತನ ಪತ್ನಿಗೂ ದೇಹಾಯಾಸವಾಗಿ ರುವುದಂತೆ. ಕಾಗದವು ಬಂದಿರುವುದು

**ಕಮಲಾ —** ' ಈಗಲೇ ಹೊರಟೆನು ' ಭಾವಸೂಚಕವಾಗಿ ಬ್ರಹ್ಮ ಚಾರಿಯ ಮುಖವನ್ನು ನೋಡಿ ತಲೆದೂಗಿ ನಗುತ್ತ ಹೊರಟು ಹೋದನು.

**ದು. ಪ್ರ —** ( ಕುತೂಹಲದಿಂದ ಬ್ರಹ್ಮಚಾರಿವಾಮನಗೋಸ್ವಾಮಿ ಯನ್ನೇ ನೋಡುತ್ತ–) ಅಯ್ಯಾ ! ನೀನು ದೂರದೇಶದಿಂದ ಇಲ್ಲಿಗೆ ಬಂದಿ ರುವೆಯಷ್ಟೆ, ನೀನೊಬ್ಬನೇ ಬಂದಿರುವೆಯೋ ನಿನ್ನ ಜತೆಯಲ್ಲಿ ಯಾರಾದರೂ ಬಂದಿರುವರೋ ?

**ವಾಮನ —** ನನ್ನ ಜತೆಯಲ್ಲಿ ನನ್ನ ಪರಮಾಪ್ತ ಬಂಧುವೊಬ್ಬನು ಬಂದಿರುವನು.

**ದು. ಪ್ರ —** ಅವನಾರು ಬಾಲನೋ ? ತರುಣನೋ ? ಹೆಸರು ? ಮತ್ತು ವಯಸ್ಸು ?

**ವಾಮನ —** ಹೆಸರು ದುರ್ಗಾಚರಣ, ವಯಸ್ಸು ಹದಿನೆಂಟು.

**ದು. ಪ್ರ —** ನೀನು ಈಗ ಮಾಡಬೇಕಾಗಿರುವ ವ್ಯಾಸಂಗವು ಅವುದು ? ತರ್ಕವೋ ? ವ್ಯಾಕರಣವೋ ?

**ವಾಮನ —** (ತಲೆಬಾಗಿ ಸಂಕುಚಿತಸ್ವರದಿಂದ–) ತರ್ಕವ್ಯಾಕರಣ ಗಳು ಆಗಿರುವುವು. ದಂಡನೀತಿಯನ್ನು ಸಪ್ರಮಾಣವಾಗಿ ತಿಳಿದುಕೊಳ್ಳ ಬೇಕೆಂದೂ ಅದಕ್ಕೆ ಮೊದಲು ಪೂರ್ವೋತ್ತರ ಮೀಮಾಂಸೆಗಳನ್ನು ತಿಳಿಯ ಬೇಕೆಂದೂ ಇಚ್ಛೆ.

**ದು. ಪ್ರ —** ನಿನ್ನ ಬಂಧುವೋ ?

**ವಾಮನ —** ಅವನಿಗೆ ತಾತ್ವಿಕ, ನೈತಿಕ ಮತ್ತು ಸಾಮಾಜಿಕ ಶಿಕ್ಷಣಗಳಲ್ಲಿ ಪಾಂಡಿತ್ಯವನ್ನು ಹೊಂದಬೇಕೆಂಬ ಸಂಕಲ್ಪವಂತೆ. (ಎಂದು ತಡೆತಡೆದು ಹೇಳಿದನು.)

**ದು. ಪ್ರ** —(ವಾಮನನನ್ನೇ ನೋಡುತ್ತ ಮತ್ತೂ ಕುತೂಹಲ ದಿಂದ-) ಅಯ್ಯ! ನಿಮ್ಮಿಬ್ಬರಲ್ಲಿ ಯಾರಿಗೂ ವಸತಿ ದೊರೆತಿಲ್ಲವೇ?

**ವಾಮನ:**— ಇಲ್ಲ ನಿನ್ನೆಯಿಂದಲೂ ಅವರಿವರನ್ನು ನೋಡುವುದ ರಲ್ಲಿಯೇ ಆಗಿರುವುದು.

**ದು. ಪ್ರ:**— ನಿಮ್ಮಿಬ್ಬರಲ್ಲಿ ನಿನ್ನ ಬಂಧುವಿನ ಉದ್ದೇಶ, ಪ್ರಯತ್ನ ಗಳು ಸಾಫಲ್ಯಹೊಂದುವಂತೆ, ಆತನಿಗೆ ಮಾತ್ರ ನಮ್ಮಲ್ಲಿ ವಸತಿಯುಂಟಾಗು ವುದು ನಿನಗೆಂದರೆ ಎಂದಾದರೂ, ಸಮಯವೊದಗಿದಾಗ ಬಂದರೆ, ಸಾಹಾ ಯ್ಯವು ಯಥೋಚಿತವಾಗಿ ದೊರೆಯಬಹುದು

**ವಾಮನ** — (ದುರ್ಗಾಪ್ರಸಾದನನ್ನೇ ನೋಡುತ್ತ ಸಂತೋಷ ದಿಂದ–) ಅಷ್ಟರ ಸಹಾಯವು ದೊರಕಿದರೆ ಸಾಕು ನನ್ನಪಾಡು ಹೇಗಾ ದರೂ ನಡೆಯಬಹುದಾಗಿದೆ.

**ದು ಪ್ರ** — ಓಹೋ ಮರತಿದ್ದೆನು, ಅಯ್ಯ, ನಿನ್ನ ಮೀಮಾಂಸಾದಿ ಶಾಸ್ತ್ರಗಳ ಅಭ್ಯಾಸಕ್ಕೆಂದರೆ, ಇಲ್ಲಿಯ ಪ್ರಸಿದ್ಧ ವಿದ್ವನ್ಮಣಿಯಾದ ನಮ್ಮ ಮಧುಸೂದನಮಹಾಮಹೋಪಾಧ್ಯಾಯರಿರುವರು. ಅವರು ಪರಮದಯಾಳು ಗಳು, ಉದಾರರು ಅವರ ಬಳಿಯಲ್ಲಿ ಸ್ಥಳದ ಮತ್ತು ಪರಸ್ಥಳದ ಅನಾಥ ವಿದ್ಯಾರ್ಥಿಗಳು ಎಷ್ಟೋ ಮಂದಿಯಿರುವರು. ನೀನು ಅವರನ್ನು ನೋಡಿದೆ ಯಾದರೆ, ನಿನ್ನ ಉದ್ದೇಶವು ಸಿದ್ಧಿಸಬಹುದು.

**ವಾಮನ** — (ತಲೆಯೆತ್ತಿ ದುರ್ಗಾಪ್ರಸಾದನನ್ನೇ ನೋಡುತ್ತ) ಮಹನೀಯರೇ! ತಮ್ಮ ಹಿತಸೂಚನೆಗಾಗಿ ಕೃತಜ್ಞನಾಗಿರುವೆನು. ಆದರೆ, ನನಗೆ ಮಹಾಮಹೋಪಾಧ್ಯಾಯರ ಆಶ್ರಯವು ದೊರೆವಂತಿಲ್ಲ.

**ದಯಾ** — ಏಕೆ, ಹೀಗೆ ಹೇಳುವೆ? ಮಧುಸೂದನಶರ್ಮರನ್ನು ನೋಡಿದ್ದೆಯೇನು?

**ವಾಮನ** — ನೋಡಿ ಅಲ್ಲಿಯ ಸ್ಥಿತಿಯನ್ನು ತಿಳಿದಮೇಲೆಯೇ ಇಲ್ಲಿಗೆ ಪೂರ್ವಪರಿಚಿತನನ್ನು ಹುಡಿಕಿಕೊಂಡು ಬಂದುದು.

**ದಯಾ:**— ಹಾಗೇನು? ಅವರೇನೆಂದರು?

**ವಾಮನ** — ಹೇಳುವುದೇನು? ಅವರ ಜ್ಯೇಷ್ಠಪತ್ನಿಯವರು ಇಲ್ಲಿದ್ದ ಪಕ್ಷದಲ್ಲಿ, ವಿದ್ಯಾರ್ಥಿಗಳಿಗೆ ಆಶ್ರಯವು ದೊರೆಯುತ್ತಿದ್ದಿತೆಂದೂ

ಈಗ ಅವರು ಇಲ್ಲವಾದುದರಿಂದ ಮನೆಯಲ್ಲಿದ್ದ ವಿದ್ಯಾರ್ಥಿಗಳನ್ನೇ ಬೇರೆ ಕಡೆಗೆ ಕಳಿಹಬೇಕಾದ ಸ್ಥಿತಿ ಬಂತೆಂದೂ ಹೇಳಿದರು. ಇನ್ನು ನಾನು ಏನನ್ನು ತಾನೆ ಕೇಳಬಹುದು.?

**ದಯಾ:**— (ಭ್ರಾಂತನಾಗಿ ಮತ್ತೆ ಕೇಳಿದನು–) ಏನು? ಅವರ ಜ್ಯೆಷ್ಠಪತ್ನಿಯಿಲ್ಲವೆ?

**ದು. ಪ್ರ** — (ಬ್ರಹ್ಮಚಾರಿಯನ್ನೇ ನೋಡುತ್ತ–) ಜ್ಯೇಷ್ಠಪತ್ನಿಯನ್ನು ಎಲ್ಲಿಗೆ ಕಳಿಹಿದರಂತೆ?

**ವಾಮನ:**— ಅವರ ತಾಯಿ ಮೃತ್ಯುಶಯ್ಯೆಯಲ್ಲಿರುವುದಾಗಿಯೂ ನೋಡಲು ಕೂಡಲೇ ಬರಬೇಕೆಂಬುದಾಗಿಯೂ ಅವರ ತಂದೆ, ಚಾರನ ಮೂಲಕ ಓಲೆಯನ್ನು ಬರೆದಟ್ಟಿದ್ದರಂತೆ. ಅದರ ಮೇಲೆ ಇವರು ಪತ್ನಿಯನ್ನು ಪಾಲ್ಕಿಯಲ್ಲಿ ಕುಳ್ಳಿರಿಸಿ, ಮನೆಯಾಳುಗಳೊಡನೆ ಕನಕಗಿರಿ ದುರ್ಗಕ್ಕೆ ಕಳಿಹಿದರಂತೆ. ಅವರು ಹೊರಟು ಹೋಗಿ ತಿಂಗಳಾಗುತ್ತ ಬಂದರೂ ವರ್ತಮಾನವಿನ್ನೂ ಬಂದಿಲ್ಲವೆಂದೂ, ಮೇಲೆ ಮೇಲೆ ಆಳುಗಳನ್ನಟ್ಟಿರುವೆವೆಂದೂ ತಾವೇ ಹೋಗಿ ಪತ್ನಿಯನ್ನು ಕರೆದುಕೊಂಡು ಬರಬೇಕೆಂದಿದ್ದರೆ ಇವರ ಹಿರಿಯರು ಆಕಸ್ಮಿಕವಾಗಿ ಮರಣ ಹೊಂದಿದುದರಿಂದ ಯಾವುದಕ್ಕೂ ಅವಕಾಶವಿಲ್ಲದೆ ಕಳವಳಿಸುತ್ತಿರುವೆನೆಂದೂ, ಪಾಪ– ಬಹಳವಾಗಿ ಪೇಚಾಡಿಕೊಂಡರು. ಹಾಗೂ ಸುಮ್ಮನಿರಲಿಲ್ಲ ತಮ್ಮ ಪತ್ನಿ ಬರುವವರೆಗೆ ಮತ್ತೆಲ್ಲಿಯಾದರೂ ವಸತಿಯನ್ನು ಕಲ್ಪಿಸಿಕೊಂಡಿದ್ದರೆ, ಆ ಬಳಿಕ ಇಬ್ಬರಲ್ಲದಿದ್ದರೆ ಮತ್ತಿಬ್ಬರನ್ನಾದರೂ ತಮ್ಮ ಪೋಷ್ಯವರ್ಗಕ್ಕೆ ಸೇರಿಸಿಕೊಳ್ಳುವೆವೆಂದೂ ಆ ವರೆಗೆ ಆದಷ್ಟು ದ್ರವ್ಯ ಸಹಾಯಮಾಡುತ್ತಿರುವೆವೆಂದೂ ಹೇಳಿ ನನ್ನನ್ನು ಕಳುಹಿದರು. ನಮ್ಮ ಪಾಡು ಹಾಗಿರಲಿ, ಭಗವಂತನು ಅವರ ಮನಃಕ್ಲೇಶವನ್ನು ಹೋಗಲಾಡಿಸಿದರೆ, ಅವರಲ್ಲಿ ನಾನು ವ್ಯಾಸಂಗ ಮಾಡಿದುದಕ್ಕೂ ಹೆಚ್ಚಾಯಿತೆಂದೇ ತಿಳಿವೆನು.

**ದು. ಪ್ರ** — (ಹರ್ಷವಿಷಾದಗಳಿಂದ–) 'ಅಯ್ಯ! ಮಹಾಮಹೋಪಾಧ್ಯಾಯರ ಮನಃಕ್ಲೇಶವನ್ನು ಕುರಿತು ವಿಷಾದವೂ, ನಿನ್ನ ಗುರುಭಕ್ತಿಭಾವವನ್ನು ಕುರಿತು ಹರ್ಷವೂ ನನಗೆ ಏಕಕಾಲದಲ್ಲಿ ಉಂಟಾಗಿರುವುವು. ಅವರ ಹಿರಿಯರು ಸ್ವರ್ಗಸ್ಥರಾದ ವರ್ತಮಾನವು ನಮಗೆ ತಿಳಿದಿದ್ದಿತು,

ಆದರೆ ನಮಗೆ ವ್ಯವಧಾನವೇ ಇರಲಿಲ್ಲವಾದುದರಿಂದ, ಅವರನ್ನು ನೋಡಲು ಹೋಗಲಿಲ್ಲ. ಈಗ ಯಾರೇನು ಮಾಡಬಹುದು ? ನೀನೇನೂ ಆಲೋಚಿಸ ಬೇಕಾಗಿಲ್ಲ. ಮೀಮಾಂಸಾಶಾಸ್ತ್ರಗಳ ಪರಿಶ್ರಮವು ಕಾಲಾನುಕ್ರಮದಿಂದ ನಡೆಯಲಿ ಈಗ ದಂಡನೀತಿಶಾಸ್ತ್ರದ ಅನುಭವವು ಸಪ್ರಮಾಣವಾಗಿ ನಿನಗೆ ತಿಳಿಯಬೇಕಾದರೆ, ಈ ನಮ್ಮ ನ್ಯಾಯಮೂರ್ತಿಗಳನ್ನೇ ಆಶ್ರಯಿಸಿ, ಇವರ ಮೇಲೆಯೇ ಭಾರವನ್ನು ಇರಿಸಬೇಕು.

**ದಯಾನಾಥ** — ಅಯ್ಯಾ! ನನಗೇನೋ ಇಂದು ಚಿತ್ತಭ್ರಮಣಾದಿಗಳುಂಟಾಗಿರುವುವು ಆದುದರಿಂದ ಹೆಚ್ಚಾಗಿ ಹೇಳಲಾರೆನು. ನಿನ್ನನ್ನು ಕಂಡು ನನಗೆ ಪರಿತುಷ್ಟಿಯುಂಟಾಗಿರುವುದರಿಂದ ನಿನಗೆ ಆಶ್ರಯವನ್ನೂ ಕೊಡುವೆನು, ನಿನ್ನ ದಂಡನೀತಿಯ ಅಧ್ಯಾಪನಕ್ಕೂ ಸಮ್ಮತಿಸಿರುವೆನು. ನಿನ್ನ ಸಹಾಧ್ಯಾಯಿಯೊಡನೆ, ನೀನೂ ಇಲ್ಲಿದ್ದುಕೊಂಡು ನಿನ್ನ ವ್ಯಾಸಂಗವನ್ನು ಸುಸೂತ್ರವಾಗಿ ನಡೆಯಿಸಬಹುದು ಇನ್ನು ಇದಕ್ಕೂ ಹೆಚ್ಚಾಗಿ ಹೇಳಲಾರೆನು. ನನ್ನ ಬುದ್ಧಿ ವಿಕಲ್ಪವಾಗುತ್ತಿದೆ. ನಮ್ಮ ಕುಮಾರ– ಅನಾಥಬಂಧು ವಿಕ್ರಮಸೇನನ ಆರೋಗ್ಯಲಾಭವನ್ನು ಕೇಳುವ ವರೆಗೂ ನನ್ನ ಮನಸ್ಸಮಾಧಾನಕ್ಕೆ ಮಾರ್ಗವಿಲ್ಲವಾಗಿದೆ. (ವಾಮನನು ಭಾವಗರ್ಭಿತವಾದ ನೋಟದಿಂದ ದುರ್ಗಾಪ್ರಸಾದನ ಮುಖವನ್ನೊಮ್ಮೆ ನೋಡಿ ತಲೆ ಬಾಗಿಸಿದನು.)

**ದು. ಪ್ರ** — ಅಷ್ಟುದೂರ ಆಲೋಚನೆ ಮಾಡಬೇಕಾದುದಿಲ್ಲ. ಭಗವಂತನು ಕ್ಷಿಪ್ರದಲ್ಲಿಯೇ ಆತನ ಆರೋಗ್ಯ ವಿಷಯವನ್ನು ತಿಳಿವಿಗೆ ತರಬಹುದೆಂದು ನಾನು ಭಾವಿಸುವೆನು. (ಎಂದನು)

ಇಷ್ಟುಹೊತ್ತಿಗೆ ಸರಿಯಾಗಿ ಹೊರಗೆ ಹೋಗಿದ್ದ ಕಮಲಾಕಾಂತನು ಕೈಯಲ್ಲಿ ಒಂದು ಪಾರಿವಾಳದಹಕ್ಕಿಯನ್ನು ಹಿಡಿದುಕೊಂಡು ಬಂದು ಕಿರುನಗೆಯಿಂದ ವಾಮನಗೋಸ್ವಾಮಿಯನ್ನು ಕುರಿತು–"ಅಯ್ಯಾ! ಗೋಸ್ವಾಮಿ! ಇದೋ ನಿನ್ನ ಕೈತಪ್ಪಿಸಿಕೊಂಡು ಹೋಗಿದ್ದಪಕ್ಷಿ ತೆಗೆದುಕೋ" ಎಂದನು.

(ವಾಮನನು ಸಂತೋಷದಿಂದ ಪಕ್ಷಿಯನ್ನು ಕೈಯಲ್ಲಿ ಹಿಡಿದುಕೊಂಡನು.)

**ದಯಾ.**— ಕಮಲಾಕಾಂತ! ವೈದ್ಯರಿಗೆ ಹೇಳಿಬಂದೆಯಾ? ಅವರೇನೆಂದರು?

**ಕಮಲಾ.**— ಕಾಲಕ್ಕೆ ಸರಿಯಾಗಿ ಹೋಗುವೆನೆಂದು ನಂಬುಗೆ ಕೊಟ್ಟಿರುವರು, ಚಾರನಿಗೂ ಹೇಳಿಬಂದಿರುವೆನು. ನಾಳೆ ವರ್ತಮಾನವು ತಿಳಿದು ಬರುವುದು.

**ದು ಪ್ರ**— (ಪಕ್ಷಿಯನ್ನು ನೋಡಿ ಕುತೂಹಲದಿಂದ-) ಇದೇನಯ್ಯ! ವಾಮನಗೋಸ್ವಾಮಿಶರ್ಮ, ನಿನ್ನ ಹತ್ತಿರ ಪಾರಿವಾಳದ ಹಕ್ಕಿಯೂ ಇರುವುದೋ? ಇದೇನು, ಇದರ ಕೊರಳಿಗೆ ಏನೋ ಬಿಗಿದಿರುವುದು?

**ವಾಮನ.**— ಅಹುದು, ವಿನೋದಕ್ಕಾಗಿ ಈ ಪಕ್ಷಿಯನ್ನು ಸಾಕುತ್ತಿರುವೆನು. ಇದು ಕೈತಪ್ಪಿಸಿಕೊಂಡು ಹೋಯಿತೆಂದು ಚಿಂತಿಸುತ್ತಿದ್ದೆನು. (ಎಂದು ಪಕ್ಷಿಯ ಕೊರಳಿಗೆ ಬಿಗಿದಿದ್ದ ಕಟ್ಟನ್ನು ಬಿಚ್ಚಿ, ಅದರಲ್ಲಿದ್ದ ಕಾಗದವನ್ನು ನೋಡಿ ವಿಸ್ಮಿತನಾದಂತೆ ತೆಗೆದುಕೊಂಡು, ಬಿಚ್ಚಿನೋಡಿದನು.)

**ದಯಾನಾಥ**— (ಹಕ್ಕಿ ಬಂದುದನ್ನೂ ಅದರ ಕೊರಳಿಗೆ ಕಾಗದವು ಬಿಗಿದಿದ್ದುದನ್ನೂ ನೋಡಿ ವಿಸ್ಮಯಕುತೂಹಲಗಳಿಂದ-) ಅದಾವ ಕಾಗದವು? ಏನು ಬರೆದಿರುವುದು?

**ವಾಮನ**— ಇದೇ ನನ್ನ ಬಂಧುವಿನ ಬರೆವಣಿಗೆ. ಕೇಳುವಂತೆ ಓದುವೆನು. (ಎಂದು ವಾಚಿಸುವನು)

"ಸನ್ಮಿತ್ರ!"

ನೀನು ಹೊರಟುಹೋದ ಬಳಿಕ, ನಾನು ಈ ನಗರದ 'ಪೋಲಿಸ್ ಸೂಪರಿಂಟೆಂಡೆಂಟ' ರಾದ ಶ್ರೀಯುತ ದುರ್ಗಾಪ್ರಸಾದ ಬಾಬುಗಳ ಮನೆಗೆ ಹೋಗಿದ್ದೆನು. ಅಲ್ಲಿ ಅವರ ಪತ್ನಿ ತಮ್ಮ ಪತಿಗೆ ಹೇಳಿ, ನನಗೆ ಆಶ್ರಯವನ್ನು ಕೊಡುವುದಾಗಿ ವಾಗ್ದಾನವಿತ್ತರು. ಆದುದರಿಂದ, ಈ ಸಂತೋಷವರ್ತಮಾನವನ್ನು ನಿನಗೆ ಹೇಳಬೇಕೆಂದು, ಮಹಾಮಹೋಪಾಧ್ಯಾಯರ ಮನೆಯಬಳಿಗೆ ನಿನ್ನನ್ನು ಹುಡುಕಿಕೊಂಡು ಹೋದೆನು. ಆದರೆ ಅಷ್ಟರಲ್ಲಿಯೇ ಅಲ್ಲಿ ವಿಪರೀತವೊಂದು ನಡೆದು ಹೋಗಿದ್ದಿತು. ಏನೆಂದರೆ— ಮಹಾಮಹೋಪಾಧ್ಯಾಯರ ಜ್ಯೇಷ್ಠಪತ್ನಿ ಕನಕಗಿರಿಗೆ ಸೇರಿಲ್ಲವೆಂದೂ ಅಲ್ಲಿಂದ ಯಾರೂ ಬರಹೇಳಿ ಬರೆದಿರಲಿಲ್ಲವೆಂದೂ ತಂತಿಯ ವರ್ತಮಾನವು

ಬಂದಂತೆಯೂ, ಅದರಿಂದ ಮಹಾಮಹೋಪಾಧ್ಯಾಯರು ಅನ್ನಾಹಾರಗಳನ್ನೂ ಬಿಟ್ಟು, ಅಶ್ವಾರೂಢರಾಗಿ ಆ ಕ್ಷಣವೇ ಹೊರಟುಹೋದಂತೆಯೂ, ಅವರು ಹೊರಟು ಹೋದ ರಾತ್ರಿಯೇ ಮನೆಯಲ್ಲಿದ್ದ ದೇವರಪೆಟ್ಟಿಗೆಯೂ, ಹಣದಪೆಟ್ಟಿಗೆಗಳೂ ಕಳುವಾಗಿ, ಮನೆಯ ಆಳುಗಳಲ್ಲಿ ಇಬ್ಬರು ಕಣ್ಮರೆಯಾಗಿರುವರೆಂದೂ ಇವೆಲ್ಲಕ್ಕೂ ಕಾರಣವೇನೆಂಬುದನ್ನು ವಿಚಾರಿಸುವಲ್ಲಿ, ಮೊದಲನೆಯ ದಿನ ಮನೆಗೆ ನೀನು ಬಂದಿದ್ದೆಯಾದುದರಿಂದ, ಇದೆಲ್ಲವೂ ನಿನ್ನ ಕೃತ್ರಿಮ ಸಂಧಾನವೇ ಆಗಿರುವದೆಂಬದಾಗಿ ನಿರ್ಧರಿಸಿರುವರೆಂದೂ ತಿಳಿದೆನು. ಅಲ್ಲದೆ, ನೀನು ಎಲ್ಲಿರುವೆಯೆಂಬದನ್ನು ತಿಳಿಯಲು, ಅಲ್ಲಲ್ಲಿಗೆ ಜನರನ್ನು ಕಳಿಹಿ– ಕಳಿಹುವ ಪ್ರಯತ್ನವನ್ನೂ ನಡೆಯಿಸುತ್ತಿರುವುದಾಗಿಯೂ ತಿಳಿದನು.

"ಇಷ್ಟೆಲ್ಲವನ್ನೂ ನೋಡಿದ ಬಳಿಕ, ನನಗೆ ಅಲ್ಲಿರಲು ಧೈರ್ಯಸಾಲದೆ, ನಿನ್ನನ್ನು ಹುಡಿಕಿಕೊಂಡು ಈ ಸಂಸ್ಕೃತಪಾಠಶಾಲೆಯ ಬಳಿಗೆ ಬಂದೆನು. ಇಲ್ಲಿ ನಿನ್ನ ಪಾರಿವಾಳವು ಬಂದು ಕುಳಿತಿದ್ದುದರಿಂದ, ಮನಸ್ಸಿಗೇನೂ ತೋರದಂತಾಗಿ, ನಿನ್ನ ನೆಲೆಯನ್ನು ತಿಳಿಯುವ ಉಪಾಯವೊಂದೂ ಹೊಳೆಯದೆ ಕಡೆಗೆ ಆದುದಾಗಲೆಂದು ಈ ಕಾಗದವನ್ನು ಬರೆದು ಈ ಪಾರಿವಾಳದ ಕೊರಳಿಗೆ ಕಟ್ಟಿರುವೆನು. ಇನ್ನು ನಾವಿಲ್ಲಿರುವುದು ಶುಭವಾಗಿ ಕಾಣುವುದಿಲ್ಲ. ಪ್ರಥಮದಿನದಲ್ಲಿಯೇ ಪರಿತಾಪವುಂಟಾದುದರಿಂದ, ನಮ್ಮ ವ್ಯಾಸಂಗವಿಚಾರವನ್ನು ಪ್ರಕೃತದಲ್ಲಿ ಹಾಗಿರಲೆಂದು ಬಿಡುವುದು ಲೇಸೆಂದು ಭಾವಿಸುತ್ತಿರುವೆನು. ಈ ಪತ್ರಿಕಾಪಠನವಾದೊಡನೆಯೇ ನೀನು ಎಲ್ಲಿದ್ದರೂ, ಏನು ಮಾಡುತ್ತಿದ್ದರೂ ಬಿಟ್ಟು, ನಾನಿರುವ ಸಂಸ್ಕೃತಪಾಠಶಾಲೆಯ ತೋಟಕ್ಕೆ ಹೊರಟುಬರಬೇಕೆಂದೂ, ನಿನಗಾಗಿ ನಾನಿಲ್ಲಿ ಸಾಯಂಕಾಲದ ಆರುಘಂಟೆಯವರೆಗೂ ನಿರೀಕ್ಷಿಸುತ್ತಿರುವೆನಾದುದರಿಂದ, ಆ ಅವಧಿಯೊಳಗಾಗಿ ನನ್ನ ಬಳಿಗೆ ಬರಬೇಕೆಂದೂ ಮತ್ತೆಮತ್ತೆಯೂ ಕೋರುತ್ತಿರುವೆನು."

**ದಯಾ —** (ಕೈಗಳನ್ನು ಕೊಡಹಿಕೊಳ್ಳುತ್ತ,) 'ಕಷ್ಟ, ಕಷ್ಟ, ಪ್ರಸಾದ! ಈಗ ಮಾಡುವದೇನು? ಮುಂದೇನುಗತಿ? ಅವರ ಸೂಚನೆ ಕಾರ್ಯವಾಗಿಯೇ ಪರಿಣಮಿಸಿರುವದಲ್ಲಾ! ನಮ್ಮ ದರ್ಪವೆಲ್ಲಿ ಅಡಗಿರುವುದು? ನನಗೇನೂ ತೋರದು, ಈ ವೇಳೆಯಲ್ಲಿ ವಿಕ್ರಮನೂ ಮಲಗಿ

ಬಿಟ್ಟು, ನನ್ನ ಕಣ್ಣುಗಳನ್ನೇ ಬಿಗಿದು ಕಟ್ಟಿದಂತೆ ಮಾಡಿರುವನು'

**ಕಮಲಾ** — ಅಣ್ಣ, ಇಷ್ಟೇಕೆ ಕಾತರರಾಗಬೇಕು? ಈ ಅಧೈರ್ಯವು ತಮಗೆ ತಕ್ಕುದಲ್ಲ. ನಾನೇಹೋಗಿ ವಿಕ್ರಮಸೇನನನ್ನು ನೋಡಿ ಬರುವೆನು ನನಗೆ ಉಪಾಯವು ತಿಳಿದಿರುವುದು.

**ದಂಪ** — ಕಮಲಾಕಾಂತ, ನೀನು ಅಷ್ಟು ಮಾಡಿದೆಯಾದರೆ ಸಾಕು. ಆದರೆ ಅದನ್ನು ಹೊರಪಡಿಸಬೇಡ

**ಕಮಲಾ** — ಹೊರಪಡಿಸುವುದುಂಟೇ?

**ದು. ಪ್ರ** — ಕಮಲಾಕಾಂತ, ಈಗ ಅಷ್ಟು ಮಾಡಿ ಬಾ, ಮುಂದೆ ನೋಡುವ. (ಎಂದು ಹೇಳಿ ಬ್ರಹ್ಮಚಾರಿಯನ್ನು ಕುರಿತು–) ಅಯ್ಯಾ ವಾಮನಶರ್ಮ! ಈಗ ನೀನೂ ನಿನ್ನ ಸಹಾಧ್ಯಾಯಿಯೂ ಎಲ್ಲಿರಬೇಕೆಂದಿರುವಿರಿ?

**ವಾಮನ** — ನನಗೇನು? ಎಲ್ಲಿ ನಿಂತರೆ ಅಲ್ಲೇ ನೆಲೆ, ನನಗೇನೂ ಆಲೋಚನೆಯಿಲ್ಲ

**ದು. ಪ್ರ** — ಹಾಗೆಂದರೆ ಹೇಗೆ? ನಿನ್ನ ಬಂಧು ಬರೆದಿರುವುದನ್ನು ನೋಡಿದರೆ ವಿಚಾರಾಸ್ಪದವಾಗಿಯೇ ಇರುವುದಷ್ಟೆ?

**ವಾಮನ** —ನಸುನಕ್ಕು, "ಅವನಿಗೆ ಲೋಕಾಚಾರವೇನುಗೊತ್ತು? ಪಾಪ! ಅವನು ಸ್ವಗ್ರಾಮದಲ್ಲಿ ವಿಶೇಷವಾಗಿ ತಮ್ಮ ಬಂಧುಭಗಿನಿಯರ ಜತೆಯಲ್ಲಿಯೇ ಇದ್ದನಲ್ಲದೆ, ಈವರೆಗೂ ಮತ್ತೆಲ್ಲಿಯೂ-ಯಾವ ಪ್ರಯಾಸ ಕಾರ್ಯಕ್ಕೂ ಕೈ ಹಾಕಿದವನಲ್ಲ. ತಾಯ್ತಂದೆಗಳು ಸಂಪನ್ನರಾಗಿದ್ದುದರಿಂದ, ಅತ್ಯಂತ ಸುಖದಿಂದಲೇ ಬೆಳೆದಿರುವನು. ಇದಲ್ಲದೆ, ಅವನು ಜನರಲ್ಲಿ ನಿಷ್ಠುರವನ್ನು ಕಟ್ಟಿಕೊಳ್ಳುವುದಕ್ಕೂ ಇಷ್ಟವುಳ್ಳವನಾಗಿಲ್ಲ. ಆದುದರಿಂದ, ತನ್ನ ಸ್ವಭಾವ ಸಹಜೋಕ್ತಿಗಳನ್ನೇ- ಇಲ್ಲಿ ಬರೆದು ತೋರಿಸಿರುವನು. ಆದ ಮಾತ್ರಕ್ಕೆ ನಾನು ಇದಕ್ಕಾಗಿ ಹೆದರಬೇಕೇ?"

**ದು. ಪ್ರ**:— ನೀನೇನು ಮಾಡಬೇಕೆಂದೆಣಿಸಿರುವೆ?

**ವಾಮನ**.— ಮಾಡುವುದೇನು? ಅವನನ್ನು ಆದಷ್ಟು ಬೇಗ ಕಂಡು ಮಾತನಾಡಿ ಹೇಳುವುದನ್ನೂ ಹೇಳಿ ಅವನೂ ಅದಕ್ಕೆ ಒಪ್ಪಿದರೆ, ಈ ನಗರಿಯಲ್ಲಿ ಎಲ್ಲಿಯಾದರೂ ಪ್ರತ್ಯೇಕಸ್ಥಳವನ್ನು ಗೊತ್ತು ಮಾಡಿಕೊಂಡು ವ್ಯಾಸಂ

ಗಕ್ಕೆ ಮೊದಲು ಮಾಡಬೇಕೆಂದಿರುವೆನು.

**ದಯಾ** — ಅಯ್ಯಾ, ಗೋಸ್ವಾಮಿ, ನೀನು ಮತ್ತೆಲ್ಲಿಗಾದರೂ ಏಕೆ ಹೋಗಬೇಕು ? ನಿನ್ನ ಬಂಧುವನ್ನೂ ಕರೆತಂದು ಅವನೊಡನೆ ಇಲ್ಲಿಯೇ ಗುಪ್ತವಾಗಿದ್ದುಕೊಂಡು ನಿಮ್ಮ ಪಾಠಪ್ರವಚನವನ್ನು ಮಾಡಿಕೊಂಡ ರಾಯಿತು ?

**ಕಮಲಾ** — ಅದೆಲ್ಲಾ ಆಗದ ಹೋಗದ ಮಾತು ಇವರನ್ನು ಇಲ್ಲಿರಿಸಿಕೊಳ್ಳುವುದರಿಂದ ತೊಂದರೆಯೇ ಆಗುವುದು. ಇಬ್ಬರನ್ನೂ ವಿಕ್ರಮ ಠಾಕೂರನ ಮನೆಗೇ ಕರೆದೊಯ್ದು ಗುಪ್ತಗೃಹದಲ್ಲಿ ಬಿಟ್ಟು, ಅವನ ಔಷಧೋಪಚಾರಗಳಿಗೆ ಇವನನ್ನೇ ಮುಖ್ಯ ಸಹಾಯಕನನ್ನಾಗಿ ನಿಯಮಿಸಿ ಬರುವೆನು. ಧೈರ್ಯವಾಗಿರಿ ! (ಪಕ್ಕಕ್ಕೆ ತಿರುಗಿ) 'ಏಳಯ್ಯಾ, ಗೋಸ್ವಾಮಿ ! ಇನ್ನು ವಿಳಂಬಿಸಬಾರದು.' ಎಂದನು.

**ವಾಮನ.**— ಎದ್ದು—"ಇನ್ನು ನನಗೆ ಅಪ್ಪಣೆಯಾಗಲಿ."

**ದಯಾ** — ದೇವರು ಅನುಗ್ರಹಿಸಲಿ. ಈಗ ಸೂಚನೆಕೊಡುತ್ತಿರುವ ವಿಪತ್ತುಗಳು ತೊಲಗಿ ಸುಕ್ಷೇಮಿಯಾಗಿ ಬಂದು, ಮತ್ತೆ ನನ್ನನ್ನು ಕಾಣಬೇಕೆಂದು ಹಾರೈಸುವೆನು.

**ವಾಮನ** — ಹಿರಿಯರ ಆಶೀರ್ವಾದವು ಚೆನ್ನಾಗಿರಲಿ !

**ದು. ಪ್ರ:**— (ಸಂಶಯದಿಂದ) ಅಯ್ಯಾ ! ನನ್ನನ್ನು ಮತ್ತೆ ನೋಡಲೇಬೇಕೆಂಬುದನ್ನು ಮರೆಯಬೇಡ. ದೇವರು ನಿನಗೆ ಸಹಾಯಕನಾಗಿರುವನು. ಇನ್ನು ಹೋಗಿ ಬಾ.

(ವಾಮನಗೋಸ್ವಾಮಿಯೂ ಕಮಲಾಕಾಂತನೂ ಇಬ್ಬರೂ ಹೊರಟು ಹೋದರು.)

---

ಶ್ರೀ:

# ಷಷ್ಠ ಪರಿಚ್ಛೇದ.

'ಹಾಜಾತ, ಕುತ್ರಾಸಿ, ದೇಹಿಮೇ ಪ್ರತಿವಚನವ'।
ಹಾಜಾತ ನಯುಕ್ತಮಿದಾನೀಂ ಯತ್ತ್ರಿತ್ರಾಪಿತೇ ಯದಾಪರಿಕ್ಷಕಾ,
ತಥಾಕ್ತ್ವಮಪಿಮಾಂ ಮಂದಭಾಗಿನೀಂ ಪರಿತ್ಯಜಸಿ ||' (ಚಂಡಕೌಶಿಕ)

(ಅಪಘಾತ ಸಂಗತಿ)

ಹೊತ್ತು ಸಾಯಂಕಾಲದ ನಾಲ್ಕು ಘಂಟೆಯ ಸಮಯ. ಮಹಾಮಹೋಪಾಧ್ಯಾಯ ಮಧುಸೂದನ ಭಟ್ಟಾಚಾರ್ಯರ ಮನೆಯ ಬಾಗಿಲಲ್ಲಿ ಒಬ್ಬ ಹುಡುಗನು ಕಾವಲಿಗಾಗಿ ಕುಳಿತಿರುವನು, ಮತ್ತಾರೂ ಇರಲಿಲ್ಲ. ಮನೆಯಲ್ಲಿ ಎಲ್ಲೆಲ್ಲಿಯೂ ನಿಶ್ಶಬ್ದ. ನಡುಹಜಾರದಲ್ಲಿಯೂ ಒಬ್ಬರ ಸುಳಿವೂ ಕಾಣುತ್ತಿರಲಿಲ್ಲ. ಎಲ್ಲರೂ ಏನಾದರು? ಮನೆಯು ಹೀಗೆ ಮಲಿನರೂಪವನ್ನೂ, ಮೌನಧಾರಣೆಯನ್ನೂ, ಹೊಂದಿರುವುದೇಕೆ? ಮಹಾಮಹೋಪಾಧ್ಯಾಯರು ಹೊರಟುಹೋದರೆಂದು ನಿನ್ನೆಯದಿನ ನಡೆದ ವಿದ್ಯಮಾನದಿಂದ ತಿಳಿದಿರುವುದಲ್ಲವೆ? 'ಆದರೆ, ಮಹಾಮಹೋಪಾಧ್ಯಾಯರು ಎಲ್ಲಿಗೆ ಹೋಗಿರಬೇಕು! ಎಂದು ಕೇಳುವಿರಲ್ಲವೆ? ಸುಹೃದರೇ! ಆತುರಗೊಳ್ಳುವುದರಿಂದೇನಾಗುವುದು? ಸಾವಧಾನದಿಂದ ಪರಾಮರ್ಶಿದರೆ, ಮುಂದೆ ತಿಳಿವುದು! ಇನ್ನು ನಡೆಯಿರಿ. ಮಹಾಮಹೋಪಾಧ್ಯಾಯರ ದ್ವಿತೀಯಪತ್ನಿಯನ್ನಾದರೂ ನೋಡಿ ವಿದ್ಯಮಾನವನ್ನು ತಿಳಿದುಕೊಳ್ಳುವ.

ಮಹಾಮಹೋಪಾಧ್ಯಾಯರ ದ್ವಿತೀಯಪತ್ನಿ, ಉಪ್ಪರಿಗೆಯ ಮೇಲಣ ತನ್ನ ವಿಶ್ರಾಂತಿಮಂದಿರದಲ್ಲಿ ಕುಳಿತಿದ್ದಳು. ಅವಳ ಮುಂದೆ ಸಮೀಪದಲ್ಲಿಯೇ ಅಪೂರ್ವ ರೂಪರಾಶಿ (ಸೌಂದರ್ಯಶಾಲಿ) ಯಾದ ಯುವಕನು ಕುಳಿತು ಆತುರದಿಂದ ತರುಣಿಯ ಮುಖವನ್ನೇ ನೋಡುತ್ತಿದ್ದನು. ಆ ತರುಣಿಯು ಕಳೆಗುಂದಿದ ಮುಖವನ್ನು ತಗ್ಗಿಸಿ ತುಂಬಿ ತುಳುಕಾಡುವ ಕಣ್ಣುಗಳಿಂದ ನೆಲವನ್ನೇ ನೋಡುತ್ತ, ಅಡಿಗಡಿಗೂ ನಿಟ್ಟುಸಿರು ಬಿಡುತ್ತಿದ್ದಳು.

ಯುವಕನು ಕೈಯ್ಯಲ್ಲಿ ಅದಾವುದೋ ಪತ್ರಿಕೆಯೊಂದನ್ನುಹಿಡಿದು ಸ್ವಲ್ಪ ಹೊತ್ತು ಅದನ್ನೇ ನೋಡುತ್ತಿದ್ದು ಬಳಿಕ ತಲೆಯೆತ್ತಿ, ರಮಣಿಯ ಮುಖವನ್ನು ನೋಡಿ– "ಪ್ರಮದಾ! ಇದೇಕೆ ಹೀಗೆ ಮೌನವ್ರತವನ್ನು ಹಿಡಿದಿರುವೆ? ನನ್ನಲ್ಲಿ ಮಾತನಾಡಲಿಷ್ಟವಿಲ್ಲವೆ? ಹಿಂದಿನ ನಿನ್ನ ಪ್ರೇಮಭಾವನೆಯು ತಪ್ಪಿಹೋಯಿತೇ? ಹೇಳು." ಎಂದು ಕೇಳಿದನು.

**ಪ್ರಮದಾ:**—(ತರುಣಿ)–(ಕಣ್ಣೀರನ್ನು ಕಿರುಬೆರಳ ತುದಿಯಿಂದ ವಾರಿಸುತ್ತ ಗದ್ಗದ ಸ್ವರದಿಂದ) "ಏನನ್ನು ತಾನೇ ಹೇಳಲಿ, ಮಧುಕರ? ಯಾವ ಕಾರಣವನ್ನು ಹೇಳಿದರೆ ನಿನಗೆ ಸಮಾಧಾನವುಂಟಾಗುವುದು? ಹೇಳು, ಹಿಂದಿನ ಭಾವವು ತಪ್ಪಿದರೂ ಇಲ್ಲ, ಹಾಗೆಯೇ ಇದ್ದರೂ, ಈಗದರಿಂದ ಫಲವೇನು!" ಎಂದಳು.

**ಮಧುಕರ:**— (ತರುಣ)'–ಪ್ರಮದಾ! ಫಲವೇನೆಂಬುದರ ವಿಚಾರವು ಬೇರೆ. ಬಹುಕಾಲಾನಂತರಕ್ಕೆ ಇಂದು ನಮ್ಮಿಬ್ಬರಿಗೂ ಪರಸ್ಪರ ಸಂದರ್ಶನ ಯೋಗವು ಇಲ್ಲಿ ದೊರೆಯಿತು. ಇಂತಹ ಸುಸಮಯದಲ್ಲಿ ನಾಲ್ಕಾರು ಮಾತುಗಳನ್ನಾದರೂ ಆಡಿ, ಮನೋವ್ಯಾಕುಲವನ್ನು ತೊರೆಯಬಹುದೆಂದಿರುವಲ್ಲಿ, ಅದಕ್ಕೂ ತಡೆಯಾದರೆ ಹೇಗಾಗಬಹುದು? ಆಲೋಚಿಸು.'

**ಪ್ರಮದಾ:**— ಆಲೋಚಿಸುವುದರಿಂದ ಬಾಧಕವಲ್ಲದೆ ಸಾಧಕವೇನೂ ಇಲ್ಲ. 'ನುಂಗಿದ ತುತ್ತಿನ ರುಚಿ ಬಯಸಿದರೆ ಬರುವುದೇನು?'

**ಮಧುಕರ:**— ಹೋಗಲಿ, ನಮ್ಮ ಹಿಂದಿನ ವ್ಯಾಸಂಗದ ವಿಚಾರಗಳನ್ನಾದರೂ ನೆನಪಲ್ಲಿಟ್ಟುಕೊಂಡಿರುವೆಯೋ ಇಲ್ಲವೋ?

**ಪ್ರಮದಾ:**— ಅದನ್ನು ಮರೆಯಬೇಕೆಂದರೆ ಸಾಧ್ಯವೇ?

**ಮಧುಕರ:**— ಆಗ ನಾವು ಆಡುತ್ತಿದ್ದ ಸರಸ ಸಲ್ಲಾಪಗಳಲ್ಲಿ ಒಂದೆರಡನ್ನಾದರೂ ಈಗ ಸ್ಮರಿಸುವೆಯಾ?

**ಪ್ರಮದಾ:**— ಮಧುಕರ! ಅನವರತವೂ ನೆನಪಾಗುವ ವಿಷಯವನ್ನು ಮರೆಯಬೇಕೆಂದರೆ ಸಾಧ್ಯವೇ?

**ಮಧುಕರ:**— (ಕುತೂಹಲದಿಂದ) 'ನಿನ್ನ ಮನೋಭಾವವು ಹಾಗಿದ್ದರೂ, ನೀನು ನಿನ್ನ ತಾಯ್ತಂದೆಗಳಿಗೆ ಒಂದೆರಡು ಮಾತುಗಳನ್ನಾದರೂ

ಹೇಳಲಾರದೆ ಹೋದುದೇಕೆ ?

**ಪ್ರಮುದಾ:**— ನಾನು ಹೇಗೆ-ಏನೆಂದು ಹೇಳಬಹುದಾಗಿದ್ದಿತು ? ಅವುದಕ್ಕೂ ಅವಕಾಶವೆಲ್ಲಿತ್ತು ?

**ಮಧುಕರ:**—ಅವಕಾಶವಿಲ್ಲದೆ ಹೋಗಿರಲಿಲ್ಲ. ಪ್ರಮದಾ, ಆಗ ನಾನು ಹತ್ತಿರದಲ್ಲಿದ್ದರೆ, ನಿನ್ನನ್ನು ಹೀಗೆ ಕಳೆದುಕೊಳ್ಳುತ್ತಿರಲಿಲ್ಲ. ಎಷ್ಟುಕಷ್ಟ ವನ್ನಾದರೂ ಸಹಿಸಿ, ನಿನ್ನನ್ನು ನನ್ನ ಕಂಠಾಭರಣವನ್ನಾಗಿ ಮಾಡಿಕೊಳ್ಳುತ್ತಿದ್ದೆನು. ಆದರೆ, ನನ್ನ ದುರದೃಷ್ಟವು ಅಷ್ಟಕ್ಕೆ ಅವಕಾಶವನ್ನು ಕೊಡದೆ, ಹಾಳ ವ್ಯಾಸಂಗದ ನೆವದಿಂದ ದೂರದೇಶವಾಸದಲ್ಲಿ ಕರೆದೊಯ್ದುಬಿಟ್ಟು, ನನಗೆಂದು ಗೊತ್ತಾಗಿದ್ದ ರತ್ನವನ್ನು ಮತ್ತೊಬ್ಬರ ಕೈವಶ ಮಾಡಿತು. ಆ ವೇಳೆಯಲ್ಲಿ ನೀನಾದರೂ ಹೇಳಬಹುದಾಗಿತ್ತು, ನಿನಗೂ ಇಷ್ಟವುಂಟಾಗ ಲಿಲ್ಲ. ತಕ್ಕ ವಯಸ್ಸು ಬಂದು, ವಿದ್ಯಾಪ್ರೌಢಿಮೆಯನ್ನು ಹೊಂದಿದ್ದರೂ ನೀನು ನಿನ್ನ ಮನೋಗತವನ್ನು ಕುರಿತು ನಿನ್ನ ತಂದೆಯ ಬಳಿಯಲ್ಲಿ ಒಂದು 'ಚ' ಕಾರವನ್ನಾದರೂ ಎತ್ತದೆ ಮೌನವನ್ನು ಧರಿಸಿ ನನ್ನನ್ನು ಹೀಗೆ ಅಂತ ಸ್ತಾಪಕ್ಕೆ ಪಕ್ಕಾಗಿ ನರಳುವಂತೆ ಮಾಡಿದೆ.

**ಪ್ರಮದೆ:**— "ಮಧುಕರ, ಹಿಂದಿನ ವಿದ್ಯಮಾನವನ್ನು ಇನ್ನು ಮರೆತು ಬಿಡು. ದೈವವಿಲಾಸವನ್ನು ತಪ್ಪಿಸಲು ಆರಿಂದ ತಾನೇ ಆಗುವುದು ? ಆದರೆ ಇಷ್ಟನ್ನು ಹೇಳಬಲ್ಲೆನು. ವಚನಭ್ರಷ್ಟತೆಯ ಭೀತಿಯಾಗಲೀ, ಬಾಂಧವ್ಯದ ದಾಕ್ಷಿಣ್ಯವಾಗಲೀ, ಆಶ್ರಿತವಾತ್ಸಲ್ಯವಾಗಲೀ, ಅವುದೇ ಒಂದಾದರೂ ನಮ್ಮ ತಂದೆತಾಯಿಗಳಿಗಿದ್ದ ಪಕ್ಷದಲ್ಲಿ, ಅದರ ಕ್ರಮವೇ ಬೇರೆಯಾಗುತ್ತಿದ್ದಿತು. ಅದೊಂದೂ ಇಲ್ಲದೆ ಹೋಗಲು, ಬಯಸಿದುದು ಒಂದಾಗಿದ್ದರೆ ಆದುದೇ ಮತ್ತೊಂದು; ಈಗದನ್ನು ಕುರಿತು ಹಂಬಲಿಸುವುದರಿಂದ ವೃಥಾ ಕ್ಲೇಶಪಡುವುದೇ ಫಲವಲ್ಲದೆ ಬೇರೆಯಿಲ್ಲ. ಅಷ್ಟಾದರೂ, ನಾನು ಇದ್ದುದರಲ್ಲಿ ಸಾಹಸಪಟ್ಟು, ನಿನಗೆ ನಡೆದ ವಿದ್ಯಮಾನವನ್ನು ಸೂಚಿಸಿ ವಿಳಂಬಿಸಿದರೆ ಕೈಮಿಂಚಿ ಹೋಗಬಹುದೆಂಬುದನ್ನೂ ತಿಳಿಸಿಯೇ ಇರಲಿಲ್ಲವೇ ? ಅದಕ್ಕಿಂತ ಹೆಚ್ಚಿದ ಸಾಹಸವು ನನಗೆ ಹೇಗೆ ಉಂಟಾಗಬೇಕು ? ತಾಯಿಯಲ್ಲಿ ಮಾತ್ರ ನನ್ನ ಮನೋಗತವನ್ನು ಸೂಕ್ಷ್ಮವಾಗಿ ಹೇಳಿದೆನು. ಆದರೆ ತಾಯಿಯ ಯತ್ನವೇನು ನಡೆವುದು ? ಎಲ್ಲವೂ ತಂದೆಯ ಇಷ್ಟ

ದಂತೆಯೇ ನಡೆದುಹೋಯಿತು.

**ಮಧುಕರ:—** ಪ್ರಮದಾ, ನಿನ್ನ ಕಾಗದವು ಇನ್ನೊಂದು ವಾರಕ್ಕೆ ಮೊದಲಾದರೂ ನನ್ನ ಕೈಸೇರಿದ್ದ ಪಕ್ಷದಲ್ಲಿ, ನಾನು ಆ ವೇಳೆಗೆ ಬಂದು ನಿಲ್ಲುತ್ತಿದ್ದೆನು, ಇಲ್ಲ ಅವಧಿಯನ್ನಾದರೂ ಕೇಳುತ್ತಿದ್ದೆನು. ನಿನ್ನ ತಂದೆ ನನಗೆ "ನಿನ್ನ ವಿದ್ಯಾವ್ಯಾಸಂಗವು ಇನ್ನೂ ಮುಗಿದಿಲ್ಲ. ವಿದ್ಯಾವ್ಯಾಸಂಗವು ಮುಗಿವುದಕ್ಕೆ ಮೊದಲು ನೀನು ಮದುವೆಯಾಗುವುದು ಶ್ರೇಯಸ್ಕರವಲ್ಲ. ನಿನ್ನ ವಿದ್ಯಾವ್ಯಾಸಂಗವು ಮುಗಿವವರೆಗೆ ಪ್ರಮದೆಯನ್ನು ಮದುವೆಯಿಲ್ಲದೆ ನಿಲ್ಲಿಸಿಕೊಂಡಿರಲಾಗುವುದಿಲ್ಲ. ಇದಕ್ಕಾಗಿ ಬೇರೆ ಆಲೋಚನೆ ಮಾಡಿರುವುದು. ನಿನಗೂ ಅನುರೂಪಳಾದ ಕನ್ಯೆಯನ್ನೇ ನೋಡಿ ಮಾಡುತ್ತೇವೆ! ಆಲೋಚಿಸಬೇಡ." ಹೀಗೆಂದು ಬರೆದ ಕಠಿನವಾದ ಕಾಗದಕ್ಕೆ ಉತ್ತರವಾಗಿ ನಾನು ಎಷ್ಟು ದೈನ್ಯದಿಂದ ಪ್ರಾರ್ಥಿಸಿ ಬರೆದರೂ ಫಲವಾಗದೆ ಹೋಯಿತು.

**ಪ್ರಮದಾ:—** ಮಧುಕರ, ಹೋಗಲಿ ಅದನ್ನು ಮರೆತುಬಿಡು, ಹಿಂದಿನದನ್ನು ಜ್ಞಾಪಿಸಿ ನನ್ನನ್ನು ನೋಯಿಸಬೇಡ, ನಾನು ನಿನ್ನ ವಿಷಯದಲ್ಲಿ ನಿರಪರಾಧಿನಿಯಾಗಿರುವೆನು ನಾನು ಇಲ್ಲಿಗೆ ಬಂದ ಮೇಲೆಯೂ ಒಂದೆರಡು ವರ್ಷಗಳವರೆಗೆ ನನ್ನ ಮನೋವ್ಯಾಕುಲತೆಯೆಷ್ಟಿತ್ತೆಂಬುದನ್ನು ಹೇಳಲಾರೆನು. ಆಗ ನಾನು ನನ್ನ ತಾಯಿತಂದೆಗಳನ್ನು ಎಷ್ಟೆಷ್ಟೋ ಬಗೆಯಾಗಿ ಬಯ್ದು ಶಪಿಸುತ್ತಿದ್ದೆನು. ಅವರು ನಮ್ಮಿಬ್ಬರನ್ನೂ ಒಂದೇ ಕಡೆಯಲ್ಲಿ ಬಳೆಯಿಸಿದರೂ, ಆ ಬಗೆಯಾಗಿ ಬುದ್ಧಿ ತಿಳಿದ ನಮಗೆ ಪರಸ್ಪರ ಮೈತ್ರಿ ಹೆಚ್ಚುವಂತೆ ಹೇಳುತ್ತಿದ್ದುದು ತಪ್ಪೆಂದೂ, ಹೀಗೆ ಮಾಡಿಯೇ ದೊಡ್ಡವರು ಮಕ್ಕಳನ್ನು ಕೆಡಿಸುವರೆಂದೂ, ತಿಳಿದು ಅವರನ್ನು ದ್ವೇಷಿಸುತ್ತ ಬಂದೆನು. ನಾಸಿರಮಾತೇನು? ನನ್ನ ಜೀವಿತದಲ್ಲಿಯೇ ನನಗೆ ದ್ವೇಷವು ಹೆಚ್ಚಿತು, ಅದರ ಮೇಲೆ ಹೇಳುವುದಿನ್ನೇನು? ಇಷ್ಟಾದರೂ ನಿನ್ನ ವಿಷಯದಲ್ಲಿ ನಾನು ದ್ರೋಹಿಯಾಗಿಲ್ಲ, ನಿನ್ನ ಅಭ್ಯುದಯಕ್ಕಾಗಿ ಭಗವಂತನನ್ನು ಎಷ್ಟೋ ಬಗೆಯಿಂದ ಪ್ರಾರ್ಥಿಸುತ್ತಿದ್ದೆನು. ದಯಾಮಯನಾದ ಆ ಪರಮಾತ್ಮನ ಅನುಗ್ರಹದಿಂವ, ನಿನಗೆ ಅನುಕೂಲ ಭಾರ್ಯಾಪ್ರಾಪ್ತಿಯಾಯಿತೆಂದೂ, ನಮ್ಮ ತಾಯಿತಂದೆಗಳ ಆದರಕ್ಕೆ ನೀನು ಪಾತ್ರನಾದೆಯೆಂದೂ

ತಿಳಿದು ಸಮಾಧಾನವನ್ನೇ ಹೊಂದಿದೆನು. ಈ ನನ್ನ ಸಂತೋಷವನ್ನು ಹಾಗೆಯೇ ಅಡಗಿಸಿಕೊಂಡಿರಲಾರದೆ ನಿನಗೆ ಪತ್ರಿಕಾಮುಖದಿಂದ ತಿಳಿಸಿಯೂ ಇರುವೆನು. ಎಷ್ಟಾದರೇನು? ನನ್ನಲ್ಲಿ ಇನ್ನೂ ದುರಭಿಮಾನವು ಬಿಟ್ಟು ಹೋಗಿಲ್ಲ. ನನ್ನನ್ನು ಹೊಂದಿದವರ ಮನಸ್ಸಿಗೆ ನನ್ನಿಂದ ಯಾವ ಒಗೆಯ ಸುಖಸಂತೋಷವೂ ಇಲ್ಲ. ಇದು ನನಗೆ ಮತ್ತೂ ಅಷ್ಟು ಮನೋವ್ಯಥೆಗೆ ಕಾರಣವಾಗಿದೆ. ನಾನೇನು ಮಾಡಲಿ? ನಮ್ಮ ಅಕ್ಕನವರ ಸದ್ವರ್ತನ, ಸೌಶೀಲ್ಯ, ಕಾರ್ಯದಕ್ಷತೆ, ಪತಿಭಕ್ತಿ, ಪ್ರೇಮಭಾವ ಇತ್ಯಾದಿ ಸದ್ಗುಣಗಳನ್ನು ನೋಡಿಯೂ ಅವರಿಂದ ಸುಶಿಕ್ಷಣವನ್ನು ಹೊಂದಿಯೂ ಸದುಪದೇಶವನ್ನು ಕೇಳಿಯೂ, ನನಗೆ ಈಗಲೀಗ ಸ್ವಲ್ಪಸ್ವಲ್ಪವಾಗಿ ಕಣ್ದೆರೆವಂತಾಗಿದ್ದಿತು. ಆದರೆ ದೈವವು ಅಷ್ಟರಲ್ಲಿ ಅದನ್ನೇ ಮುರಿದು ಬಿಟ್ಟಿತು, ಇನ್ನು ನನಗಾವ ಆಶೆ ಉಳಿದಿರುವುದು?

**ಮಧುಕರ:**— ಹೋಗಲಿ, ಪ್ರಮದಾ! ಹಿಂದಿನ ವಿಚಾರವನ್ನು ಇನ್ನು ತೆಗೆದುಕೊಂಡು ಮಾಡುವುದೇನು? ಆದರೆ ನನ್ನ ಪ್ರಾರ್ಥನೆಯಿಷ್ಟೇ. ನೀನು ನಿನ್ನ ಜೀವಿತದಲ್ಲಿ ಇಷ್ಟು ಉಪೇಕ್ಷಾಭಾವವನ್ನು ಹೊಂದಬಾರದು; ನಿನ್ನಿಂದ ನಿನ್ನನ್ನು ಹೊಂದಿರುವರಿಗೆ ಸುಖಸಂತೋಷಗಳಿಲ್ಲವೆಂದು ಹೇಳುವುದು ಸರಿಯಲ್ಲ, ಜೀವಾನಂದಪ್ರದನಾದ ಪುತ್ರರತ್ನವನ್ನೇ ನೀನು ಹೊಂದಿರುವೆ, ವಂಶವೃದ್ಧಿಯನ್ನುಂಟುಮಾಡಿರುವ ನಿನ್ನಿಂದ ಸಂತೋಷವು ಹೆಚ್ಚದಿರುವುದೇ? (ಹೀಗೆ ಹೇಳಿ ಸ್ವಲ್ಪಹೊತ್ತು ಸುಮ್ಮನಿದ್ದು ಮತ್ತೆ) ಅದೂ ಹಾಗಿರಲಿ, ಹೇಳು—ನಿನ್ನ ಸುಕುಮಾರನಿಗೆ ಈಗ ಎಷ್ಟು ವರ್ಷ?

**ಪ್ರಮದಾ:**— ಈಗ ಮೂರನೇಯ ವರ್ಷವು ನಡೆಯುತ್ತಿದೆ.

**ಮಧುಕರ:**— ಹೆಸರೇನು?

**ಪ್ರಮದಾ:**— ಪ್ರದ್ಯುಮ್ನನೆಂದು ಕರೆವರು.

**ಮಧುಕರ:**— ಚೆನ್ನಾಗಿರುವುದು. ಈ ಹೆಸರನ್ನು ಆರಿಸಿ ಇಟ್ಟವರಾರು? ನೀನೋ—ನಿನ್ನ ಗಂಡನೋ?

**ಪ್ರಮದಾ:**— ನಾವಿಬ್ಬರೂ ಅಲ್ಲ; ಅವನ ಹಿರಿಯ ತಾಯಿಯೂ ಅಜ್ಜನೂ ಅಕ್ಕರೆಯಿಂದ ಇರಿಸಿದ ಹೆಸರು.

**ಮಧುಕರ:**— ಹಾಗೇನು? ಈ ಹುಡುಗನಲ್ಲಿ ಅವರಿಗೆ ಅಷ್ಟು

ಪ್ರೀತಿಯೂ ಇರುವುದೇ? ಆಶ್ಚರ್ಯ!

**ಪ್ರಮುದಾ:—** ಸುಳ್ಳಲ್ಲ. ಅವನ ಅಜ್ಜಂದಿರಂತೂ ವಂಶಕ್ಕೆಲ್ಲಾ ಈಗ ತಾನೇ ಕಣ್ತೆರೆಯಿತೆಂದು ಈ ಮೊಮ್ಮಗನನ್ನು ಪ್ರೀತಿಸುವುದು ಸ್ವಭಾವವೇ ಸರಿ. ಆದರೆ, ಪ್ರದ್ಯುಮ್ನನ ಹಿರಿಯ ತಾಯಿ—ಲಲಿತಾದೇವಿಯೇ ಅವನಿಗೆ ನಿಜವಾದ ತಾಯಿ. ಆಕೆಯಿಲ್ಲದಿದ್ದರೆ, ಪ್ರದ್ಯುಮ್ನನು ಬಾಲರೋಗಕ್ಕೆ ಆಗಲೇ ತುತ್ತಾಗಿ ನಮ್ಮನ್ನು ಕೈ ಬಿಟ್ಟು ಹೋಗುತ್ತಿದ್ದನು ಮಗನ ಲಾಲನೆ ಪಾಲನೆಗಳಲ್ಲಿ ಆಕೆ ನನ್ನನ್ನು ಕೂಡ ನಂಬುತ್ತಿರಲಿಲ್ಲ. ಆಕೆ ಹೊರಟುಹೋದಾಗಲಿಂದ ಪ್ರದ್ಯುಮ್ನನ ಅಳುವನ್ನೂ, ಹಟವನ್ನೂ ತಡೆವುದೇ ಕಷ್ಟವಾಗಿರುವುದು. ಕಾಲದುದಕ್ಕೆ ಅವನ ತಾತನು ಕಾಲವಾದುದರಿಂದ ಯಾವಾಗ ನೋಡಿದರೂ ಆಳುಗಳ ಹೆಗಲಮೇಲೆಯೇ ಇರಬೇಕೆಂದು ರಚ್ಚೆ ಮಾಡುತ್ತಿರುವನು.

**ಮಧುಕರ:—** ನಿನ್ನ ಗಂಡನು ನಿನ್ನ ವಿಷಯದಲ್ಲಿ ಹೇಗಿರುವನು? ಅವನಿಗ ನಿನ್ನ ಸವತಿಯಲ್ಲಿ ಹೆಚ್ಚು ಪ್ರೇಮವೋ? ನಿನ್ನಲ್ಲಿ ಹೆಚ್ಚು ಪ್ರೇಮವೋ?

(ಮಧುಕರನು ಈ ಪ್ರಶ್ನೆಯನ್ನು ಕುತೂಹಲದಿಂದ ಕೇಳಿದನು. ಪ್ರಮುದೆಗೆ ಅವನೊಡನೆ ಅಷ್ಟು ಸಲುಗೆಯಿದ್ದರೂ ಸ್ತ್ರೀಸ್ವಭಾವವಾದ ಲಜ್ಜೆಯಾಗದಿರಲಿಲ್ಲ. ಅದಕ್ಕವಳು) "ಮಧುಕರ! ನೀನು ಲಲಿತಾದೇವಿಯನ್ನು ನೋಡಿದ್ದರೆ, ಹೀಗೆ ಕೇಳುತ್ತಿರಲಿಲ್ಲ ಆಕೆಯನ್ನು ನೋಡಿದವರಾರೇ ಆಗಲಿ, ಆ ತಾಯಿ, ದುರ್ಗಾಂಶವೆಂದೇ ಹೇಳುತ್ತಾರೆ. ಅಂತಹರಲ್ಲಿ ಪತಿಯ ಮನಸ್ಸು ಹೇಗಿರಬೇಕೋ ನೀನೇ ಊಹಿಸು. ಆದರ ನನ್ನ ವಿಷಯದಲ್ಲಿ ಅಗೌರವವನ್ನಾಗಲೀ ಅವಿಶ್ವಾಸವನ್ನೇ ಆಗಲೀ ತೋರುತ್ತಿಲ್ಲ. ನನ್ನ ಮನಸ್ತೃಪ್ತಿಗಾಗಿ ಎಲ್ಲಾ ಸೌಕರ್ಯಗಳನ್ನೂ ಒದಗಿಸುವುದೇ ತಮ್ಮ ಕರ್ತವ್ಯವೆಂದೆಣಿಸಿರುವರು ಮತ್ತೇನು ಹೇಳಲಿ?" ಎಂದಳು.

**ಮಧುಕರ:—** ಸಂತೋಷ! ಪ್ರಮುದಾ! ನೀನು ನನ್ನ ಕೈ ತಪ್ಪಿ ಬೇರೆಯವರ ಒಡವೆಯಾಗಿ ಹೋಗಿದ್ದರೂ, ನಮ್ಮ ನೈಸರ್ಗಿಕವಾದ ಬಾಂಧವ್ಯದಿಂದ ಈಗ ನೀನು ಪಡುತ್ತಿರುವ ಸುಖವೈಭವಗಳಿಗಾಗಿ ಆನಂದಿಸುತ್ತಿರುವೆನು. ವಯಸ್ಸು ಕಳೆದ ಮೇಲೆ ಮಾಡಿಕೊಂಡಿರುವ ವಿವಾಹ

ವಾದುದರಿಂದ, ನಿನ್ನ ಗಂಡನು ನಿನ್ನಲ್ಲಿ ಇಷ್ಟು ಪ್ರೀತಿಯುಳ್ಳವನಾಗಿರುವುದು ಯುಕ್ತವೇ ಸರಿ. ಅದಿರಲಿ, ಈಗ ಅತನೆಲ್ಲಿಗೆ ಹೋಗಿರುವನು?

**ಪ್ರಮುದಾ:**— ಮಧುಕರ, ನಮ್ಮ ಮನೆಯ ವಿಚಾರವನ್ನು ಏಕೆ ಕೇಳುವೆ? ನನ್ನ ಅಕ್ಕನು ತನ್ನ ತಾಯಿ ಮೃತ್ಯುಮುಖದಲ್ಲಿರುವಳೆಂಬ ಸುದ್ದಿ ಬರಲು ತಾಯಿಯನ್ನು ನೋಡಿ ಬರಲು ತವರ್ಮನೆಗೆ ಹೋಗಿ ತಿಂಗಳಮೇಲಾಯ್ತು. ನಿನ್ನೆ ಬಂದ ವರ್ತಮಾನದಿಂದ ಆಕೆ, ಪಿತೃಗೃಹಕ್ಕೆ ಮುಟ್ಟಲಿಲ್ಲವೆಂದು ತಿಳಿಯಬಂದಿತು. ಆದರ ಮೇಲೆ ಯಜಮಾನರೇ ಹಿಂದುಮುಂದು ತೋರದೆ ಹುಚ್ಚರಂತಾಗಿ ಹೊರಟು ಹೋಗಿರುವರು. ಅವರು ಹೊರಟುಹೋಗಿರುವ ಸಮಯವನ್ನೇ ಕಾದಿದ್ದು, ಹಾಳಕಳ್ಳರಾರೋ ಮನೆಗೆ ಕನ್ನಹಾಕಿ ದೇವರು, ದೇವರಪೆಟ್ಟಿಗೆ, ಸಾಮಗ್ರಿಗಳು ಇವುಗಳನ್ನೇ ಕೊಂಡೊಯ್ದಿರುವರು. ಇನ್ನು ಯಜಮಾನರು ಬಂದು ಕೇಳಿದರೆ, ಏನು ಹೇಳಬೇಕೋ! ದೇವರೆಂದರೆ ಪ್ರಾಣವನ್ನಾದರೂ ಬಿಡುವೆನೆಂದಿದ್ದವರು ಮುಂದೇನು ಮಾಡಿಕೊಳ್ಳುವರೋ? ನನಗೆ ಮತ್ತಷ್ಟು ವ್ಯಾಕುಲವಾಗಿದೆ. ಮುಖ್ಯವಾಗಿ ಇದೆಲ್ಲವೂ ನನ್ನ ಗ್ರಹಚಾರವೆಂದೇ ಹೇಳಬೇಕು!'

**ಮಧುಕರ:**— ನಿನ್ನ ಗ್ರಹಚಾರವೋ ಮತ್ತಾರ ಗ್ರಹಚಾರವೋ ಅದಿರಲಿ, ನಿನ್ನೆ ನಿಮ್ಮ ಮನೆಗೆ ಯಾರಾದರೂ ಹೊರಗಿನವರು ಬಂದಿದ್ದರೋ?

**ಪ್ರಮುದಾ:**— ಏಕೆ? ಏತರಿಂದ ಕೇಳುವೆ?

**ಮಧುಕರ:**— ನಿನ್ನ ದಾಯಾದ, ಕುಮಾರಶೇಖರನೇ ಹೇಳಿದುದರಿಂದ ಕೇಳುವೆನು.

**ಪ್ರಮುದಾ:**— ನಿನ್ನೆ ಒಬ್ಬ ವಟು ಭಾವನಗರನಿವಾಸಿಯೆಂದೂ, ಯಜಮಾನರಲ್ಲಿ ವಿದ್ಯಾವ್ಯಾಸಂಗಕ್ಕೆಂದು ಬಂದಿರುವೆನೆಂದೂ ಹೇಳಿ, ಸ್ವಲ್ಪ ಹೊತ್ತು ಕುಳಿತಿದ್ದು, ಯಜಮಾನರನ್ನು ನೋಡಿ ಮಾತನಾಡುತ್ತಿದ್ದು ಅವರೇನು ಹೇಳಿದರೋ ಕೇಳಿ, ಹೊರಟುಹೋದನು, ಅಷ್ಟೆ.

**ಮಧುಕರ:**— ಸರಿ, ಬಿಡು! ಅವನೇ ಇಷ್ಟಕ್ಕೂ ಮೂಲ. ಅವನು ಮತ್ತಾರೂ ಅಲ್ಲ, ಕಳ್ಳರಿಗೆಲ್ಲಾ ಹೆಗ್ಗಡೆಯೇ ಆಗಿರಬೇಕು. ಮನೆಯ ಒಳಸಂಚನ್ನೂ ಮತ್ತು ಕಟ್ಟಡದ ವಿಧಾನವನ್ನೂ ತಿಳಿದುಕೊಂಡು

ಹೋಗಲು ಬಂದಿರಬೇಕಲ್ಲದೆ ಮತ್ತಾವುದಕ್ಕೂ ಬಂದಿರಲಿಲ್ಲವೆಂದು ತಿಳಿ.

**ಪ್ರಮದಾ:**— ಅದನ್ನು ನಿರ್ಧರಿಸಿ ಹೇಳುವಂತಿಲ್ಲ. ಅವನು ಇಲ್ಲಿಗೆ ಬಂದಿದ್ದುದು ವಿದ್ಯಾವ್ಯಾಸಂಗಕ್ಕೆಂದು; ಅವನು ಮನೆಯಲ್ಲಿದ್ದುದು ಸುಮಾರು ಒಂದು ಗಂಟೆಯು ಹೊತ್ತು ಮಾತ್ರವೇ, ಅಲ್ಲದೇ ಬೀದಿಯ ಜಗುಲಿಯ ಮೇಲೆಯೇ ಕುಳಿತಿದ್ದನು. ನಾನು ಕರದ ಮೇಲೆ ಬಂದು, ಬೀದಿಯ ಮುಂದಿನ ಅಂಗಳದಲ್ಲಿ ಕುಳಿತ ಸ್ವಲ್ಪ ಹೊತ್ತಿಗೇ ಅವರೂ ಬಂದರು. ಅಷ್ಟರಲ್ಲಿ ಏನೇನನ್ನು ತಿಳಿದುಹೋಗಬಹುದು? ಪಾಪ! ಎಲ್ಲಿಂದಲೋ ಬಂದು, ಏನನ್ನೂ ತಿಳಿಯದಿದ್ದ ಅವನು ಹಾಗೆ ದ್ರೋಹಿಯಂತೆ ಕಾಣುತ್ತಿರಲಿಲ್ಲ. ಆ ಬ್ರಹ್ಮಚಾರಿಯ ಮೇಲೆ ಹಾಕುವುದು ಯಾವ ನ್ಯಾಯ?

**ಮಧುಕರ:**— ಹಾಗಿದ್ದರೆ, ಪ್ರಮದಾ, ಕುಮಾರಶೇಖರನು ಅವನಲ್ಲಿ ಶಂಕಿಸಲು ಕಾರಣವಿರುತ್ತಿರಲಿಲ್ಲ. ಕುಮಾರಶೇಖರನು ಹೇಳುವುದರಿಂದ ಅವನು ಒಬ್ಬನೇ ಬಂದಿಲ್ಲವೆಂದೂ, ಆರನ್ನೋ ಜೊತೆಗೊಂಡೇ ಬಂದಿರುವನೆಂದೂ, ಈ ಮನೆಯಲ್ಲದೆ ಮತ್ತೆರಡು ಮನೆಯಲ್ಲಿಯೂ ಕಳ್ಳತನವನ್ನು ಮಾಡಲು ಎಲ್ಲವನ್ನೂ ಹವಣಿಸಿಕೊಂಡಿದ್ದನೆಂದೂ ತಿಳಿಯಬಂದಿರುವುದು. ಇದಲ್ಲದ, ಅಲ್ಲಲ್ಲಿ ಜನರ ಗುಂಪು ಸೇರಿ ಗುಸುಗುಸುಗುಟ್ಟುತ್ತಿರುವುದರಿಂದ, ನಿಮ್ಮ ಮನೆಯನ್ನು ಮುರಿಯಬೇಕೆಂಬ ಸನ್ನಾಹಗಳು ಈಗ ಮೂರು ನಾಲ್ಕು ತಿಂಗಳಿಂದ ನಡೆಯುತ್ತಿರುವುವೆಂದೂ, ಅವು ಈಚೀಚೆಗೆ ನಾಲ್ಕಾರು ಕಡೆಗೂ ಹಬ್ಬಿ ಬಂದು, ಈಗ ಈ ಬಗೆಯಾಗಿ ಒಂದೇ ವೇಳೆಯಲ್ಲಿ ನಿಮ್ಮ ಮನೆಯಮೇಲೆ ಮುರಿದು ಬೀಳುತ್ತಿರುವುವೆಂದೂ ಭಾವಿಸಬೇಕಾಗಿರುವುದು.

**ಪ್ರಮದಾ:**— ನನಗದಾವುದೂ ಗೊತ್ತಿಲ್ಲ. ಮನೆಯಲ್ಲಿ ಕಳುವಾಗಿ ಹೋಗಿರುವುದು ಮಾತ್ರ ನಿಜ. ಇಷ್ಟಲ್ಲದೆ ನಾನು ಇನ್ನಾರಲ್ಲಿಯೂ ಶಂಕಿಸಲಾರೆನು. ಇದನ್ನೆಲ್ಲಾ ಕುಮಾರಶೇಖರನು ಹೇಗೆ ತಿಳಿದನೋ, ನೀನು ಹೇಗೆ, ಯಾವಾಗ, ಏತಕ್ಕಾಗಿ ತಿಳಿದುಬಂದೆಯೋ, ತಿಳಿಸಬಹುದಾಗಿದ್ದರೆ ಕೇಳಬಲ್ಲೆನು.

**ಮಧುಕರ:**— ಏಕೆಂದರೆ, ಕುಮಾರಶೇಖರನು ಇಲ್ಲಿಯ ದಂಡಾಧಿಕಾರಿ, (*Police Superintendent*) ಎಂದರೆ ದುರ್ಗಾಪ್ರಸಾದನ ಬಳಿಯಲ್ಲಿ ಒಬ್ಬ ಗುಮಾಸ್ತ (*Clerk*) ನಾಗಿರುವನಷ್ಟೆ. ಅವನಿಗೆ ಈ

ಸಂಗತಿಗಳು ಎಂದರೆ ನಿಮ್ಮ ಮನೆಯಲ್ಲಿ ಕಳುವಾದ ವಿಷಯವೂ, ಮೊದಲು ಇಲ್ಲಿಗೆ ಬಂದು ಹೋಗಿದ್ದವರ ಚರ್ಯೆಗಳೂ ಮನೆಯಾಳುಗಳ ಮುಖದಿಂದ ತಿಳಿದುವಂತೆ. ಆದರಮೇಲೆ, ನಿನ್ನ ಗಂಡನು ಊರಲ್ಲಿಲ್ಲದಿರುವಾಗ ಹೀಗಾಗಿರುವುದರಿಂದ, ಮನೆಗೆ ಅಪಾಯವೇನು ಸಂಭವಿಸುವುದೋ, ಹೇಗೋ ಎಂಬ ಶಂಕೆಯಿಂದ ಪೋಲೀಸ್ ಇಲಾಖೆಯವರಿಗೆ ವರ್ತಮಾನಕೊಟ್ಟನು. ಪೋಲೀಸ್ ಇಲಾಖೆಯಲ್ಲಿ ನಾನು ಒಬ್ಬ 'ಪತ್ತೇದಾರ' ನಾಗಿ ಈ ನಗರಕ್ಕೆ ವರ್ಗಾಯಿಸಲ್ಪಟ್ಟು ಬಂದು, ಮೂರು ನಾಲ್ಕು ತಿಂಗಳಿಂದ ಇಲ್ಲಿಯೇ ಇರುತ್ತಿರುವುದರಿಂದ, ಇಲ್ಲಿಯ 'ಪತ್ತೆತರದೂದಿಗೆ' ನನ್ನನ್ನೇ ಮುಂದೆ ನಿಲ್ಲಬೇಕೆಂದು ಕೇಳಿಕೊಂಡಿರುವನು. ಆದರಮೇಲೆ ನಾನು ನಿನ್ನನ್ನು ಕಂಡರೆ ವಿಷಯವೇನೆಂಬುದನ್ನು ತಿಳಿದುಕೊಂಡು ಬಹುಕಾಲದಮೇಲೆ ಇಂದು ಒಂದೆರಡು ಘಳಿಗೆಯಾದರೂ ಸಾವಧಾನದಿಂದ ಮಾತನಾಡಿ ಪೂರ್ವ ಬಾಂಧವ್ಯವನ್ನು ಜ್ಞಾಪಿಸಿಕೊಟ್ಟು, ಮಾತನಾಡಿದಂತಾಗುವದೆಂದು ಬಂದೆನು. ಈಗ ಎಲ್ಲವೂ ಒಂದೊಂದಾಗಿ ತಿಳಿದು ಬರುತ್ತಿರುವುದು.

(ಇಷ್ಟರಲ್ಲಿ ಕೆಳಗೆ) "ಹಾ, ಅಯ್ಯೋ, ಅಪಘಾತ! ಅಪಘಾತ, ಅಯ್ಯಯ್ಯೋ, ಯಾರೂ ಇಲ್ಲವ? ಕೇಳಿನೋಡುವವರೇ ಇಲ್ಲವೇ? ಹೋಯಿತು–ಅಯ್ಯೋ ಹೋಯಿತು" ಎಂಬ ಆರ್ತನಾದವು ಕೇಳಿಬಂದು ಕುಳಿತಿದ್ದ ಇಬ್ಬರನ್ನೂ ಭಯಚಕಿತರನ್ನಾಗಿ ಮಾಡಿತು. ಪ್ರಮದೆ ಧಿಗ್ಗನೆದ್ದು ಬಂದೇ ಓಟದಿಂದ ಓಡಿಬಂದು ಕೆಳಗಿಳಿದು, ನಡುಹಜಾರದಬಳಿಗೆ ಬಂದು ನೋಡಿದಳು. ಬಾಗಿಲನ್ನು ಕಾಯುತ್ತಿದ್ದ ಮುದುಗನ ಬೆನ್ನಿಗೆ ತುಬಾಕಿ (*Pistol*) ಯ ಗೋಲಿ ತಗುಲಿ ರಕ್ತವು ಧಾರಾಕಾರವಾಗಿ ಸುರಿಯುತ್ತಿದ್ದಿತು. ಅವನು ಕಂಠಗತಪ್ರಾಣನಾಗಿ ಅಲ್ಲೇ ಬಿದ್ದಿದ್ದನು. ಹಜಾರದ ಒಳಗಡೆಯಲ್ಲಿ ನೋಡಿದಳು, ಮನೆಯ ಬಾಗಿಲುಗಳೆಲ್ಲವೂ ತೆರೆದು ಹೋಗಿದ್ದುವು. ಎಲ್ಲೆಲ್ಲಿಯೂ ರಕ್ತದ ಕಲೆಗಳೇ ಕಾಣುತ್ತಿದ್ದುವು. ಪ್ರಮದೆ ಚೀತ್ಕಾರ ಮಾಡುತ್ತಲೂ ಹುಡುಕುತ್ತಲೂ ಬಂದಳು, ಅಲ್ಲಿಯೇ ಪ್ರದ್ಯುಮ್ನನ ಉಡುಪುಗಳು ರಕ್ತದಿಂದ ನೆನೆದು ಬಿದ್ದಿದ್ದುವು! ರಕ್ತದ ಗುಂಡಿಯೇ ನಿಂತಿದ್ದಿತು! ಮಗುವಿನ ಪ್ರಾಣವನ್ನಾರೋ ತೆಗೆದುಬಿಟ್ಟರೆಂದೇ ತಿಳಿದಳು. ಆದರೆ ದೇಹವೇನಾಯಿತೋ ತಿಳಿಯಲಿಲ್ಲ. ಮತ್ತೆ ನೋಡಿದಳು, ಮುಂದೆ

ಖಂಡಖಂಡವಾಗಿ ತುಂಡಿಸಲ್ಪಟ್ಟು ಬಿದ್ದಿದ್ದ ಸೇವಕನ ದೇಹವನ್ನೂ ಕಂಡಳು ಇದೆಲ್ಲವನ್ನೂ ನೋಡುತ್ತ ನೋಡುತ್ತ ಪ್ರಮದೆಯ ದೇಹವು ಕಂಪಿಸತೊಡಗಿತು, ಬಾಯಿಂದ ಮಾತೇ ಹೊರಡದಂತಾಯಿತು. 'ಅಯ್ಯೋ, ಕಷ್ಟ, ಹಾ ಕಂದಾ, ಏನಾದೆ, ಅಯ್ಯೋ ಹೋದೆಯಾ? ಎಂದು ಹೇಳುತ್ತ ಮೂರ್ಛಿತೆಯಾಗಿ ಕೆಳಗೆ ಬಿದ್ದಳು.

ಇವೆಲ್ಲವನ್ನೂ ನೋಡುತ್ತ ಇವಳ ಹಿಂದೆಹಿಂದೆಯೇ ಬರುತ್ತಿದ್ದ ಮಧುಕರನು ತನ್ನ ಮನಸ್ಸಲ್ಲಿ ನಾನಾವಿಧಭಾವನೆಗಳು ಏಕೀಭವಿಸಿರಲು ಪ್ರಮದೆಯ ಸ್ಥಿತಿಗೆ ಬಿತಿಗೊಂಡು ಮೂರ್ಛೆಗೊಂಡು ಬಿದ್ದಿದ್ದವಳನ್ನು ಉಪಚರಿಸಿ, ಎತ್ತಿ ಕುಳ್ಳಿರಿಸಿ– " ಪ್ರಮದಾ ! ಈ ವೇಳೆಯಲ್ಲಿ ನೀನು ಹೀಗೆ ಆರ್ತಳಾಗಬಾರದು, ಏಳು " ಎಂದು ಸಂತಯಿಸಿದನು.

**ಪ್ರಮದಾ:—** ( ಸ್ವಲ್ಪ ಹೊತ್ತಿನಮೇಲೆ ಜ್ಞಾನವುಂಟಾಗಿ ಕಣ್ದೆರೆದು ನೋಡಿ, ಕೈಬಿಡಿಸಿಕೊಂಡೆದ್ದು ನಿಂತು ಉನ್ಮತ್ತೆಯಂತೆ) ಅಯ್ಯೋ ನನ್ನ ಪ್ರದ್ಯುಮ್ನ, ಏನಾದೆಯೋ ? ಅಯ್ಯೋ ಅಪಘಾತವಾಯಿತು, ನನ್ನ ಕಂದನು ನನ್ನನ್ನು ಬಿಟ್ಟುಹೋದನು ! ನಾನು ಪಾಪಿ. ಇಲ್ಲಿ ನೋಡು, ಮಧುಕರ, ಇವನೇ ಪ್ರದ್ಯುಮ್ನನನ್ನು ಆಡಿಸುತ್ತಿದ್ದ ಆಳು ಆಯಿತು, ಇನ್ನು ನಮ್ಮ ಮನೆತನದ ಆಶೆ ಇಲ್ಲಿಗೆ ಮುಗಿಯಿತು ಅಯ್ಯೋ ದೇವರೇ—ಪಾಪಿ ದೇವರೇ ! ಕಟುಕನಾಗಿ ಇಷ್ಟನ್ನೂ ಮಾಡಿದೆಯಾ ? ಇದೇ ನಿನ್ನ ಲೀಲೆಯಲ್ಲತ್ತೇ ? ಅಪ್ಪಾ ! ಅಯ್ಯೋ—ಮಗುವೇ ! " (ಎಂದು ಅಳುತ್ತಳುತ್ತ-ಹಿತ್ತಿಲಕಡೆಗೆ ಓಡಿಹೋದಳು ಮಧುಕರನೂ ಹಿಂದೆಯೇ ಓಡಿಬಂದು— ತಡೆಗಟ್ಟಿ,) ' ಇದೇನು ಪ್ರಮದೆ, ಇದೇನು—ಸಾಹಸ ? ಎಲ್ಲಿಗೆ ಹೋಗುವೆ— ಏನು ಮಾಡಬೇಕೆಂದಿರುವ ? ' ಎಂದನು.

**ಪ್ರಮದೆ:—** ಮಧುಕರ ! ಬಿಡು, ನನ್ನನ್ನು ತಡೆಯದೆ ಬಿಟ್ಟು ಬಿಡು. ನಾನು ಕೆಟ್ಟಹೊತ್ತಿನಲ್ಲಿ ಹುಟ್ಟಿದೆನು. ನನ್ನ ದೆಸೆಯಿಂದ ಯಾರಿಗೂ ಸುಖವಿಲ್ಲ ನಾನಿದ್ದು ಫಲವಿಲ್ಲ, ಹೋಗುವೆನು. ಜನಗಳ ಕಣ್ಣಿಗೆಕಾಣದೆ ಹೊರಟೇ ಹೋಗುವೆನು. ಬಿಟ್ಟು ಬಿಡು, ನನ್ನ ಹೃತ್ತಾಪಕ್ಕೆ ಈಗಲೇ ನಾನು ಶಾಂತಿಮಾಡಿಕೊಳ್ಳಬೇಕು. ನೀನು ಹೊರಟು ಹೋಗು, ಮಧುಕರ, ಆದರೆ, ನನ್ನದೊಂದು ಮಾತು. ನನ್ನ ತಾಯಿ

ತಂದೆಗಳಲ್ಲಿ ನನ್ನ ವಂದನೆಯನ್ನು ಹೇಳು, ನನಗೆ ಮುಂದೆಯಾದರೂ ಸದ್ಗತಿಯಾಗುವಂತೆ ಆಶೀರ್ವದಿಸಲು ಮತ್ತೆಮತ್ತೆ ಹೇಳು. ನೀನಿನ್ನು ನಡೆ. ನನ್ನ ತಂದೆಯ–ನಿನ್ನ ಸೋದರಮಾವನ ಸಂಪತ್ತಿಗೆಲ್ಲ ನೀನೇ ಉತ್ತರಾಧಿಕಾರಿಯಾಗಿರುವೆ. ಇನ್ನು ಹೊರಡು, ಸುಖಿಯಾಗಿರು, ಮಧುಕರ! ಒಂದು ವೇಳೆ ನನ್ನ ಅಕ್ಕನೂ ಸ್ವಾಮಿಯೂ ಬಂದು ನೀನು ಅವರನ್ನು ಕಂಡರೆ, ನನ್ನ ಅಂತ್ಯ ನಮಸ್ಕಾರಗಳನ್ನು ತಿಳಿಸಿಬಿಡು. ನನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹೋಗುವೆನು, ಬಿಡು, ಬಿಡು; ಇನ್ನು ಬಿಟ್ಟುಬಿಡು!" ಎಂದು ಹುಚ್ಚಳಂತಾಡುತ್ತಿದ್ದಳು.

**ಮಧುಕರ:**– ಪ್ರಮದಾ! ದುಡುಕಬೇಡ, ಶಾಂತಳಾಗು, ಪ್ರಾಣಕ್ಕೆ ಅಪಾಯವನ್ನುಂಟುಮಾಡಿಕೊಳ್ಳಬೇಡ! ಜೀವದಿಂದಿದ್ದರೆ ಎಂದಾದರೂ ಸುಖವನ್ನು ಹೊಂದಿಯೇಹೊಂದುವೆ ವಿದ್ಯಮಾನವನ್ನು ಚೆನ್ನಾಗಿ ಪರಿಶೀಲಿಸುವುದಕ್ಕೆ ಮೊದಲೇ ಹೀಗೆ ಸರ್ವನಾಶಮಾಡಿಕೊಳ್ಳಬಾರದು. ಪ್ರದ್ಯುಮ್ನನನ್ನು ಕೊಂದೇ ಹಾಕಿರುವರೆಂಬುದನ್ನು ಈಗಲೇ ಹೇಗೆ ನಿರ್ಧರಿಸುವೆ? ಈಗ ನೀನು ಆತ್ಮಹತ್ಯೆಮಾಡಿಕೊಂಡರೆ ನೋಡು, ನಿನ್ನ ಗಂಡನ ಹೆಸರೇ ನಿಲ್ಲದೆಹೋಗುವುದೂ ಅಲ್ಲದೆ ನಿಮ್ಮ ಮನೆತನಕ್ಕೆ ಲೋಕಾಪವಾದವೂ, ಸ್ತ್ರೀಹತ್ಯಾಪಾತಕವೂ ಸುತ್ತಿಕೊಳ್ಳುವಂತಾಗುವುದು. ಇದನ್ನಾದರೂ ನೀನು ಆಲೋಚಿಸಬೇಡವೇ? (ಮಧುಕರನು ಪ್ರಮದೆಯನ್ನು ಸಂತಯಿಸುತ್ತಿರುವಾಗಲೇ ನೆರೆಹೊರೆ ಮನೆಗಳಲ್ಲಿದ್ದ ಹೆಂಗಸರೂ ಗಂಡಸರೂ ಮಕ್ಕಳು ಮೊದಲ್ಗೊಂಡು ಎಲ್ಲರೂ ಬಂದು ಗುಂಪಾಗಿ ಸೇರಿದರು. ಮಧುಕರನು ಬಂದವರನ್ನು ನೋಡಿ, ಎಚ್ಚೆತ್ತವನಂತೆ ತಲೆಯೆತ್ತಿ–'ಅಮ್ಮ, ನೋಡಿದಿರಾ? ಗೃಹಸ್ವಾಮಿಯಿಲ್ಲದವೇಳೆಯಲ್ಲಿ, ಪಾಪ? ಈಕೆಗೆ ಎಂತಹ ಅಪಾಯಸ್ಥಿತಿಯುಂಟಾಗಿರುವುದು! ನೋಡಿವಿರೇ? ಇಲ್ಲಿ ಆಗಿರುವ ಭಯಂಕರ ವ್ಯಾಪಾರಕ್ಕೆ ಕಾರಣರು ಯಾರೆಂಬುದರ ಸೂಚನೆಯಿನ್ನೂ ತಿಳಿಯದಿರುವಾಗ ಈಕೆ ಭಾವಿಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಿಕೊಳ್ಳುವೆನೆಂದು ಓಡಿಬಂದಿರುವಳು, ನಾನೂ ಇದುವರೆಗೂ ಇವಳನ್ನು ತಡೆದಿದ್ದೆನು. ಈಗ ನೀವೆಲ್ಲರೂ ಬಂದಿರುವಿರಿ. ದಯೆಯಿಟ್ಟು ಈಕೆಯನ್ನು ನೋಡಿಕೊಳ್ಳಿರಿ, ನಾನು ಈಗಲೇ ಹೋಗಿ, ಪೋಲೀಸಿಗೆ ವರ್ತಮಾನಕೊಟ್ಟು, ಸಹಾಯವನ್ನು ಹೊಂದಿ ಬರು

ತ್ತೇನೆ. ಅಮ್ಮ ! ಅಮ್ಮ ! ಭದ್ರ ! ಎಚ್ಚರಿಕೆಯಲ್ಲಿ ನೋಡಿಕೊಳ್ಳಿರಿ," ಎಂದು ಹೇಳಿ ಹೊರಟುಹೋದನು.

(ಪ್ರಮದೆ ದೇಹಸ್ಮೃತಿಯಿಲ್ಲದೆ ನಿಂತಲ್ಲಿಯೇ ಕುಳಿತುಬಿಟ್ಟಳು. ನೆರೆ ಹೊರೆಯ ಹೆಂಗಸರು ಬಂದು ಪ್ರಮದೆಯ ಸುತ್ತುಮುತ್ತಲೂ ಕುಳಿತರು. ಗಂಡಸರು ಬೀದಿಯಲ್ಲಿಯೂ, ಹಿತ್ತಿಲಲ್ಲಿಯೂ ಗುಂಪು ಕೂಡಿ ಕುಳಿತರು. ಹುಡುಗರು ಗುಂಪುಗುಂಪಾಗಿ ಮನೆಮನೆಗೂ ಹೋಗಿ, ಮಹಾಮಹೋಪಾಧ್ಯಾಯನ ಮನೆಯಲ್ಲಿ ನಡೆದ ಅನಾಹೂತವನ್ನು ಹೇಳಿ ಒಬ್ಬೊಬ್ಬರಾಗಿ ಬಂದು ನೋಡಿಹೋಗುವಂತೆ ಮಾಡುತ್ತಿದ್ದರು.)

ನೋಡುತ್ತಿದ್ದಂತೆಯೇ, ಸ್ವಲ್ಪಹೊತ್ತಿನೊಳಗಾಗಿ ಮಧುಕರನು ಪೋಲೀಸಿನವರೊಡನೆ ದುರ್ಗಾಪ್ರಸಾದನನ್ನು ಕರೆದುಕೊಂಡು ಬಂದು ಎಲ್ಲವನ್ನೂ ತೋರಿಸಿದನು.

(ದುರ್ಗಾಪ್ರಸಾದನಿಗೆ ಕ್ರೋಧ, ವಿಸ್ಮಯ, ಕನಿಕರ ಇವೆಲ್ಲವೂ ಏಕ ಕಾಲದಲ್ಲಿ ಹುಟ್ಟಿ ಮುಖವು ವಿವರ್ಣವಾಗಲು, ಪ್ರಮದೆಯನ್ನು ಕುರಿತು–) "ಅಮ್ಮಾ ! ಧೈರ್ಯವನ್ನು ತಂದುಕೊಳ್ಳಿರಿ. ಸಂಗತಿಯೇನು ? ಈ ದುಷ್ಕೃತ್ಯವನ್ನು ಮಾಡಿದವರಾರು ? ನಿಮಗೆ ಸಂದೇಹವಾರಲ್ಲಿ ? ಎಲ್ಲವನ್ನೂ ಧೈರ್ಯದಿಂದ ಹೇಳಿರಿ." ಎಂದನು.

**ಪ್ರಮುದಾ:—** (ತೊದಲು ನಾಲಿಗೆಯಿಂದ) "ಅಪ್ಪ ! ನನಗೇನೂ ತಿಳಿಯದು. ನಾನಾರಲ್ಲಿಯೂ ಸಂದೇಹಪಡಲಾರೆನು. ನನ್ನ ಪಾಪದಿಂದಲೇ ಹೀಗಾಗಿರಬೇಕಲ್ಲದೆ, ನನಗಿನ್ನಾವುದೂ ಹೇಳಲು ತಿಳಿವುದಿಲ್ಲ. ನೀವೇ ನಿಮಗೆ ತೋರಿದಂತೆ ಮಾಡಿರಿ. ನನ್ನ ಮಗು, ಅಯ್ಯೋ, ನಿರ್ಭಾಗ್ಯೆಯಾದ ನನಗೆ ಮಗುವೆಂದರೇನು ? ಈ ಮನೆ ಯಜಮಾನರಮಗು ಏನಾಯಿತೋ ತಿಳಿಯದು. ಬದುಕಿದ್ದರೆ ತಂದುಕೊಟ್ಟರೆ ಕೋಟಿ ಪುಣ್ಯವುಂಟು ! ಅಪ್ಪ, ಇಷ್ಟುಮಾತ್ರ ಮಾಡಿ, ಮಗು ಸತ್ತುಹೋಗಿದ್ದರೆ, ಅದರ ಕಳೇಬರವನ್ನಾದರೂ ತರಿಸಿಕೊಡಿರಿ; ಆಗುವುದೇ." ಎಂದು ಅತ್ತುಬಿಟ್ಟಳು.

**ದು. ಪ್ರ:—** "ಇರಲಿ, ತಾಯಿ ! ಈಗಲೇ ಏನೂ ಹೇಳುವಂತಿಲ್ಲ; ಸ್ವಲ್ಪ ನಿಧಾನಿಸಿರಿ. ನಾಳೆಯೊಳಗಾಗಿ ನಿಜವಾದ ವಿದ್ಯಮಾನವನ್ನು ತಿಳಿದು ಹೇಳುವೆವು. ಅದುವರೆಗೆ ದುಡುಕಿ ಯಾವ ಅಪಾಯವನ್ನೂ ತಂದುಕೊಳ್ಳ

ಬೇಡಿರಿ, " (ಎಂದು ಹೇಳಿ, ಬಂದಿದ್ದವರೆಲ್ಲರನ್ನೂ ಹೊರಗೆಕಳಿಹಿ, ಪ್ರಮದೆಯ ಸಹಾಯಕ್ಕೆ ನೆರೆಹೊರೆಯಲ್ಲಿಯ ಹೆಂಗಸರಿಬ್ಬರನ್ನು ನಿಯಮಿಸಿ, ಮನೆಗೆ ಕಾವಲಿರಿಸಿ ಗಾಯಹೊಂದಿ ಕೆಳಗೆ ಬಿಂಡಿಸಲ್ಪಟ್ಟು ಬಿದ್ದಿದ್ದ ಆಳುಗಳ ಶವಗಳನ್ನು ಸೇವಕರಿಂದ ಹೊರಿಸಿ ರಾಣೆಗೆ ಕಳುಹಿ ಎಲ್ಲರೊಡನೆ ಹೊರಟುಹೋದನು ಒಂದೆರಡು ಗಂಟೆಯೊಳಗಾಗಿ ಈ ಅಪಘಾತದ ವೃತ್ತಾಂತವು ಕಲ್ಯಾಣನಗರದ ಬೀದಿಬೀದಿಯಲ್ಲೆಲ್ಲಾ ಹರಡಿಕೊಂಡಿತು.)

---

ಶ್ರೀ:

## ಸಪ್ತಮ ಪರಿಚ್ಛೇದ.

---

"ಸೂತ — ಪರಿತ್ರಾಯತಾಂ ಪರಿತ್ರಾಯತಾಂ ಕುಮಾರ "

(ವೇಣೀಸಂಹಾರ)

(ಭಯಸೂಚನೆ)

ದುರ್ಗಾಪ್ರಸಾದನು ತನ್ನ ಬರೆಯುವ ಕಿರುಮನೆಯೊಳಗೆ ಉಡುಪನ್ನು ಧರಿಸುತ್ತಿದ್ದನು. ಬಳಿಯಲ್ಲಿ ಶಾಂತಗುಣಸ್ವರೂಪಿಣಿಯಾದ ಈತನ ಕಾಂತೆ ತ್ವರೆಯ ಕೆಲಸಕ್ಕಾಗಿ ಹೊರಡುತ್ತಿರುವ ಪತಿಗೆ, ಉಪಾಹಾರವನ್ನೂ ಪೇಯವನ್ನೂ ಸಿದ್ಧಪಡಿಸಿ ತಂದು ಕೈಯಲ್ಲಿ ಹಿಡಿದುಕೊಂಡು ನಿಂತಿದ್ದಳು. ಪ್ರಸಾದನು ಉಡುಪನ್ನು ಧರಿಸಿದ ಬಳಿಕ ಕುರ್ಚಿಯ ಮೇಲೆ ಕುಳಿತು, ಪತ್ನಿಯ ಕೈಯ್ಯಲ್ಲಿದ್ದ ಆಹಾರದ ಪಾತ್ರೆಯನ್ನು ಮೇಜಿನ ಮೇಲಿರಿಸಿ, ಮುಂದಿದ್ದ ಮತ್ತೊಂದು ಕುರ್ಚಿಯ ಮೇಲೆ ಪತ್ನಿಯನ್ನು ಕುಳಿತುಕೊಳ್ಳುವಂತೆ ಹೇಳಿದನು. ಆದರೆ ಅವಳು ' ಇನ್ನೂ ಅಷ್ಟರ ಸಮಾನಸ್ಕಂಧತೆಗೆ ತಾನು ಅರ್ಹಳಾಗಿರುವೆನೆಂದು ತಿಳಿಯದಿದ್ದುದರಿಂದ ಪತಿಯ ಮುಂದೆ ಕುರ್ಚಿಯ ಮೇಲೆ ಕೈಯ್ಯೂರಿ ನಿಂತಿದ್ದಳಲ್ಲದೆ ಕುಳಿತುಕೊಳ್ಳಲಿಲ್ಲ.

**ದು. ಪ್ರ —** (ನಸುನಗುತ್ತ) ಹೇಮಲತೆ! ಇನ್ನೂ ನಿನ್ನ ಹಳ್ಳಿಗಾಡಿನ ಒರಟುತನವು ಬಿಟ್ಟಿಲ್ಲವಲ್ಲವೆ?' ಎಂದನು.

**ಹೇಮಲತೆ —** (ಕಿರುನಗೆಯಿಂದ) 'ಹುಟ್ಟುಸುಳಿ ಹೇಗೆ ಬಿಡುವುದು? ಹಳ್ಳಿಯಲ್ಲಿಯೇ ಹುಟ್ಟಿ, ಹಳ್ಳಿಯಲ್ಲಿಯೇ ಬಳೆದು, ಹಳ್ಳಿಯವರ ನಡವಳಿಯನ್ನೇ ಕಲಿತಿರುವವಳಿಗೆ ನಾಗರಿಕತೆ ಬರುವುದು ಕಷ್ಟವಲ್ಲವೆ?' ಎಂದಳು.

**ದು ಪ್ರ:—** 'ನೀನು ಮಾತನ್ನು ಜೋಡಿಸಿ ಹೇಳುವುದರಲ್ಲಿ ಯಾವ ನಾಗರಿಕಳಿಗೂ ಕಡಿಮೆಯವಳಾದವಳಲ್ಲ. ಅದು ಸರಿಯೆ, ಆದರೆ ನೋಡು, ನೀನೂ ಒಬ್ಬ ಅಧಿಕಾರಿಯ ಪತ್ನಿಯಾಗಿರುವೆ. ವಿದ್ಯಾಬುದ್ಧಿಗಳನ್ನು ತಿಳಿದ ಪ್ರೌಢಾಂಗನೆಯೂ ಅಹುದು. ಹೀಗಿದ್ದರೂ ಪತಿಯ ಮನಸ್ಸಿಗೆ ಹಿತವಾಗುವಂತೆ ಮಾಡುವ ಸಹಚಾರಿಣಿಯಾದ ಸಖಿಯಾಗಿರಲು ಮಾತ್ರ ಹಿಂದೆಗೆಯುತ್ತಿರುವೆಯಲ್ಲ, ಇದೇಕೆ ಹೀಗೆ?"

**ಹೇಮ:—** (ಮಂದಹಾಸದಿಂದ) 'ಅಧಿಕಾರಿಗಳಾರು? ನಾನೇನೋ ನನ್ನ ಸ್ವಾಮಿಯೂ ದೇಶಸೇವಕರಲ್ಲಿ ಒಬ್ಬರಾಗಿರಬೇಕೆಂದೂ, ನಾನು ಅವರ ಚರಣದಾಸಿಯೆಂದೂ ತಿಳಿದಿರುವೆನಲ್ಲದೆ, ಅಧಿಕಾರಿಯಾರೆಂದಾಗಲೀ ಅಧಿಕಾರದ ಅವಷ್ಟಂಭವನ್ನು ಹೇಗೆ ತೋರುವುದೆಂದಾಗಲೀ ತಿಳಿದಿಲ್ಲ. ಇದಲ್ಲದೆ, ಸ್ವಾಮಿ ತಿಳಿದಿರುವಂತೆ ನಾನು ಪ್ರೌಢವರ್ಗಕ್ಕೆ ಸೇರಬೇಕಾದರೆ, ಇನ್ನೂ ಬಹುಕಾಲ ಹಿಡಿಯಬೇಕು! ಹೀಗಿರುವ ನಾನು, ಸಹಚಾರಿಣಿಯಾಗುವುದು ಹೇಗೆ? 'ಸಹಚಾರಿಣಿ' ಎಂದರೆ ಅರ್ಥವೇನು?— 'ಪತಿಯ ಹಿಂದೆ, ಮುಂದೆ, ಹೋದಲ್ಲಿಗೆಲ್ಲಾ ಜತೆಯಲ್ಲಿಯೇ ತಿರುಗುತ್ತಿರುವುದೂ, ಪತಿಯು ಮಾಡುವ, ನೋಡುವ, ಆಡುವ—ಕಾರ್ಯಕರಣ ಕಲಾಪಗಳೆಲ್ಲಕ್ಕೂ ತಾನು ಸಹಭಾಗಿನಿಯೆಂಬುದೂ— ಇದೇ ಏನು?"

**ದು. ಪ್ರ:** - ಫಲಾಹಾರವನ್ನು ಸ್ವೀಕರಿಸುತ್ತಿದ್ದಂತೆಯೇ ನಗುನಗುತ್ತ—'ಜಯಿಸಿದೆ, ಚನ್ನಾಗಿ ಜಯಿಸಿದೆ,— ಆದರೂ ಹೆಮ್ಮೆಗೊಳ್ಳಬೇಡ. ನಿನ್ನ ಅಕ್ಕ—ನಮ್ಮ ಅತ್ತಿಗೆಯ ಮುಂದೆ ನಿನ್ನ ಪಾಂಡಿತ್ಯವು ಜಯಪತಾಕೆಯನ್ನು ಎತ್ತಲಾರದು. ಆಕೆಯಿಂದ ನಿನಗೆ ಇನ್ನೂ ಸ್ವಲ್ಪಕಾಲ ಶಿಕ್ಷಣೆ—

**ಹೇಮ:—** ಒಹೋ—ಆಗಲಿ, ಧಾರಾಳವಾಗಿ ಶಿಕ್ಷಣೆಯನ್ನು ಕೊಡಿಸ

ಬಹುದು. ಅದಕ್ಕೇನು ಅಡ್ಡಿ ? ಅಕ್ಕನಲ್ಲಿ ಕಲ್ತುಬರಲು ತಂಗಿಗೆ ಬೇಸರವೇ ? ಆದರೆ ಯಾವಾಗ ಕಳಿಹಬೇಕೆಂದಿರುವುದು ?

**ದು. ಪ್ರ**— ಈಗಲೇ ಹೋಗುವೆನೆಂದರೆ, ಈ ಕ್ಷಣವೇ ಕಳುಹುವೆನು. ನೋಡು, ಎರಡೊಂದು ಕೆಲಸ; ನೀನು ಅಲ್ಲಿಗೆ ಹೋದರೆ, ಕುತ್ತದಲ್ಲಿರುವ ಅಣ್ಣನ ಔಷಧೋಪಚಾರಗಳನ್ನು ಮಾಡಲು, ಅಶಕ್ತೆಯಾಗಿರುವ ಅತ್ತಿಗೆಯ ಸಹಾಯಕ್ಕೂ, ಮತ್ತೆ ನಿನಗೆ ಬೇಕಾದ ಪ್ರೌಢಶಿಕ್ಷಣಕ್ಕೂ ಅನುಕೂಲಿಸುವುದು. ಏನು ಹೇಳುವೆ ?

**ಹೇಮ** — ನಾನು ಹೋಗಲೊಲ್ಲೆನೆಂದು ಹೇಳುವುದಿಲ್ಲ. ಈಗ ಅವರ ದೇಹಸ್ಥಿತಿಯ ವಿಚಾರವೇನಾದರೂ ತಿಳಿದು ಬಂದಿರುವುದೇ ? ಈ ಕಡೆಗೆ ಅವರೇನಾದರೂ ಬರುವ ಸಂಭವವುಂಟೇ ?

**ದು. ಪ್ರ** —ಅವರ ದೇಹಸ್ಥಿತಿ ಒಂದೇ ಸಮನಾಗಿರುವುದು. ದಿನವೂ ನಮ್ಮ ಕಮಲಾಕಾಂತನು ರಾತ್ರಿಯವೇಳೆಯಲ್ಲಿ ಹೋಗಿ ನೋಡಿಕೊಂಡು ಬರುತ್ತಿರುವನು. ಅವನು ಈಕಡೆ ಬರುವಸಂಭವಕ್ಕೇನು ? ಎಷ್ಟೋ ವಿಚಾರಗಳಿರುವವು. ಆದರೆ ಅವನಿಗೆ ಇಲ್ಲದ ಕುತ್ತುವೊಂದುಬಂದು ಎಲ್ಲಿಗೂ ಬರುವುದಕ್ಕಾಗದಂತೆ ಮಾಡಿರುವುದು. ಹಾಗೆ ಅವನು ಬರುವಂತಿದ್ದರೆ, ನಮ್ಮ ಮಧುಸೂದನಮಹೋಪಾಧ್ಯಾಯರು ಹೀಗೆ ಆಪತ್ತಿಗೆ ಗುರಿಯಾಗುತ್ತಿರಲಿಲ್ಲ. ಮಾಡುವುದೇನು ?

**ಹೇಮ** — 'ಮರೆತಿದ್ದೆನು. ಅದೇನಾಯಿತು ಪ್ರಮದೆಯ ಮಗನ ವೃತ್ತಾಂತ ? ಕಡೆಗೂ ಮಗು ಹತವಾದುದೇ ದಿಟವಾಯಿತೇ ? ಹಣವೇನಾದರೂ ಸಿಕ್ಕಿತೇ ?"

**ದು. ಪ್ರ:**— ಇಲ್ಲ, ಇನ್ನೂ ಏನೂ ತಿಳಿಯಬಂದೇ ಇಲ್ಲ. ನಾನೂ ಹಲವು ಬಗೆಯಾಗಿ ಪರೀಕ್ಷಿಸಿದುದಾಯಿತು. ಎಲ್ಲಿಯೂ ಹುಡುಗನ ವಿಚಾರವೇ ತಿಳಿಯಲಿಲ್ಲ. ಮಹಾಮಹೋಪಾಧ್ಯಾಯರ ಮನೆಯ ದಾಸದಾಸಿಯರೆಲ್ಲರನ್ನೂ ಹಿಡಿದು ನಿರ್ಬಂಧದಲ್ಲಿಡಿಸಿರುವೆನು. ಮನೆಗೆ ಮೊದಲಿಂದಲೂ ಗೊತ್ತಾಗಿದ್ದ ಒಬ್ಬ ಪರಿಚಾರಕನು, ಒಬ್ಬಳು ದಾದಿ—ಇಬ್ಬರನ್ನು ಮಾತ್ರ ಆದೂ ಪ್ರಮದೆಯ ಉಪಚಾರಕ್ಕಾಗಿ ಬಿಟ್ಟು, ಪ್ರಮದೆಯ ಮೇಲವಿಚಾರಣೆಗೆ ನೆರೆಮನೆಯವರನ್ನು ಗೊತ್ತುಮಾಡಿ, ಎಚ್ಚರಿಕೆಯಿಂದ ನೋಡಿಕೊಳ್ಳು

ವಂತೆ ಹೇಳಿ, ಮನೆಯ ಸುತ್ತಲೂ ಕಾವಲಿರಿಸಿ ಬಂದೆನು.

**ಹೇಮ:—** "ಈ ಅತ್ಯಾಚಾರಕ್ಕೆ ಕಾರಣರಾರಿರಬಹುದು?"

**ದು. ಪ್ರ:—** ಅದನ್ನು ಹೀಗೆಯೇ ಸರಿಯೆಂದು ಈಗಲೇ ನಿರ್ಧರಿಸಿ ಹೇಳಲಾರೆನು.

**ಹೇಮ** — ಮಹಾಮಹೋಪಾಧ್ಯಾಯರ ವಿಚಾರವೇನಾದರೂ ತಿಳಿದು ಬಂದಿದೆಯೋ?

**ದು. ಪ್ರ —** ಇಲ್ಲ. ಅವರ ಸಮಾಚಾರವೇನೂ ತಿಳಿದು ಬಂದಿಲ್ಲ. ಆಲೋಚನೆ ಬಹುವಾಗಿರುವುದು. ಭಗವತಿಯೇ ಕಾಪಿಡಬೇಕು. ನಾನೂ ನನ್ನ ಶಕ್ತಿಮೀರಿ ಸಾಹಸಮಾಡುತ್ತಿರುವೆನು. ಈಗಲೂ ಅದೇ ಪ್ರಯತ್ನ ಕ್ಕಾಗಿಯೇ ಇಷ್ಟು ತ್ವರೆಯಿಂದ ಹೊರಕ್ಕೆ ಹೊರಟಿರುವೆನು.

**ಹೇಮ —** ನಾನೂ ಅಕ್ಕನಂತೆಯೇ ಆಗಿದ್ದರೆ ಎಷ್ಟೋ ಚನ್ನಾ ಗಿತ್ತು,–ಆಗಲಿಲ್ಲ. ಅಕ್ಕನು ವೀರರಮಣಿ, ವೀರಮಹಿಷಿ, ವೀರಮಾತೆ ಇತ್ಯಾದಿ ಸ್ತುತಿಗಳಿಗೆ ಪಾತ್ರೆಯಾಗಿಯೂ ತಂಗಿ ಕೇವಲ ಸಾಮಾನ್ಯ ಗೃಹಿಣಿ ಯಾಗಿಯೂ ಇರುವುದನ್ನು ನೋಡಿದರೆ, ದೇವರು ಬಹು ಪಕ್ಷಪಾತ ದೃಷ್ಟಿ ಯವನೆಂದು ತೋರುವುದು. ಈ ವೇಳೆಯಲ್ಲಿ ನಾನೂ ಅಕ್ಕನಂತೆಯೇ ಆಗಿದ್ದರೆ, ತಮಗೆಷ್ಟು ಸಹಾಯಕೆಯಾಗಿರುತ್ತಿದ್ದೆನು! ಈಗ ನನ್ನಿಂದ ತಮಗೇನೂ ಪ್ರಯೋಜನವಿಲ್ಲ

**ದು. ಪ್ರ —** ಸಾಕು, ನನಗೆ ನಿನ್ನ ಬಾಯಿಂದ ಇಷ್ಟು ಹೊರಟುದೇ ಎಷ್ಟೋ ಸಹಕಾರಿಯಾದಂತಾಯಿತು ನೀನು ಇದಕ್ಕೂ ಹೆಚ್ಚಾಗಿ ನನಗೆ ಮತ್ತೇನನ್ನು ಮಾಡಬಲ್ಲೆ?

(ಇವರ ಸಂಭಾಷಣೆಯ ನಡುವೆ ಆತುರದಿಂದ ಓಡಿಬಂದ ಮಹಾ ಮಹೋಪಾಧ್ಯಾಯರ ಮನೆಯ ದಾದಿಯೊಬ್ಬಳು, ಸಂಭ್ರಾಂತೆಯಾಗಿ ಕಿರು ಮನೆಯೊಳಕ್ಕೆ ಹೊಕ್ಕು, ದುರ್ಗಾಪ್ರಸಾದನ ಮುಂದೆ ಅಡ್ಡ ಬಿದ್ದು,–

"ಕಾಪಾಡಿರಿ–ಧಣಿಗಳೇ! ಕಾಪಾಡಿರಿ. ನಮ್ಮೊಡತಿ–ಅದೃಶ್ಯ! .........." ಎಂದು ಆರ್ತೆಯಾಗಿ ಅಳುತ್ತ ಹೇಳಿದಳು.

**ದು ಪ್ರ —** (ಗಾಬರಿಯಿಂದ) 'ಏನು ಏನು? ಒಡತಿ ಅದೃಶ್ಯ! ಅದಾರು? ಮಧುಸೂದನಶರ್ಮರವರ ಪತ್ನಿಯೇ?'

**ದಾಸಿ —** ಅಹುದು, ಅವರೇ, ನಮ್ಮೊಡತಿ ಪ್ರಮದಾದೇವಿ ಅದೃಶ್ಯ!

**ದು. ಪ್ರ —** ಏನು ಸಂಗತಿ ? ಎಲ್ಲಿ ಹೋದಳು ? ಯಾವಾಗ ? ಯಾರಜೊತೆಯಲ್ಲಿ ?

**ದಾದಿ —** ನಾನು ಅಷ್ಟೊಂದನ್ನು ಹೇಳಲಾರೆನು. ನಿನ್ನೆಯ ರಾತ್ರಿ ಸುಮಾರು ಒಂದು ಗಂಟೆಯವರೆಗೂ ಮಗನಿಗಾಗಿ ಅಳುತ್ತಿದ್ದವರು, ಹಾಗೆಯೇ ಮಲಗಿಬಿಟ್ಟರು. ಅವರಿಗೆ ನಿದ್ದೆ ಹತ್ತಿದ ಕೊಂಚ ಹೊತ್ತಿನಲ್ಲಿಯೇ ನನಗೂ ನನ್ನ ಬಳಿಯಲ್ಲಿಯೇ ಮಲಗಿದ್ದ ನೆರೆಮನೆಯವರಿಗೂ ನಿದ್ದೆ ಹತ್ತಿತು. ಮತ್ತೆ ನಾವು ಎಚ್ಚರವಾಗಿ ಕಣ್ದೆರೆದು ನೋಡುವಾಗ ಅವರೆಲ್ಲಿಯೂ ಇರಲಿಲ್ಲ ಯಾರು ಬಂದಿದ್ದರೋ, ಎಲ್ಲಿಗೆ ಹೋದರೋ ಗೊತ್ತಿಲ್ಲ. ಮಲಗಿದ್ದ ಕಿರುಮನೆಯ ಕದವು ಮಾತ್ರ ತೆರೆದು ಹಾಕಿದ್ದಿತು. ಇನ್ನೆಲ್ಲಿಯೂ ಯಾವ ವಿಷಯವೂ ಕಾಣಲಿಲ್ಲ.'

**ದು. ಪ್ರ—** ನಿನ್ನ ಹೆಸರೇನು ?

**ದಾದಿ —** ನನ್ನ ಹೆಸರು ಕಾಳಿ.

**ದು. ಪ್ರ.—** ಇರು, ವಿಚಾರಿಸುವೆನು. ನೀನು ಇಲ್ಲಿಯೇ ಇರಬೇಕು.

**ಕಾಳಿ —** ಮನೆಗೆ ಹೋಗಿದ್ದು ಕರೆಸಿದಾಗ ಬರುವೆನು.

**ದು. ಪ್ರ —** ಕೂಡದು, ಮನೆಗೆ ಈಗ ಯಾರೂ ಹೋಗಕೂಡದು, ಇಲ್ಲಿಯೇ ಕಾದಿರಬೇಕು. ತಪ್ಪಿಸಿಕೊಂಡು ಹೋದರೆ ಸರ್ಕಾರದ ನಿಬಂಧನೆಗೆ ಗುರಿಯಾಗುವೆ.' ಎಂದು ಹೇಳಿ, ಪಕ್ಕಕ್ಕೆ ತಿರುಗಿ ' ಯಾರಲ್ಲಿ—ಹನುಮನಾಯಕ ! '

**ಹನುಮನು:—** ( ವಿನೀತನಾಗಿ ) ' ಬುದ್ಧಿ, ಬಂದಿರುತ್ತೇನೆ. ' ಎಂದನು.

**ದು. ಪ್ರ:—** ಇದೋ ಇಲ್ಲಿರುವಳು ಮಹಾಮಹೋಪಾಧ್ಯಾಯರ ಮನೆಯ ದಾದಿ, ಇವಳ ಹೆಸರು ಕಾಳಿ. ಇವಳನ್ನು ಎಲ್ಲಿಗೂ ಬಿಡದೆ ನೋಡಿಕೊಳ್ಳುತ್ತಿರಬೇಕು, ಎಚ್ಚರಿಕೆಯಿಂದಿರು.

**ಹನುಮ —** ' ಅಪ್ಪಣೆ ' ( ಎಂದು ಹೇಳಿ, ಕಾಳಿಯೊಡನೆ ಹೊರಟು ಹೋದನು. )

ದುರ್ಗಾಪ್ರಸಾದನು ಪತ್ನಿಯೊಡನೆ ಸಂಭಾಷಣೆಯನ್ನು ಅಷ್ಟಕ್ಕೇ

ನಿಲ್ಲಿಸಿ, ತ್ವರೆಯಿಂದ ಹೊರಹೊರಟು ಮುಂದಿನ ಅಂಗಳಕ್ಕೆ ಬಂದನು. ಅಷ್ಟರಲ್ಲಿಯೇ, ಅಂಚೆಯಿಂದ ಕಾಗದಗಳ ಕಟ್ಟನ್ನು ತೆಗೆದುಕೊಂಡು ಬಂದ ಸೇವಕನು ಕೈಯ್ಯಲ್ಲಿದ್ದ ಕಟ್ಟನ್ನು ದುರ್ಗಾಪ್ರಸಾದನ ಕೈಯಲ್ಲಿರಿಸಿ, ದೂರ ದಲ್ಲಿ ನಿಂತನು. ದುರ್ಗಾಪ್ರಸಾದನು ಕಟ್ಟನ್ನು ಬಿಚ್ಚಿ ಒಂದೊಂದಾಗಿ ತೆಗ ತೆಗೆದು ನೋಡುತ್ತ ಹಾಗೆಯೇ ಎರಡು ಕಾಗದಗಳನ್ನು ನೋಡಿ ಕುತೂಹಲಿ ಯಾಗಿ ತ್ವರೆಯಿಂದ ನೋಡಿದನು. (ಮೊದಲನೆಯ ಕಾಗದವು ವಿಕ್ರಮ ಸೇನರಾಕೂರನ ಕೈಬರೆಹವಾಗಿದ್ದುದರಿಂದ ಅದನ್ನೇ ಮೊದಲು ಓದಿದನು.)

" ಪ್ರಸಾದ,

ಪರಮಾತ್ಮನು ನಿನಗೆ ಸಹಾಯಕನಾಗಿರುವನು. ಧೈರ್ಯದಿಂದ ಕಾರ್ಯವನ್ನು ಸಾಧಿಸುವ ಸಾಹಸಮಾಡು. ಅಧೀರನಾಗಬೇಡ. ಕರ್ತವ್ಯ ದಲ್ಲಿ ಕಣ್ಣಿಡು. ಅಂಜುಕುಳಿಗಳ ಅಟ್ಟಹಾಸಕ್ಕೆ ಹೆದರಬೇಡ. ವಿಚಾರ ವಿಮರ್ಶೆ ಚೆನ್ನಾಗಿರಲಿ. ನನ್ನ ದೇಹಸ್ಥಿತಿಯಿನ್ನೂ ಪೂರ್ವದಷ್ಟು ದೃಢ ವಾಗಿಲ್ಲ. ಇನ್ನೂ ಸಂಚಾರ ಶಕ್ತಿಯುಂಟಾಗಿಲ್ಲ. ನಿಮ್ಮ ಅತ್ತಿಗೆಯ ಪ್ರಕೃತಿ ದಿನಕ್ಕೆ ನಾಲ್ಕಾರು ಬಗೆಯಾಗಿ ತೋರುತ್ತ ವಿಚಿತ್ರರೀತಿಯಲ್ಲಿರು ವುದು. ಮನೆಯಲ್ಲಿದ್ದ ಹೆಚ್ಚು ವಿದ್ಯಾರ್ಥಿಗಳನ್ನೆಲ್ಲಾ ಅವರವರ ಊರು ಗಳಿಗೆ ಕಳಿಹಿರುವೆನು. ಈ ಸ್ಥಿತಿಯಲ್ಲಿ ಹೊತ್ತುಗಳೆವುದೇ ಕಷ್ಟವಾಗಿ ಕಾಣುವುದು. ಕಮಲಾಕಾಂತನು ದಯೆಯಿಟ್ಟು ಆ ಭಾವನಗರದ ನಿವಾಸಿ ಗಳನ್ನು ಕರೆತಂದು ಇಲ್ಲಿ ಬಿಟ್ಟಿರುವುದರಿಂದ ಎಷ್ಟೋ ಅನುಕೂಲವಾಗಿ ರುವುದು.

ಮಹಾಮಹೋಪಾಧ್ಯಾಯರ ಮನೆಯ ವಿಷಯವನ್ನು ಸರಿಯಾಗಿ ತಿಳಿದಿಲ್ಲವಾದರೂ, ಅಲ್ಪಸ್ವಲ್ಪವಾಗಿ ತಿಳಿದಿರುವುದರಿಂದಲೇ ಎಷ್ಟೋ ವಿಷಾದವಾಗುತ್ತಿರುವುದು. ಈ ವೇಳೆಯಲ್ಲಿ ನಾನಿದ್ದೂ ಫಲವಿಲ್ಲವೆಂದು ಮರುಗುವದೊಂದೇ ನನ್ನ ಕೆಲಸವಾಗಿರುವುದು.

ಪ್ರಸಾದ! ನನಗೆ ನಿನ್ನಿಂದ ಈಗ ಆಗಬೇಕಾಗಿರುವ ಸಹಾಯವೇ ನೆಂದರೆ, ನಿನ್ನ ಪತ್ನಿ ಮತ್ತು ನಿನ್ನ ಕೈ ಮಗು—ಇಬ್ಬರೊಡನೆ ಇಲ್ಲಿಗೆ ಬಂದು ಒಂದೆರಡು ದಿನಗಳಾದರೂ ಇದ್ದು ನಮ್ಮ ಬೇಸರನ್ನು ಹೋಗಲಾಡಿಸ ಬೇಕೆಂಬುದೂ ಕಮಲಾಕಾಂತನಿಗೆ ಬಿಡುವಾಗಿದ್ದರೆ ಆತನನ್ನೂ ಕರತರ

ಬೇಕೆಂಬುದೂ ನನ್ನ ಅಭಿಲಾಷೆಯಾಗಿರುವುದು. ಅನಾನುಕೂಲವಾದರೆ ಬೇಡ. ದೇವರು ನಿನ್ನನ್ನು ಅನವರತವೂ ಬೆಂಬಿಡದೆ ರಕ್ಷಿಸುತ್ತಿರಲೆಂದು ಹಾರೈಸುವೆನು. ಇತಿ, ನಿನ್ನ ಅಣ್ಣ, ವಿಕ್ರಮ. ”

ಪತ್ರಿಕಾಪಠನದಿಂದ ದುರ್ಗಾಪ್ರಸಾದನಿಗೆ ಆನಂದ, ಉತ್ಸಾಹ, ಕೌತುಕಗಳೂ, ಹೃದಯಂಗಮವಾದುವು, ಅದರೊಡನೆಯೇ ಹೊಸ ಹುರುಪು (ನೂತನಶಕ್ತಿ) ಉಂಟಾಯಿತು. ಕೆಲವು ನಿಮಿಷಗಳವರೆಗೆ ಹಾಗೆಯೇ ಆಲೋಚಿಸುತ್ತಿದ್ದು ಬಳಿಕ ಮತ್ತೊಂದು ಪತ್ರಿಕೆಯನ್ನೂ ಹೀಗೆ ಓದಿದನು

“ ಎಚ್ಚರಿಕೆ, ಪ್ರಸಾದಠಾಕೂರ ! ಎಚ್ಚರಿಕೆ! ನಿನ್ನಿಂದ ನಮ್ಮ ಉದ್ದೇಶವೆಂದೂ ಭಂಗಹೊಂದಲಾರದು. ವೃಥಾಶ್ರಮಪಟ್ಟು, ಆಪತ್ತಿಗೊಳಗಾಗುವುದು ನಿನಗೆ ಸರಿಯಾದುದಲ್ಲ. ನಮ್ಮ ಗುಪ್ತಮಾರ್ಗವನ್ನು ಕಂಡುಹಿಡಿಯಬೇಕೆಂಬ ನಿನ್ನೀ ಪ್ರಯತ್ನವನ್ನು ಬಿಟ್ಟು ಬಿಡು. ಕೈಗೆ ಸಿಕ್ಕಿದ ನಾಲ್ಕು ಹುಡಿಗಾಸುಗಳನ್ನು ಗಂಟು ಹಾಕಿ, ನಿನ್ನ ಸಂಸಾರಯಾತ್ರೆಯನ್ನು ಸುಖದಿಂದ ನಿರ್ವಹಿಸುವುದನ್ನು ಬಿಟ್ಟು, ನಮ್ಮ ಕೋಪಕ್ಕೆ ತುತ್ತಾಗುವ ಹುಚ್ಚು ನಿನಗೇಕೆ ಹಿಡಿಯಿತು ? ಈಗಲೂ ಎಚ್ಚರಿಸಿರುತ್ತೇವೆ, ಕೇಳು. ಆ ‘ ಪತ್ತೇದಾರ ’ ವಿಕ್ರಮಠಾಕೂರನು ಈಗ ಜಾಡ್ಯದಲ್ಲಿ ಬಿದ್ದು ಬದುಕಿದನು. ಹಾಗಿಲ್ಲದೆ ನಮ್ಮನ್ನು ಕಂಡುಹಿಡಿವೆನೆಂದೇನಾದರೂ ಪ್ರಯತ್ನಿಸಿದ್ದರೆ, ಇದುವರೆಗೆ ಅವನು ಉಳಿಯುತ್ತಿರಲಿಲ್ಲ. ಆದರೂ ಅವದಾರೋ ಭಾವನಗರನಿವಾಸಿಗಳನ್ನು ಮನೆಯಲ್ಲಿರಿಸಿಕೊಂಡು, ಅವರಿಂದ ಕೆಲವು ಅಧಿಕಪ್ರಸಂಗವನ್ನು ನಡೆಯಿಸುತ್ತಿರುವನು. ಇರಲಿ, ಅದಕ್ಕೆ ಪ್ರತೀಕಾರವೇ ಬೇರೆಯಿರುವುದು. ಮತ್ತೊಂದುಸಾರಿ ಹೇಳಿದೆ, ಎಚ್ಚತ್ತಿರು. ವಿಕ್ರಮನಾಗಲಿ, ನೀನೇ ಆಗಲಿ, ಇಲ್ಲದಿದ್ದರೆ— ದಯಾನಾಥಠಾಕೂರನೇ ಆಗಿರಲಿ, ಯಾರೇ ಆಗಲಿ—ನಮ್ಮ ದಾರಿಯನ್ನು ಕಂಡುಹಿಡಿಯಬೇಕೆಂಬುವರು ಉಳಿಯುವಹಾಗಿಲ್ಲ. ನಮ್ಮ ಪ್ರಯತ್ನವೇನೋ ಇಂದಿನವರೆಗೆ . . ಇರುವುದು.

ಇತಿ ಎಚ್ಚರಿಕೆ. ”

ದುರ್ಗಾಪ್ರಸಾದನು ನಸುನಗುತ್ತ ಬಂದು ಪತ್ನಿಯನ್ನು ಕುರಿತು— ‘ಹೇಮ ! ನಿನ್ನ ರತ್ನದೊಡನೆ ನೀನು ಪಯಣಕ್ಕೆ ಸಿದ್ಧವಾಗಿರಬೇಕು. ಈ

ದಿನವೇ ನಿನ್ನನ್ನು ಕರೆತರುವಂತೆ ಅಣ್ಣನ ಕಾಗದವು ಬಂದಿರುವುದು.' ಎಂದು ಹೇಳಿ, ಕಾರ್ಯಗೌರವದಿಂದ ಹೊರಟುಹೋದನು.

---

ಶ್ರೀ:

## ಅಷ್ಟಮ ಪರಿಚ್ಛೇದ.

'' ಪೀತ್ವಾ ನಿರವಶೇಷಂ ಕುಸುಮರಸಮಾತ್ಮನ ಕುಶಲತಯಾ |
ಯದುದ್ಗಿರತಿ ಭ್ರಮರೋನ್ಯೇಷಾಂ ಕರೋತಿ ತತ್ಕಾರ್ಯಂ ||
(ಮುದ್ರಾರಾಕ್ಷಸ)

(ಸಮಾಲೋಚನೆ.)

ರಾತ್ರಿ ಹತ್ತುಘಂಟೆ ಸಮಯ, ವಿಕ್ರಮಸೇನರಾಕೂರನ ಮನೆಯ ಮುಂಭಾಗಲಿನಲ್ಲಿ ಸಣ್ಣ ದೀಪವೊಂದು ಮಿಣಮಿಣನೆ ಮಿಣುಗುತ್ತಿದ್ದಿತು. ಬಾಗಿಲಲ್ಲಿ ಮೂರುನಾಲ್ಕುಮಂದಿ ವಿದ್ಯಾರ್ಥಿಗಳು ದೀಪದ ಬಳಿಯಲ್ಲಿ ಕುಳಿತು, ಒಬ್ಬರೊಡನೊಬ್ಬರು ಉತ್ತರಪ್ರತ್ಯುತ್ತರಗಳನ್ನು ಬೆಳೆಯಿಸುತ್ತಿದ್ದರು. ಮನೆಯ ಮುಂಗಡೆಯ ಅಂಗಳದಲ್ಲಿ ಹಳ್ಳಿಯ ಜನರು ತೂಕಡಿಸುತ್ತ ಕುಳಿತಿದ್ದರು. ಅಂಗಳದ ಹಿಂದಿನ ಕೋಣೆಯಲ್ಲಿ, ಅಡಿಗೆಗಾಗಿ ನಿಯಮಿಸಲ್ಪಟ್ಟಿದ್ದ ಹೆಂಗಸು ಮಲಗಿದ್ದಳು. ಮನೆಯ ಉಪ್ಪರಿಗೆಯ ಮೇಲಿನ ನಡುಹಜಾರದಲ್ಲಿ ಭವಾನಿ, ಹೇಮಲತಾದೇವಿ ಇವರಿಬ್ಬರೂ ಕುಳಿತು, ಒಂದು ವರ್ಷದ ಹೆಣ್ಣುಮಗುವನ್ನು ಮುಂದೆ ಕುಳ್ಳಿರಿಸಿಕೊಂಡು ಆಡಿಸುತ್ತಿದ್ದರು. ಇವರು ಕುಳಿತಿದ್ದಲ್ಲಿಯೇ ಹತ್ತಿರದ ಮಂಚದ ಮೇಲೆ ವಿಕ್ರಮಸೇನನು ಮಲಗಿದ್ದನು. ಬಳಿಯಲ್ಲಿಯೇ ದುರ್ಗಾಪ್ರಸಾದ ಮತ್ತು ವೈದ್ಯ-ಅಭಿನವ ಧನ್ವಂತರೀ ಮಹಾಶಯನೂ ಪ್ರತ್ಯೇಕಪ್ರತ್ಯೇಕವಾದ ಆಸನಗಳಲ್ಲಿ ಕುಳಿತಿದ್ದರು.

ವೈದ್ಯ ಧನ್ವಂತರೀಮಹಾಶಯನು ವಿಕ್ರಮಸೇನನನ್ನು ಕುರಿತು- "ಕುಮಾರರಾಕೂರ ! ನಿನ್ನ ತಮ್ಮನು ಭಾರ್ಯಾಪುತ್ರಿಯರೊಡನೆ ಬಂದು, ನಿನ್ನ ಉಪಚಾರದಲ್ಲಿ ನಿನ್ನ ಪತ್ನಿಗೆ ಸಹಾಯಕನಾಗಿ ನಿಂತಿರುವನು. ಬೇಸ

ರನ್ನು ಹೋಗಲಾಡಿಸಿ, ಮನೋಲ್ಲಾಸವನ್ನುಂಟುಮಾಡಲು ಭಾವನಗರದ ವಿದ್ಯಾರ್ಥಿಗಳು ಬೇರೆ ನಿನ್ನ ಅತಿಥಿಗಳಾಗಿಯೇ ಇರುವರು. ಇನ್ನೇಕೆ ನಿನಗೆ ಬೇಸರು ?

**ವಿಕ್ರಮ:—** ಭಾವನಗರದ ವಿದ್ಯಾರ್ಥಿಗಳು ನನಗೆ ಎಷ್ಟೋ ಉಪ ಕಾರಕರಾಗಿರುವುದು ಯಥಾರ್ಥವು. ಎಲ್ಲವೂ ಹಿರಿಯರಾದ ತಮ್ಮ ಅನು ಗ್ರಹ ವಿಶೇಷ." ಎಂದು ಮೆಲ್ಲನೆ ಹೇಳಿದನು

**ಧನ್ವಂತರೀ.—** (ಕಿರುನಗೆಯಿಂದ-) 'ನಮ್ಮ ಅನುಗ್ರಹವೇನು ?"

**ವಿಕ್ರಮ —** ಇನ್ನೇನು ? ತಾವು ತಮ್ಮ ಎಷ್ಟೋ ಕೆಲಸಗಳ ನಡುವೆ ಇದೂ ಒಂದು ಮುಖ್ಯವಾದ ಕೆಲಸವೆಂದು ಭಾವಿಸಿ, ನಮ್ಮ ಪ್ರಕೃತಿ ಸ್ವಭಾ ವಗಳಿಗೆ ತಕ್ಕಂತೆ ಕಾಲ, ಸ್ಥಿತಿ, ಗತಿ– ಇವುಗಳನ್ನು ತಿಳಿದು, ಅಕ್ಕರೆಯಿಂದ ಸರಿಯಾದ ಚಿಕಿತ್ಸೆಗಳನ್ನು ಮಾಡುವುದಲ್ಲದೆ, ಅಡಿಗಡಿಗೆ ನಮ್ಮನ್ನು ಪ್ರೋತ್ಸಾ ಹಿಸುತ್ತ ಬಂದಿರುವುದರಿಂದಲೇ ಅಲ್ಲವೇ, ನಾವು ಇಷ್ಟು ಮಟ್ಟಿಗಾದರೂ ಇರುವುದು ? ಹಾಗಿಲ್ಲದೆ ತಾವೂ ಕೂಡ ಈ ಕಾಲದ ಡಾಕ್ಟರ್ ದೊರೆ ಗಳಂತೆ ಒಂದು ಸಾರಿ ಮನೆಗೆ ಬಂದರೆ, ಇಷ್ಟು ರೂಪಾಯಿಗಳ ಪಾದಕಾಣಿ ಕೆಯುನ್ನು ಕೊಟ್ಟೇ ಬಿಡಬೇಕೆಂಬ ಕ್ರಮವನ್ನು ಹಿಡಿದಿದ್ದರೆ, ನಮ್ಮ ಗತಿ ?– ಗಂಗಮ್ಮನೋ ?–ಜ್ವಾಲಾಮುಖಿಯೋ !– ಗುಹಾಂತರವೋ ?–

**ಧನ್ವಂತರೀ.—** (ವಿನೋದದಿಂದ ನಗುತ್ತ) ಹೇಳಯ್ಯಾ ಹೇಳು. ಆಲಸ್ಯದಲ್ಲಿರುವ ನಿನಗೆ ಸ್ವಾತಂತ್ರ್ಯವಿದೆ ! ಇದೇ ನೆವದಿಂದ ಎಲ್ಲರನ್ನೂ ದೂರಿಗೆಳದಾಡುವೆ. ಆಗಲಿ, ಮಾಡು ಮಾಡು, ನಿನ್ನ ಸಂತೊಷವೇ ನಮ್ಮ ಸಂತೋಷ.

**ವಿಕ್ರಮ —** ಕ್ಷಮಿಸಬೇಕು. ಧನ್ವಂತರೀ ಮಹಾಶಯರೇ ! ಕ್ಷಮೆಯಿರಬೇಕು. ನಾನು ತಮ್ಮನ್ನು ಉದ್ದೇಶಿಸಿ ಹೇಳಿದ ಮಾತಲ್ಲ. ಈ ಕಾಲದ ಪರೋಪಕಾರ ವ್ರತನಿಷ್ಠರಾದ ಕೆಲವರನ್ನು ಕುರಿತು ಹೇಳಿದ ಮಾತು–ಅಷ್ಟೆ; ನೋಡಿರಿ, ಅವರಂತೆಯೇ ನೀವೂ ಧನಿಕರಾಗಬೇಕಾಗಿದ್ದರೆ, ಒಳಗುಟ್ಟನ್ನು ಚನ್ನಾಗಿ ಅರಿತು ನಡಿಯಿರಿ; ಬೇಕಾದರೆ ನಾನು ಹೇಳಿ ಕೊಡುವೆನು ಕಿವಿಗೊಟ್ಟು ಕೇಳಿರಿ.

**ಧನ್ವಂತರೀ:—** ಆಗಲಿ ಹೇಳಯ್ಯ; ಕೇಳಿ ಸಂತೋಷ ಪಡುವೆನು.

**ವಿಕ್ರಮ:—** ಹಾಗಲ್ಲ. ಸುಮ್ಮನೆ ಕೇಳಿದರೆ ಏನೂ ಪ್ರಯೋಜನವಾಗಲಾರದು. ಈಗ ನಾನು ಹೇಳುವ ಬುದ್ಧಿವಾದವನ್ನು ಮನವಿಟ್ಟು, ಕೇಳಿ, ಅದರಂತೆ ನಡೆದರೆ, ನಿಮಗೆ ಎಷ್ಟೋ ಲಾಭವುಂಟು. ಏನೆನ್ನುವಿರೋ? ಇನ್ನು ಮುಂದೆ ನಿಮ್ಮಲ್ಲಿಗೆ ಯಾರೇ ಆಗಲಿ, ಬರುವರು ಬಡವರಾಗಿದ್ದರೆ ಅವರನ್ನು ಮೊದಲು ಅತ್ತತೊಲಗಿಸಿ ಬನ್ನಿರೆಂದು ತೊತ್ತಿಗರಿಗೆ ಹೇಳಿಬಿಡಿರಿ, ಮತ್ತೆ ಅಷ್ಟಿಷ್ಟಾಗಿ ಬಟ್ಟೆ ಬರೆಗೆ ನೆಟ್ಟಗಿರುವವರು ಬಂದು, ಪ್ರಾಣಾಪತ್ತೆಂದು ಕರೆಯಬಂದರೆ, ಮೊದಲು ಕಾಣಿಕೆಯಾಗಿ ನೂರಕ್ಕೆ ಕಡಿಮೆಯಿಲ್ಲದೆ ಒಪ್ಪಿಸಿ, ಆಬಳಿಕ ಅಷ್ಟೇ ಮೊತ್ತವನ್ನು ಬಹುಮಾನವಾಗಿ ಕೊಡುವೆನೆಂದು ಒಪ್ಪಿಕೊಳ್ಳುವ ಪಕ್ಷದಲ್ಲಿ ಬರುವೆನೆಂದೂ, ಇಲ್ಲದಿದ್ದರೆ ಬರಲಾಗುವುದಿಲ್ಲವೆಂದೂ ನಿರ್ದಾಕ್ಷಿಣ್ಯವಾಗಿ ಹೇಳಿಬಿಡಿರಿ. ಬಿಟ್ಟುಹೋಗುವುದಕ್ಕಾಗದೆ ಕೋರಿದುದನ್ನು ಅವರು ಕೊಡಲೇ ಬೇಕಾಗುವದು. ಹಾಗೆ ಕೊಟ್ಟರೆ, ನಿಮ್ಮ ಕೈ ತುಂಬಿಹೋಗುವುದು. ಮತ್ತೇನು ?

**ಧನ್ವಂತರೀ:—** 'ಇದು ಒಳ್ಳೆಯ ಸಲಹೆ. ತಕ್ಕಮಟ್ಟಿಗೂ ಪ್ರಯತ್ನಪಟ್ಟು ನೋಡುವೆನು, ಅದಿರಲಿ, ಬಡವರ ಮಾತು ಮೂಲೆಗಾಯಿತು. ಹಿಟ್ಟುಬಟ್ಟೆಗೆ ನೆಮ್ಮದಿಯಾಗಿರುವವರ ಮಾತು ನೆಟ್ಟಗಾಯಿತು. ಮತ್ತೇನಾದರೂ ಉಳಿದಿದ್ದರೆ ಹೇಳಬಹುದಲ್ಲವೇ ವಿಕ್ರಮ ?

**ವಿಕ್ರಮ —** ಓಹೋ ! ಧಾರಾಳವಾಗಿ ಹೇಳುತ್ತೇನೆ. ಅಕ್ಕರೆಯಿಂದ ಕೇಳುತ್ತಿರುವ ತಮ್ಮಂತಹರಿಗಲ್ಲದೆ ಮತ್ತಾರಿಗೆ ಹೇಳುವುದು? ಇರಲಿ. ಧನ್ವಂತರಿಗಳೇ ! ಹಿಂದೆ ಹೇಳಿದುದನ್ನು ನೆನಪಿನಲ್ಲಿಟ್ಟಿರುವಿರಷ್ಟೆ. ಇನ್ನುಳಿದಿರುವುದೆಂದರೆ ಹಣಗಾರರವಿಚಾರ. ಹಣಗಾರರ ಮತ್ತು ಅಧಿಕಾರಿಗಳ ವಿಷಯದಲ್ಲಿ ತಿಳಿದೇ ಇರುವುದು, ತಿಂಗಳು ತಿಂಗಳಿಗೂ ಕೈತುಂಬುವಷ್ಟು ಹಣ ಬರುವಂತೆ ಗೊತ್ತುಮಾಡಿಕೊಳ್ಳಿರಿ. ಪ್ರತಿದಿನವೂ ಸಾಯಂಕಾಲವೋ ಪ್ರಾತಃಕಾಲವೋ ನೀವು ವಿಹಾರಾರ್ಥವಾಗಿ ಹೊರಗೆ ಹೋಗುವುದುಂಟಷ್ಟೆ, ಹಾಗೆಯೇ ಅವರ ಮನೆಗೂ ನುಗ್ಗಿ, ಧಟ್ಟನೆ ಕಣ್ಣಿಗೆ ಬಿದ್ದವರನ್ನು ನೋಡಿ, ನುಡಿಯಿಸಿ, ಅವರೇನಾದರೂ ಪಾನಪೂಜೆಯಿಂದ ಸತ್ಕರಿಸಿದರೆ, ಅದರಿಂದ ಮತ್ತಷ್ಟು ಸಂತೃಪ್ತರಾಗಿ ಹೊರಟುಬಂದರೆ, ಎರಡೊಂದು ಕೆಲಸವೂ ನೆರವೇರಿದಂತಾಗುವುದಲ್ಲವೆ? ಇದರಲ್ಲಿ ನಿಮಗೆ

ನಷ್ಟವೇನು?

**ಧನ್ವಂತರೀ:**— (ತಲೆದೂಗುತ್ತ) "ಒಳ್ಳೆಯ ಉಪಾಯ ! ಆಗಲಿ, ಮುಂದೆ ಹೇಳು."

**ವಿಕ್ರಮ:**— ಇನ್ನುಳಿದಿರುವುದು, ಈ ಕಾಲದ ಸಭ್ಯಸಮಾಜದವರ ಎಂದರೆ– ನವನಾಗರಿಕ ಸಮಾಜಸುಧಾರಕರ ವಿಚಾರವು! ಹೇಗೆನ್ನುವಿರೋ? ಆ ಮಹಾಶಯರ ಸಭ್ಯಸಮಾಜದಲ್ಲಿ ನೀವೂ ಒಬ್ಬರಾಗಿರಬೇಕಾದರೆ, ಬಹು ಜಾಗರೂಕರಾಗಿರಬೇಕು! ಅವರ ಆಟಪಾಟಗಳಲ್ಲಿಯೂ ಅವರ ಕೂಟ ನೋಟಗಳಲ್ಲಿಯೂ ಅವರ ಸಮಾಜಸಂಸ್ಥೆ, ಸಭಾ, ಸಮ್ಮೇಲನಾದಿ ವಿನೋದ ಸಂಭ್ರಮಗಳಲ್ಲಿಯೂ ಬೆರೆದು ನೀವೂ ಅವರಲ್ಲಿ ಒಬ್ಬರಾಗಿದ್ದು, ಅವರ ನಡೆ ನುಡಿಗಳಲ್ಲಿರುವ ಒಂದೊಂದು ವಿಚಾರವೂ ಅತ್ಯಂತ ಮುಖ್ಯವೇ ಆಗಿರುವುದ ರಿಂದ, ಅದನ್ನೇ ಎಲ್ಲರೂ ಅನುಸರಿಸಬೇಕೆಂದು ನಿರ್ಧರಿಸಲು ಅಲ್ಲಲ್ಲಿ ಹುಡುಕಿ, ಯಾವುದರಿಂದಲಾದರೂ ನಾಲ್ಕಾರು ಸೂತ್ರಗಳನ್ನು ತೆಗೆದು ಮುಂದಿಟ್ಟು, ಅದಕ್ಕೆ ವ್ಯಾಖ್ಯಾನವನ್ನು ಬರೆದೋದಿ ಹೇಳುವಷ್ಟು ಸಾಹಸ ಪಡಬೇಕು. ಆ ವೇಳೆಯಲ್ಲಿ ನೀವು ಮಾಡುವ ವ್ಯಾಖ್ಯಾನ, ಅಥವಾ ಉಪ ನ್ಯಾಸದಲ್ಲಿ, ನೀವು ಹೆದರದೆ ಹಿಂದೆಗೆಯದೆ, ಗದಗದಿಸದೆ,– ಹೇಳತಕ್ಕು ದನ್ನು ಧಾಟಿಯಿಂದ ಹೇಳಬೇಕು. ಹೀಗೆ ನೀವು ಹೇಳುವುದರಿಂದ ನಿಮ್ಮ ಧಾಟಿ, ನಿಮ್ಮ ಧೈರ್ಯ, ನಿಮ್ಮ ಸಾಹಸ, ನಿಮ್ಮ ವೈದುಷ್ಯಗಳನ್ನು ನೋಡಿಯೇ ಅಲ್ಲಿದ್ದವರು ತಲೆದೂಗಿ ನಿಮ್ಮನ್ನು ಪಂಡಿತರತ್ನರೆಂದು ಏಕಕಂಠದಿಂದ ಸ್ತುತಿಸಿ ಸನ್ಮಾನಿಸುವರು. ಆ ಬಳಿಕಲಂತೂ ನಿಮ್ಮನ್ನು ಸೇರಲಿಕ್ಕಿರುವ ಸಂಪದಭ್ಯುದಯ ಯಶೋಲಾಭಗಳೆಷ್ಟೆಂಬುದನ್ನು ಇಲ್ಲಿ ಬೇರೆ ಹೇಳಬೇಕೇ? ಯಾವ ವೃತ್ತಪತ್ರಿಕೆಗಳಲ್ಲಿ ನೋಡಿದರೂ, ನಿಮ್ಮ ಹೊಗಳಿಕೆಯೇ ಕುಣಿ ದಾಡುವುದು. ಅದಕ್ಕೂ ಹೆಚ್ಚಾಗಿ ನಿಮಗೇನಾಗಬೇಕು?

**ಧನ್ವಂತರಿ** — (ನಗುತ್ತ) 'ಸಾಕು ಸಾಕು! ಅಷ್ಟಾದರೆ ಸಾಕು' ನಿನ್ನ ಕುಶಾಗ್ರಬುದ್ಧಿಯಿಂದ ದೊರೆತ ಸಲಹೆಯನ್ನು ಧನಾರ್ಜನೆ ಮಾಡಬೇ ಕೆಂಬವರು ಯಾರುತಾನೇ ಒಪ್ಪಿಕೊಳ್ಳುವುದಿಲ್ಲ? ಆದರೆ ನನ್ನ ಒರಟು ಬುದ್ಧಿಗೆ ಅದೆಲ್ಲವೂ ಹತ್ತಬೇಕಾದರೆ, ಏನೇನನ್ನು ಮಾಡಬೇಕು?

**ವಿಕ್ರಮ.**— ಏನೇನು ಮಾಡಬೇಕೇ? ಈಗಳಿನ ನಿಮ್ಮ– 'ಬಡವ

ರಾಧಾರಿ' ಎಂಬ ಅಪವಾದವನ್ನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳಬೇಕು ಎಂದರೆ ಇನ್ನು ಮುಂದೆ ಬಡವರನ್ನು ನೀವು ಕಡೆಗಣ್ಣಿನಿಂದಾದರೂ ನೋ ದಷ್ಟು ಉದಾಸೀನತೆಯನ್ನು ವಹಿಸಬೇಕು. ಈಗ ತಮ್ಮಲ್ಲಿ ಬಲವಾಗಿರು ಆಶ್ರಿತರೆಂದೂ, ಅನಾಥರೆಂದೂ, ಆಪ್ತರೆಂದೂ, ಸಹಾಯಶೂನ್ಯರೆಂದೂ ಬಂಧುಗಳೆಂದೂ ಹಲವು ಬಗೆಯ ದಾಕ್ಷಿಣ್ಯಗಳನ್ನು ಮೆಲ್ಲಮೆಲ್ಲನೆ ದೂ ಕ್ಕುಟ್ಟುತ್ತ ಬರಬೇಕಲ್ಲದೆ, ಕ್ರಮಕ್ರಮವಾಗಿ ಧನಾರ್ಜನ ಕ್ರಮವನ್ನೂ ಅಭ್ಯಾಸಕ್ಕೆ ತರಬೇಕು. ಅದಕ್ಕೆಂದರೆ– ಒಂದೊಂದುವೇಳೆಯಲ್ಲಿ ನೀವ ಬಲುವಾದ ಇಂದ್ರಜಾಲವನ್ನೇ ಪ್ರಯೋಗಿಸಬೇಕಾಗುವುದು. ಹೇಗೆಂದರೆ– ಕೇಳಿರಿ, ಅಪಘಾತಕ್ಕೆಡೆಯಾಗಿ ದುರ್ಮರಣ ಹೊಂದಿದ್ದು, ಅಂತಹ ದೇಹವು ನಿಮ್ಮಲ್ಲಿಗೆ ಪರೀಕ್ಷೆಗೆಂದೇನಾದರೂ ಕಳಿಹಲ್ಪಟ್ಟವೇಳೆಯಲ್ಲಿ ದ್ರೋಹಿಗಳ ಕಡೆಯಿಂದ ಘೈಲಿಹಣವನ್ನು ಕೈಕೊಳ್ಳಬಹುದಾದುದರಿಂ ನೀವು ಶವವನ್ನು ಪರೀಕ್ಷಿಸಿದಂತೆ ನೋಡಿ, ವಿಷಪ್ರಯೋಗ ಅಥವಾ ಅಪಾಯ ವಾದ ಪೆಟ್ಟುಗಳಾವುವೂ ಆಗಿಲ್ಲವೆಂದೂ, ಬುದ್ಧಿಕುಶಲತೆಯಿಂದಲೂ ಶಾಸ್ತ್ರಾ ಧಾರದಿಂದಲೂ ಅದಕ್ಕೆ ಬೇರೆ ಯಾವುದಾದರೂ ಒಂದೊಂದು ರೋಗದ ಹೆಸರನ್ನು ಹೊಂದಿಸಿ ಹೇಳಿ, ಅದರಿಂದ ಹೀಗಾಗಿದೆಯೆಂದೂ ಹೇಳಬೇಕು ಹಾಗೂ ಒಂದುವೇಳೆ ಕಾರ್ಯಕಾರಿಗಳು ಸಿಕ್ಕಿಬೀಳುವರೆಂಬ ಸಂಭವವು ಕಂಡು ಬಂದರೆ, ಅದಕ್ಕೆ ನೀವು ಕೈಹಾಕುವುದನ್ನಾದರೂ ಬಿಡಬೇಕಲ್ಲದೆ, ಸರ್ಕಾ ದವರಿಗೆ ಮಾತ್ರ ಅನುಸಾರವಾಗಿ ಹೇಳಬೇಡಿರಿ. ಇದರಲ್ಲಿ ಇನ್ನೂ ಎಷ್ಟೆಷ್ಟೋ ಗುಟ್ಟಿನ ವಿಷಯಗಳಿವೆ. ಎಲ್ಲವನ್ನೂ ಒಂದೇಸಲ ಹೇಳಿ ಮುಗಿಸುವುದರಿಂದ, ನಮಗೆ ಆಯಾಸವೂ, ನಿಮಗೆ ಬೇಸರವೂ ಆಗಬಹು ದಲ್ಲದೆ, ಅದರಲ್ಲಿ ಅರೆಪಾಲಿನಷ್ಟಾದರೂ ಫಲಕಾರಿಯಾಗಲಾರದು. ಆದುದ ರಿಂದ, ಇಂದು ಇಷ್ಟಕ್ಕೆ ನಾಕುಮಾಡುತ್ತೇನೆ ಕ್ಷಮೆಯಿರಲಿ.

**ಧನ್ವಂತರಿ** — ಆಗಬಹುದು, ಕುಮಾರರಾಕೂರ ! ನಿನ್ನ ಉಪ ದೇಶವಾತ್ರವೇ ಅಲ್ಲ, ಮೂಲ– (ಉದ್ದೇಶ) ವನ್ನೂ ತಿಳಿದು ಅದರಂತೆ ನಡೆದು, ನನ್ನ ಜನ್ಮಧಾರಣೆಯನ್ನೇ ಸಾಫಲ್ಯಗೊಳಿಸಬೇಕೆಂದೂ ಸಂಕಲ್ಪಿ ಸಿರುತ್ತೇನೆ.

**ದು. ಪ್ರ**:— ಸಾಧುಸಾಧು ! ಧನ್ವಂತರೀ ಮಹಾಶಯರೇ

ನಿಮ್ಮ ಆಶಯವು ಪರಮಸಾಧು. ಹಾಗೆಯೇ ಮಾಡಿರಿ, ಕೃತಾರ್ಥ ರಾಗುವಿರಿ.

**ಧನ್ವಂತರಿ:—** ( ನಗುತ್ತ ) " ಮತ್ತೇನಯ್ಯ ? ನಿನ್ನ ಅಣ್ಣನಂತಹ ಉಪದೇಶಕನೂ, ನಿನ್ನಂತಹ ಪ್ರೋತ್ಸಾಹಕನೂ ದೊರೆತಿರುವಲ್ಲಿ, ನನ್ನಂತಹನ ಅದೃಷ್ಟಕ್ಕೆ ಕೊರತೆಯೇನು ? ಶೀಘ್ರಕಾಲದಲ್ಲಿಯೇ ಜನ್ಮಸಾಫಲ್ಯವನ್ನು ಹೊಂದಿ, ಬಂಧ ನಿರ್ಮುಕ್ತನಾಗುವುದರಲ್ಲಿ ಸಂಶಯವೇ ಇರುವುದಿಲ್ಲ. ಆದರೆ, ಸಹವಾಸಿಗಳಾದರೂ ಸಹಾಯರಾಗಿ ದೊರೆವುದಾದರೆ, ನನ್ನ ಅಭ್ಯಾಸವು ಮತ್ತೂ ಸುಲಭವಾಗಿ ಸಾಗುವುದೆಂದು ಆಲೋಚಿಸುವೆನು.

**ದು. ಪ್ರ:—** ಅದಕ್ಕೇನು ಕೊರತೆ ? ಇಲ್ಲಿ ಬೇಕಾದರೆ, ನಮ್ಮ ಭಾವನಗರದ ವಿದ್ಯಾರ್ಥಿಗಳಿರುವರು. ಪಟ್ಟಣದಲ್ಲಿ ಬೇಕಾದರೆ, ನಮ್ಮ ಕೈಕೆಳಗಿರುವ ಗುಮಾಸ್ತರೇ ಮೊದಲಾದವರಲ್ಲಿ ಆರನ್ನು ಬೇಕಾದರೂ ಆರಿಸಿಕೊಳ್ಳಬಹುದು.

**ಧನ್ವಂತರೀ —** ( ಮೇಲೆ ನೋಡುತ್ತ–) ' ನಿಜ, ನಿಮ್ಮ ಗುಮಾಸ್ತರಲ್ಲಿ ಒಬ್ಬಿಬ್ಬರು ನಾಗರಿಕ ಪುರುಷರಿದ್ದಾರೆಂದು ಕೇಳಿರುತ್ತೇನೆ. ಓಹೋ! ನೆನವಾಯಿತು. ನಿಮ್ಮಲ್ಲಿ ಹೊಸದಾಗಿ ಕೆಲಸದಮೇಲೆ ' ಪತ್ತೇದಾರ ' ಮಹಾಪುರುಷನೊಬ್ಬನು ಬಂದಿರುವನೆಂದೂ, ಅವನಷ್ಟು ಸದ್ಗುಣಸಂಪನ್ನರು ಯಾರೂ ಇಲ್ಲವೆಂದೂ ನನಗೆ ತಿಳಿದಿರುವುದು. ಆದರೆ, ಅದು ಎಷ್ಟರ ಮಟ್ಟಿಗೆ ಯಥಾರ್ಥವಿರಬಹುದೋ ಸಂದೇಹವಾಗಿದೆ. '

**ವಿಕ್ರಮ —** ಅಹುದಹುದು ಅವನನ್ನು ನಾನು ಚನ್ನಾಗಿ ಬಲ್ಲೆನು. ಅಲ್ಲದೆ, ಅವನ ವಿದ್ಯಾವಿಷಯವಾಗಿಯೂ, ಅವನ ಸಾಹಸ ಪ್ರಯತ್ನಗಳ ವಿಚಾರವಾಗಿಯೂ ನನಗೆ ತುಂಬಾ ಗಣನೆಯುಂಟು.

**ದು.ಪ್ರ:—** ಅಷ್ಟೇಕೆ, ಮಧುಸೂದನ ಮಹಾಮಹೋಪಾಧ್ಯಾಯರ ಮನೆಯಲ್ಲಿ ಮೊನ್ನೆ ನಡೆದ ಅಪಘಾತದಲ್ಲಿ ಕೂಡ, ಅವನೂ ಮತ್ತು ನಮ್ಮ ಗುಮಾಸ್ತರಲ್ಲಿ ಕೆಲವು ಮುಖಂಡರೂ ತೋರಿಸಿದ ಶ್ರದ್ಧೆ, ಉತ್ಸಾಹಶಕ್ತಿ, ಇತ್ಯಾದಿಗಳೇ ಅವರ ಪ್ರಭಾವವನ್ನು ತಿಳಿಯಪಡಿಸುವುವಲ್ಲವೆ ?

**ವಿಕ್ರಮ:—** ಓಹೋ ! ಸಂದೇಹವಿಲ್ಲದೆ ತಿಳಿಯಬಹುದು. ಮಹಾಮಹೋಪಾಧ್ಯಾಯರ ಪುತ್ರನನ್ನು ಹೊತ್ತುಹಾಕಿ, ಆಳುಗಳನ್ನು ಕಡಿದು

ಹಾಕಿ ಹೋಗಿರುವ ಕೊಲೆಗಡುಕರನ್ನು ಕಂಡುಹಿಡಿಯಲು ಅವನು ಎಷ್ಟೊಂದು ಪ್ರಯಾಸಪಟ್ಟನು ? ಆದರೂ, ಇದುವರೆಗೂ ಕೊಲೆಗಡುಕರಲ್ಲಿ ಒಬ್ಬನಾದರೂ ಸಿಕ್ಕಿಲ್ಲ. ಅವರ ಮಗನ ವಿಚಾರವೂ ಕೂಡ, ಹಾಗೆಯೇ!

**ಧನ್ವಂತರಿ** — ಏನು ಸಮಾಚಾರ ? ನನಗಾವುದೂ ತಿಳಿವುದೇ ಇಲ್ಲವಲ್ಲ ! ಮಧುಸೂದನಶರ್ಮರವರ ಪುತ್ರನನ್ನು ಹೊತ್ತುಹಾಕಿರುವರೇ ? ಅವರುಯಾರು ? ಏನು ಸಂಗತಿ ?

**ವಿಕ್ರಮ** — ( ಕೈ ತಿರುಹುತ್ತಾ ) "ಸರಿಸರಿ, ನೀವೇನು ಶುದ್ಧ ವಿರಕ್ತ ಸನ್ಯಾಸಿಗಳೇ ಆಗಿರುವಿರಿ ! ಜಿಡಿ ನಿಮಗೇನುಬೇಕು ? ವೃತ್ತಪತ್ರಗಳನ್ನೇನಾದರೂ ನೀವು ನೋಡಿದ್ದರೆ, ಪಟ್ಟಣದ ಕಲ್ಯಾಣ, ಅಥವಾ ಶಾಂತಿಸ್ಥಾಪನೆಯಲ್ಲಿ ನಿಮ್ಮ ನಿರೀಕ್ಷೆಯೇನಾದರೂ ಇರುತ್ತಿದ್ದರೆ, ನೀವು ಪ್ರಜಾಕ್ಷೇಮಸಮಾಚಾರಗಳನ್ನು ಕುರಿತು ಹೇಗಾದರೂ ವಿಚಾರಮಾಡದೆ ಇರುತ್ತಿರಲಿಲ್ಲ. ಹೋಗಲಿ, ಹಣವನ್ನು ಗಳಿಸುವುದರ ಅವಶ್ಯಕತೆಯಾದರೂ ನಿಮ್ಮ ಮಿದುಳನ್ನು ಹೊಕ್ಕಿದ್ದರೆ, ಅದೂ ಒಂದು ಬಗೆಯಿಂದ ಒಳಿತಾಗಿ ತೋರುತ್ತಿದ್ದಿತು ಅಂತಹದಾವುದೂ ನಿಮಗೆ ಸರಿಬೀಳುವಂತೆ ತೋರಲಿಲ್ಲ. ಮಾಡುವುದಿನ್ನೇನು ? ನೀವು ನಗರದಲ್ಲಿಯೇ ವಾಸಿಸುವರೆಂದು ಹೆಸರ್ಗೊಂಡವರಾಗಿದ್ದರೂ ಫಲವೇನು ? ನಿಮಗೆ ಹಿಡಿದಿರುವುದು ಆಯುರ್ವೇದದಹಳೆಯ ( ಪುರಾತನದ ) ಓಲೆಯ ಕರಡು ಕಂತೆಗಳು ! ಅವುಗಳಲ್ಲಿ ಒಂದೊಂದು ಗಂಡು ಕುಣಿಕೆಯನ್ನು ಬಿಡಿಸಿ, ಸರಳರೀತಿಯಲ್ಲಿ ಪರಿಷ್ಕರಿಸಬೇಕೆಂಬುದರಲ್ಲಿಯೇ ನಿಮ್ಮ ಮುಖ್ಯ ಗುರಿಯಾಗಿ ನಿಮ್ಮ ಆದಾಯದ ಅರೆಪಾಲು ಹಣವೂ ಅದಕ್ಕೆ ವಿನಿಯೋಗವಾಗಿ ಹೋಗುವುದು. ಅದನ್ನು ಈ ಕಾಲದಲ್ಲಿ ಹೇಗೆ ಸರ್ವತ್ರ ಪ್ರಚಾರಪಡಿಸಬೇಕೆಂಬುದನ್ನು ತಿಳಿಸುವಂತಹ ನಾಲ್ಕಾರು ಮಾಸಪುಸ್ತಕಗಳನ್ನೂ, ಮತ್ತೆ ಕೆಲವು ಸವ್ಯಾಖ್ಯಾನಗಳಾದ ದೊಡ್ಡದೊಡ್ಡ ಗ್ರಂಥಗಳನ್ನೂ ತರಿಸಿಕೊಂಡು, ನಿಮ್ಮ ದುರ್ಗದ ಮೇಲಿರುವ ಪ್ರಾಸಾದದಂತಹ ಸೌಧಾಗ್ರದಲ್ಲಿ ಕುಳಿತು, ಏಕಾಂತ ಸೇವೆಯಲ್ಲಿರುವರಂತೆ ಭಾವಿಸಿ ನಲಿಯುತ್ತಿರುವುದೇ ನಿಮ್ಮ ಅಧ್ಯವಸಾಯವಾಗಿದೆ ! ಇಂತಹ ನಿಮ್ಮ ಬುದ್ಧಿಗೆ ಇತರ ವಿಚಾರಗಳು ಹೇಗೆ ತಿಳಿಯಬೇಕು ?

**ಧನ್ವಂತರಿ:**— ಏನು ಮಾಡಲಯ್ಯ ? ಹೀಗೆಯೇ ನನ್ನ ಕಾಲವೆಲ್ಲಾ ಕಳೆಯುತ್ತಿದೆ. ಯಾರು ಎಷ್ಟು ಬಗೆಯಾಗಿ ಬುದ್ಧಿಗಲಿಸಬೇಕೆಂದರೂ ಅದು ಬಲಿತ ಬಿದುರಾಗಿ ಬಗ್ಗದೆ–ಜಗ್ಗದೆ, ಬಲವಾಗಿ ಬೀಗಿ ಹೋಗುತ್ತಿದೆ. ಇದೂ ನನ್ನ ದುರದೃಷ್ಟವಲ್ಲವೆ ?

**ದು. ಪ್ರ —** ಹಾಗೆಯೇ ಹೇಳಬೇಕು. ಇಲ್ಲದಿದ್ದರೆ, ನೀವು ಅಷ್ಟು ದೂರ ವ್ಯಾಸಂಗಮಾಡಿಯೂ ಅಷ್ಟು ಕಷ್ಟಪಟ್ಟು ಸ್ವದೇಶ ವಿದೇಶ ಸಂಚಾರ ದಿಂದ ದೇಹಾಯಾಸವನ್ನು ಕೂಡ ದುರ್ಲಕ್ಷಿಸಿಯೂ ಸಂಪಾದಿಸಿಬಂದ ಪಾಂಡಿತ್ಯವೂ, ಈ ನಿಮ್ಮ ಬಿರುದಾವಳಿಯೂ ಹೀಗೆ 'ಶಾಂತಪಕ್ಷದವರ ಬಾಹು ಬಲದಂತೆ' ಅಂತರ್ಗೃಹವಾಸದಲ್ಲಿರುತ್ತಿದ್ದುವೆ ? ಹೋಗಲಿ, ಹೀಗಾ ದರೂ ನಮ್ಮಂತಹ ಕಾಡುಜನರಿಗೆ ಸಹಕಾರಿಗಳಾಗಿರುವಿರಲ್ಲ ? ಅಷ್ಟೇ ಸಾಕು. ದೇವರು ನಿಮ್ಮನ್ನು ಈ ಸ್ಥಿತಿಯಲ್ಲಿಯೇ ಬಹುಕಾಲ ಬದುಕಿಸಿರಲಿ, ಅಷ್ಟೇ ನಮ್ಮ ಕೋರಿಕೆ."

**ಧನ್ವಂತರಿ** — (ನಗುತ್ತ) "ವಿಕ್ರಮರಾಕೂರ ! ನಿನ್ನ ಸೋದ ರನೂ ಕೂಡ, ಚತುರಾಗ್ರೇಸರನೆಂದೇ ಕಾಣುತ್ತಿದೆ ಆಗಲಿ, ಸಂತೋಷ. ಆದರೆ, ಮಹಾಮಹೋಪಾಧ್ಯಾಯರ ವಿಚಾರವೇನೆಂಬುದನ್ನಾದರೂ ನನಗೆ ತಿಳಿಸಬಾರದೆ ?

**ವಿಕ್ರಮ** — " ಅಯ್ಯಾ ! ನನಗೆ ಬಾಯಾರಿ ಬಳಲಿಕೆ ಹೆಚ್ಚುತ್ತಿದೆ. ಕೊಂಚತಡೆಯಿರಿ.

( ಇಷ್ಟೇಹೇಳಿ ವಿಕ್ರಮನು ಅರೆಗಣ್ಣುಮುಚ್ಚಿ ಮಗ್ಗುಲಾಗಿ ಮಲಗಿ ದನು. ದುರ್ಗಾಪ್ರಸಾದನೂ, ಧನ್ವಂತರೀ ಮಹಾಶಯನೂ ಭ್ರಾಂತರಾಗಿ ನೋಡುತ್ತ ಕುಳಿತರು. ಇದೆಲ್ಲವನ್ನೂ ನೋಡುತ್ತಿದ್ದ ಭವಾನೀದೇವಿ ಎದ್ದು ಬಂದು, ಮೈದುನನನ್ನೂ ಮತ್ತು ಧನ್ವಂತರೀ ಮಹಾಶಯನನ್ನೂ ಕುರಿತು, ಗಂಭೀರಸ್ವರದಿಂದ.) "ಹೀಗೇಕೆ ಭ್ರಾಂತರಂತೆ ನೋಡುತ್ತಿರು ವಿರಿ ? ರೋಗಮೂಲವನ್ನು ತಿಳಿದು ಸರಿಯಾದ ಚಿಕಿತ್ಸೆಯನ್ನು ಮಾಡುವ ನೀವೇ ಹೀಗೆ ಈ ವೇಳೆಯಲ್ಲಿ ಸುಮ್ಮನೆ ನೋಡುತ್ತಿರುವುದಾದರೆ, ಮತ್ತೇನು ಗತಿ ?" ಎಂದು ಹೇಳುತ್ತ ವಿಕ್ರಮನ ತಲೆದಿಂಬಿನ ಬಳಿಯಲ್ಲಿದ್ದ ಶಕ್ತ್ಯು ತ್ತೇಜಕಪಾನವನ್ನು ಸೀನೀರಿನಲ್ಲಿ ಸೇರಿಸಿ, ವಿಕ್ರಮನಿಗೆ ಕುಡಿಸಿ, ಗಾಳಿ

ಯನ್ನು ಹಾಕುತ್ತ ನಿಂತಳು.

**ದು.ಪ್ರ** — (ನಸುನಗುತ್ತ) ಧನ್ವಂತರಿಗಳೇ! ಸ್ತ್ರೀಯರು ಪ್ರತ್ಯುತ್ಪನ್ನ ಮತಿಗಳಾಗಿದ್ದರೆ ಪುರುಷರ ಭಾಗ್ಯಕ್ಕೆ ಮೇರೆಯಿಲ್ಲವೆಂಬುದು ಯಥಾರ್ಥವು. ಇದಕ್ಕೆ ಬೇರೆ ನಿದರ್ಶನವು ಬೇಕೇ? ನಮ್ಮ ಅತ್ತಿಗೆಯೇ ನಾಕುನಮುಗಾರಿಗೂ ಹೊಳೆಯದಿದ್ದುದು ದೂರದಲ್ಲಿ ಕುಳಿತಿದ್ದ ಈಕೆಗೆ ಹೊಳೆದು ಓಡಿಬಂದು ಅದನ್ನು ನೆರವೇರಿಸಬೇಕಾದರೆ ಕರ್ತವ್ಯದಲ್ಲಿ ಎಷ್ಟು ಜಾಗ್ರತೆ,–ಪತಿಭಕ್ತಿ ಪರಾಕಾಷ್ಠೆಗಳಿರಬೇಕು?

**ಧನ್ವಂತರಿ** —ಯಥಾರ್ಥವು, ಪ್ರಸಾದರಾಕೂರ! ನಿನ್ನ ಮಾತು ನಿಜ. ನಾನು ಇಲ್ಲಿಗೆ ಈಗ ಒಂದೆರಡು ವಾರಗಳಿಂದಲೂ ಬಂದು ನೋಡಿಕೊಂಡು ಹೋಗುತ್ತಿರುವೆನು. ದಿನದಿನಕ್ಕೂ ಈಕೆಯಲ್ಲಿರುವ ಅಸಾಧಾರಣ ಗುಣಗಳಲ್ಲಿ ಒಂದೊಂದೇ ನನ್ನನ್ನು ವಿಸ್ಮಿತನನ್ನಾಗಿ ಮಾಡುವಂತೆ ಹೊಳೆಹೊಳೆಯುತ್ತಿರುವುವು ಹೀಗಿದ್ದರಲ್ಲವೇ, ಇಂತಹರ ಸಹವಾಸವು ಭೂಸ್ವರ್ಗವೆನ್ನಿಸುವುದು?

**ಭವಾನಿ** — ಸರಿಸರಿ, ಇಬ್ಬರೂ ಸ್ತುತಿಪಾಠದಲ್ಲಿ ಮಗ್ನರಾದಂತಿರುವುದು. ಹಿಂದೆಮುಂದೆ ಸುತ್ತಿಕಾಡುತ್ತಿರುವ ಸಂಕ್ಲೇಶಗಳಾವುವೂ ಗೋಚರಿಸುವಂತೆ ಕಾಣುತ್ತಿಲ್ಲ, ಅಲ್ಲವೇ?

**ಧನ್ವಂತರಿ** — (ಗಂಭೀರಸ್ವರದಿಂದ) "ತಾಯಿ, ಬೇರೆ ತಿಳಿಯಬೇಡ. ನಿನ್ನನ್ನು ನಾನು ನನ್ನ ಮಗಳೆಂದೇ ತಿಳಿದು, ಅದೇ ಸಲುಗೆಯಿಂದ ಹಾಗೆ ಹೇಳಿದೆನು. ಹಿಂದುಮುಂದಿನ ಕ್ಲೇಶಗಳಾಗುವುವೋ ತಿಳಿಯ ಹೇಳಿದರೆ " ಎಂದನು.

**ಭವಾನಿ** — (ಪತಿಯ ಕಡೆಗೆ ಕೈತೋರಿಸಿ) "ಇವರ ಈ ಬಗೆಯ ಆಯಾಸಕ್ಕೆ ಕಾರಣವೇನೆಂದು ತಿಳಿದಿರುವಿರಿ?" ಎಂದಳು.

**ಧನ್ವಂತರಿ** — "ದೇಹದಲ್ಲಿ ಶಕ್ತಿಯಿಲ್ಲದೆ ಇದ್ದು, ಬಹುವಾಗಿ ಮಾತನಾಡಿದುದರಿಂದ, ಆಯಾಸವಾಗಿರಬೇಕೆಂದು ಭಾವಿಸುವೆವು."

**ಭವಾನಿ** — ಅಸಾಧ್ಯಕಾರ್ಯಪ್ರವರ್ತನೆಯಲ್ಲಿ ಮನಸ್ಸು ಮಗ್ನವಾಗಿದ್ದು, ಅದನ್ನು ನೆರವೇರಿಸಲು ಅವಕಾಶವೂ ಅನುಕೂಲವೂ ಸಾಲದೆ ಅಡಚಣೆಗೆ ಗುರಿಯಾದರೆ ಹೀಗಾಗಬಾರದೇನು?

( ದುರ್ಗಾಪ್ರಸಾದನೂ ಧನ್ವಂತರಿಯೂ ಪರಸ್ಪರ ಮುಖಗಳನ್ನು ನೋಡಿಕೊಂಡರು. )

**ಭವಾನಿ:**— ಹೀಗೇಕೆ ಚಕಿತರಾಗುವಿರಿ ? ಈಗಿನ ಇವರ ಮನೋದ್ವಿಗ್ನತೆಗೆ ನಿಮ್ಮ ಪ್ರಶ್ನೆಯೇ ಕಾರಣವಲ್ಲದೆ ಬೇರಿಲ್ಲ.

**ಧನ್ವಂತರಿ.**— ಅದು ಹೇಗೆ ?

**ಭವಾನಿ** — ಹೇಗೆಂದರೆ, ಮಹಾಮಹೋಪಾಧ್ಯಾಯರ ಮನೆಯ ವಿಚಾರವಾಗಿ ಕೇಳಲಿಲ್ಲವೆ ?

**ಧನ್ವಂತರಿ** — ಅಷ್ಟರಿಂದಲೇ ಹೀಗಾಗಬೇಕೇ ?

**ಭವಾನಿ.**— ಅವರ ಮನೆಯ ಮೇಲೆ ತಿರುಗಿಬೀಳುತ್ತಿದ್ದ ಆಪತ್ಕಂಟಕಗಳನ್ನು ತಪ್ಪಿಸಿ, ಸರ್ವಪ್ರಯತ್ನದಿಂದಲೂ ಕಿಡುಕರನ್ನು ಕಂಡುಹಿಡಿದು ಶಿಕ್ಷಿಸಬೇಕೆಂದಿದ್ದವರಿಗೆ, ಅವರನ್ನು ಆಪದವು ಸುತ್ತುವ ಕಾಲಕ್ಕೆ ಸರಿಯಾಗಿ ಗೊತ್ತು ಹಿಡಿಯಲ್ಪಡದ ಅದಾವಾವುವೋ ಇಲ್ಲದ ಜಾಡ್ಯಗಳುಂಟಾಗಿ ಎಲ್ಲಿಗೂ ಹೋಗದಂತೆ ಮಾಡಿರುವುವೆಂದರೆ, ಮತ್ತೇನಾಗಬೇಕು ? ಸಂಕಲ್ಪಿತಕಾರ್ಯದಲ್ಲಿ ಕೃತಾರ್ಥನಾಗುವ ಬಗೆ ಹೇಗೆಂದು ಆಲೋಚಿಸುತ್ತಿರುವಾಗ ಮೇಲೆ ಬಂದು ಬೀಳುತ್ತಿರುವ ಈ ಅಪಘಾತಗಳನ್ನು ಕೇಳಿದರೆ, ಮನಸ್ಸು ಆಯಾಸಪಡದಿರುವುದೇ ?

**ಧನ್ವಂತರಿ.**— ಏನು ಸಂಗತಿ ? ನನಗೇ ತಿಳಿಯದೇ ಇದ್ದ ಸಂಗತಿಗಳು ನಿಮಗೆ ಹೇಗೆ ಯಾರಿಂದ ಯಾವಾಗ ತಿಳಿಯ ಬಂದುವು ?

**ಭವಾನಿ** —ಯಾರಿಗೆ ಯಾವಕಾರ್ಯದಲ್ಲಿ ಪ್ರವೃತ್ತಿಯುಂಟಾಗುವುದೋ ಅವರಿಗೆ, ಅದರ ಪರಿಪೂರ್ಣತೆಗೆ ಬೇಕಾದ ಸಲಕರಣೆಗಳನ್ನು ದೊರೆಕಿಸಿಕೊಳ್ಳುವುದರಲ್ಲಿ ಹೆಚ್ಚು ತವಕವೂ, ಎಚ್ಚರಿಕೆಯೂ ಉಂಟಾಗುವುದು ಸಹಜವಷ್ಟೇ ?

**ಧನ್ವಂತರಿ** — ಉಂಟು; ಆದರೆ, ನಿಮ್ಮ ಸ್ವಾಮಿ ಅಸ್ವಾಸ್ಥ್ಯದಲ್ಲಿದ್ದೂ, ಇದನ್ನು ನಿರ್ವಹಿಸಬೇಕೆಂದರೆ ಸಾಧ್ಯವೇ ?

**ಭವಾನಿ.**— ಅಸ್ವಾಸ್ಥ್ಯವೆಂಬುದು ಹಲವು ಬಗೆಯಾಗಿದೆ ದೇಹಸ್ಥಿತಿ, ಮನಸ್ಥಿತಿ, ಇವೆರಡರ ಗತಿಗಳ ವಿಧಾನವೂ ಬೇರೆಬೇರೆಯಾಗಿಯೇ ಇರುವುವಷ್ಟೆ ? ಹಾಗೆಯೇ, ದೇಹವು ಆಯಾಸಗೊಂಡಿದ್ದರೆ, ಮನಸ್ಸಿನ

ಸ್ಥಿತಿ ಮತ್ತಷ್ಟು ಆತುರದಿಂದ ಕಾರ್ಯವನ್ನು ಮುಗಿಸಬೇಕೆಂದು ಬಯಸುವುದರಲ್ಲಿ ಅತಿಶಯವೇನು ?

**ದು. ಪ್ರ** — ಅದು ಸಹಜವಾದ ಮಾತು, ಆದರೆ, ಹಾಗೆ ಅದು ಸಿದ್ಧವಾಗಬೇಕಾದರೆ, ಪರಿಕರಣಗಳೂ, ಪಾತ್ರಗಳೂ, ಕಾಲಕ್ಕೆ ತಕ್ಕಂತೆ ಯಥೇಷ್ಟವಾಗಿ ಒದಗುತ್ತಿರಬೇಕು. ಇಲ್ಲದಿದ್ದರೆ, ಮನದಲ್ಲಿ ಮಾಡಿಟ್ಟ ಮಂಡಿಗೆಯನ್ನು ಮನೋದೇವತೆಗೇ ನಿವೇದಿಸಿ ತೃಪ್ತಿಹೊಂದಬೇಕಾಗುವುದು.

**ಧನ್ವಂತರಿ:**— ನಿಜ ನಿಜ ! ಪ್ರಸಾದರಾಕೂರನ ಮಾತು ನಿಜ. ಜನಸಹಾಯತೆ, ಧನಸಹಾಯತೆ, ಕಾಲಾನುಕೂಲತೆಗಳಿರಬೇಕು.

**ಭವಾನಿ** -- ಅದಕ್ಕೇನೂ ಕೊರತೆಯಿಲ್ಲ. ಭಗವದನುಗ್ರಹದಿಂದ ಸಾಕಾದಷ್ಟು ಬೇಕಾದಷ್ಟು ದೊರೆತು ದೊರೆಯುತ್ತಿವೆ. ಅದರಲ್ಲಿಯೂ ಸಾಕ್ಷಾದ್ಧನ್ವಂತರಿಗಳ ಸಹಾಯವೂ, 'ಪೋಲೀಸು' ಖಾತೆಯ ಮುಖ್ಯಾಧಿಕಾರಿಗಳಾಗಿರುವ ತಮ್ಮಂದಿರ ಸಹಾಯವೂ ಮುಖ್ಯವಾಗಿವೆಯೆಂದು ಹೇಳಬೇಕು.

**ವಿಕ್ರಮ.**— (ಮೆಲ್ಲನೆ) ಅಹುದಹುದು, ಇವರಿಬ್ಬರ ಸಹಾಯವೂ ಬಲವತ್ತರವಾದುವು. ಅಷ್ಟೇ ಅಲ್ಲ. ಕಮಲಾಕಾಂತಕುಮಾರ, ಭಾವನಗರದ ಆ ವಿದ್ಯಾರ್ಥಿಗಳಿಬ್ಬರು—ಈ ಮೂವರೂ ನಮಗೆ ಬಾಹುಬಲಗಳೇ ಆಗಿರುವರು. ಎಷ್ಟಾದರೇನು ? ಕಾಲಬಲವೇ ದುಸ್ತರವು. ಅದರ ಪ್ರತಿಕೂಲತೆಯಿಂದ ನನಗೆ ಈ ರೋಗವೂ, ಕಮಲಾಕಾಂತನಿಗೆ ಮಾತೃವಿಯೋಗವೂ ಉಂಟಾಗಿ ಮಹಾಮಹೋಪಾಧ್ಯಾಯರ ಮನೆಯಮೇಲೆ ಧೂಮಕೇತುವಡರಿತು. ಅಯ್ಯೋ ಪಾಪ ! ಹಾಲುಕಂದನಪಾಡು ಏನಾಯಿತೋ ತಿಳಿಯದು ! ಮಗುವಿನ ತಾಯಿಯ ಗತಿಯನ್ನಂತೂ ತಿಳಿದು ಹೇಳುವವರಿಲ್ಲದಂತಾಗಿ ಎಂತಹ ಅತ್ಯಾಚಾರವು ನಡೆದು ಹೋಯಿತು !

**ಧನ್ವಂತರಿ:**— ವಿಕ್ರಮಕುಮಾರ ! ಹೀಗೆ ನೀನು ಅತಿಯಾದ ವ್ಯಥೆಯನ್ನು ಹತ್ತಿಸಿಕೊಳ್ಳಬಾರದು. ಹೀಗಾಗುವುದರಿಂದ, ದೇಹಕ್ಕೆ ಮತ್ತಷ್ಟು ಆಯಾಸವಾಗುವುದು.

**ವಿಕ್ರಮ:**— ಸ್ವಾಮಿ, ಧನ್ವಂತರಿಗಳೇ ! ನನ್ನ ಪತ್ನಿಯ ಪ್ರಾಣಸಖಿಯೊಬ್ಬಳು ಮೊನ್ನೆ, ಮಹಾಮಹೋಪಾಧ್ಯಾಯರ ಪತ್ನಿ—ಪ್ರಮದೆಯನ್ನು

ನೋಡಬೇಕೆಂದು ಹೋಗಿದ್ದಳಂತೆ, ಅವಳು ಹೋಗಿ ನೋಡಿದಾಗ, ಕೆಳಗೆ ನಡೆದಿದ್ದ ಘೋರಕೃತ್ಯವೆಂದರೆ ಅಷ್ಟಿಷ್ಟೆಂದು ಹೇಳುವಂತಿರಲಿಲ್ಲವಂತೆ. ಬೀದಿಯಲ್ಲಿ ಕಾವಲಿಗಾಗಿ ಕುಳಿತಿದ್ದ ಹುಡುಗನನ್ನು ಹಿಂದಿನಿಂದ ಬಂದ ಒಬ್ಬ ಘಾತಕನು 'ಪಿಸ್ತೂಲಿ' ನಿಂದ ಗುರಿಕಟ್ಟಿಹೊಡೆದು, ಅವನನ್ನು ಕೆಳಗೆ ಬೀಳಿಸಿ, ಅಲ್ಲಿಂದ ಹಿಂದಿರುಗಿ ಅಡುಗೆಮನೆಯ ಹಿಂದುಗಡೆ ಮರೆಯಾಗಿದ್ದ ಆಳನ್ನು ದರದರನೆಳೆದುಕೊಂಡು ಬಂದು, ಸೊಂಟದಲ್ಲಿ ಅಡಗಿಸಿಕೊಂಡಿದ್ದ ಕೈಗತ್ತಿಯಿಂದ ತುಂಡುತುಂಡಾಗಿ ಕತ್ತರಿಸಿ, ಅವನ ಕಂಕುಳಲ್ಲಿದ್ದ ಮಗುವನ್ನು ಕಿತ್ತುಕೊಂಡು, ಹಿತ್ತಲಕಡೆಗೆ ಓಡಿಹೋದನೆಂದೂ, ಅದನ್ನು ನೋಡಿ ತಾನು ಕೂಗಿಕೊಂಡುದರಿಂದ, ಉಪ್ಪರಿಗೆಯಲ್ಲಿದ್ದ ಪ್ರಮದೆ ಕೆಳಗಿಳಿದು ಬಂದು ನೋಡಿ, ಅಳುತ್ತಳುತ್ತ ಬಾವಿಗೆಬಿದ್ದು ಪ್ರಾಣವನ್ನು ಕಳೆದುಕೊಳ್ಳುವೆನೆಂದು ಓಡಿಹೋದಳೆಂದೂ, ಅಷ್ಟರಲ್ಲಿ 'ಫತ್ತೇದಾರಿ ಇನ್‌ಸ್ಪೆಕ್ಟರ'ನಾಗಿ ಬಂದಿರುವ ಆ ಪುಣ್ಯಾಪುರುಷನು ಅವಳನ್ನು ತಡೆದು, ನೆರೆಹೊರೆಯವರನ್ನು ಕಾವಲಿರಿಸಿ, ಓಡಿಹೋಗಿ, ದುರ್ಗಾಪ್ರಸಾದನನ್ನು ಕರೆತಂದು ತೋರಿಸಿದನೆಂದೂ ತಾನು ಆ ವೇಳೆಯಲ್ಲಿ ಜನರ ಗುಂಪಿನಲ್ಲಿ ಮರೆಯಾಗಿದ್ದು ಎಲ್ಲವನ್ನೂ ನೋಡಿಕೊಂಡು, ಆ ಬಳಿಕ ಪ್ರಸಾದನು ಮುಂದಿನ ಕಾರ್ಯವನ್ನು ಗಮನಿಸಿರಲು, ಆವೇಳೆಯಲ್ಲಿ ಈತನ ಮನೆಗೆ ಹೋಗಿ, ತನ್ನ ಬಾಲ್ಯಸಖಿಯಾದ ಈತನ ಭಾರ್ಯೆಯನ್ನು ನೋಡಿ, ಮತ್ತೆ ಹಿಂತಿರುಗಿ ಬಂದುಬಿಟ್ಟೆನೆಂದೂ, ವಿಚಾರಿಸುವುದರಲ್ಲಿ, ದಯಾನಾಥರಾಕೂರರ ಮಾತೃದೈವವು ಅಂದು ವಿಧಿವಶವಾಗಿದ್ದುದರಿಂದ ದಯಾನಾಥರಾಕೂರ, ದುರ್ಗಾಪ್ರಸಾದ, ಕಮಲಾಕಾಂತ ಈ ಮೂವರೂ ಪ್ರೇತಸಂಸ್ಕಾರಕ್ಕಾಗಿ ಹೋಗಿದ್ದುದರಿಂದ, ಇಷ್ಟು ಕೆಲಸಗಳೂ ನಿರ್ಭಯವಾಗಿ ನಡೆದು ಹೋಗಿವೆಯೆಂದೂ ಹೇಳಿದಳು. ಮತ್ತೇನು ಹೇಳುವ? ಎಲ್ಲವೂ ನಡೆದೇ ಹೋಗಿರುವುವು.

**ಹೇಮಲತೆ:**— (ಮುಂದೆ ಬಂದು–) 'ನಿಜ? ಮೊನ್ನೆಯದಿನ ನನ್ನ ಸಖಿಯು ಬಂದು ನನಗಿವೆಲ್ಲವನ್ನೂ ಹೇಳಿಹೋದಳು.' ಎಂದಳು.

**ದು. ಪ್ರ:**— ನನಗೆ ಇದೊಂದನ್ನೂ ಹೇಳಲಿಲ್ಲವೇಕೆ?

**ಹೇಮಲತೆ:**— (ಭವಾನಿಯ ಮುಖವನ್ನು ನೋಡುತ್ತ ಕಿರುನಗೆಯಿಂದ) 'ಅವಳೇ ಹೇಳಬೇಡವೆಂದು ಆಣೆಯಿಟ್ಟು ತಡೆದು ಹೋಗಿದ್ದುದ

ರಿಂದಲೂ, ನೀವೇ ಸಾಕ್ಷಾತ್ತಾಗಿ ಹೋಗಿ, ಇದೆಲ್ಲವನ್ನೂ ಚೆನ್ನಾಗಿ ನೋಡಿ ಬಂದಿರುವುದರಿಂದ ನಾನು ಹೇಳಲೇಬೇಕೆಂಬ ಅವಶ್ಯಕತೆ ತೋರದುದ ರಿಂದಲೂ ಹೇಳಲಿಲ್ಲ.'

**ಭವಾನಿ** — ಆಕೆ ಹೇಳಬೇಡವೆಂದು ತಡೆದು ಬಂದುದೇ ಒಳ್ಳೆದಾ ಯಿತು. ಏಕೆಂದರೆ, ಅಲ್ಲಿ ಹೀಗೆಯೇ ನಡೆಯಿತೆಂದು ನಿರ್ಧರಿಸಿ ಹೇಳು ವವರಾರೂ ದೊರೆತಿಲ್ಲ. ಅವಳೇನಾದರೂ ಸಿಕ್ಕಿದ್ದರೆ, ಅವಳನ್ನೇ ನಿಮ್ಮ ಮುಖ್ಯಸಾಕ್ಷಿಯಾಗಿ ಕರೆದೊಯ್ಯುತ್ತಿದ್ದಿರಲ್ಲದೆ, ಬಿಡುತ್ತಿರಲಿಲ್ಲ, ಹಾಗಾ ಗಿದ್ದರೆ, ಆಕೆ, ಮನೆ ಮಕ್ಕಳು ಗಂಡ ಹಿರಿಯರು ಇವರೆಲ್ಲರನ್ನೂ ಬಿಟ್ಟು ಕಚೇರಿಗೆ ಅಲೆದಲೆದು, ಅಲ್ಲಿ ಎಲ್ಲರೆದುರಿಗೆ ನಿಂದು, ನಾಲ್ಕಾರು ಮಾತು ಗಳನ್ನು ಹೇಳಿ ಬರಬೇಕಾಗುತ್ತಿದ್ದಿತಲ್ಲದೆ, ದ್ರೋಹಿಗಳ ಕಲುಷಿತದೃಷ್ಟಿ ದೋಷಕ್ಕೆ ಅವಳೂ ಗುರಿಯಾಗಿ, ಅವಳ ಸೇವದಿಂದ ಅವಳ ಮನೆತನವೂ ಅಪಕಂಟಕಕ್ಕೆ ಈಡಾಗಬೇಕಾಗುತಿದ್ದಿತು. ಇಷ್ಟಾಗಿಯೂ, ಮಹಾ ಮಹೋಪಾಧ್ಯಾಯರಿಗಾಗಲೀ ಅವರ ಪತ್ನಿಗಾಗಲೀ ಪರಿವಾರಕ್ಕಾಗಲೀ ಯಾವ ಉಪಕಾರವಾಗುತ್ತಿದ್ದಿತೆಂದೂ ಹೇಳುವಹಾಗಿಲ್ಲ. ಈಗ ವಿಷಯ ವನ್ನು ಎಚ್ಚರಿಕೆಯಿಂದಲೂ, ಕ್ರಮ ಪ್ರಕಾರದಿಂದಲೂ, ವಿಚಾರಕ್ಕೆ ತೆಗೆ ದುಕೊಳ್ಳುವುದರಿಂದ. ಅನುಕೂಲವೇ ಆಗುವುದೆಂದು ನಿರೀಕ್ಷಿಸಬಹುದು.

**ದು. ಪ್ರ** — ಅಬ್ಬ! ಅತ್ತಿಗೆ, ನಿಜವಾಗಿಯೂ ನೀನು ಸಾಧಾರಣ ಸ್ತ್ರೀಯಲ್ಲ. ನಾವೆಲ್ಲರೂ ನಿನ್ನಲ್ಲಿ ಕೆಲಕೆಲವು ಕಾಲವಾದರೂ ಶಿಷ್ಯವೃತ್ತಿ ಯಲ್ಲಿದ್ದರೆ, ಆಗಲಾದರೂ ನಮಗೆ ನಿನ್ನ ಭಾವನಾಶಕ್ತಿಯಲ್ಲಿ ಅಷ್ಟಿ ಷ್ಟಾದರೂ, ದೊರೆಯಬಹುದೆಂದು ಭಾವಿಸುವೆನು, ಸುಳ್ಳಲ್ಲ.' ಎಂದನು.

**ವಿಕ್ರಮ:**— ಹೋಗಲಿ, ಈಗದರಮಾತೇಕೆ? ನೀನೇನು ಪ್ರಯತ್ನ ಮಾಡಿರುವೆ? ದ್ರೋಹಿಗಳಲ್ಲಿ ಎಷ್ಟು ಮಂದಿಗಳನ್ನು ಕಂಡು ಹಿಡಿದಿರುವೆ?

**ದು. ಪ್ರ** — ಅಣ್ಣ! ನನ್ನನ್ನೇಕೆ ಹಾಸ್ಯಮಾಡುವೆ? ಅದೆಲ್ಲವನ್ನೂ ಅಂದೇ ನಿನ್ನ ತಲೆಯಮೇಲೆ ಹೊರಿಸಿ ಹೊರಟುಹೋದೆನಲ್ಲವೆ? ಈಗ ನಾನು ಮಾಡುವ ಕೆಲಸವೆಂದರೆ ಬರಿಯ ವಿಚಾರಣೆ, ದಿಗ್ಬಂಧನ ಇವೆರಡೇ ಆಗಿರುವುವು. ಅದರಲ್ಲಿ ಎಂದರೆ ಮಹಾಮಹೋಪಾಧ್ಯಾಯರ ಮನೆಯ ರಕ್ಷಣೆಯಲ್ಲಿ, ಸರಿಯಾದ ಕಟ್ಟುಪಾಡು ಮಾಡಿರುವೆನು. ಮನೆಯಲ್ಲಿದ್ದವರ

ನ್ನೆಲ್ಲಾ ಬೇರೆ ಕಡೆಯಲ್ಲಿರಿಸಿ, ಅವರ ಕಾವಲಿಗಾಗಿ ಇಲ್ಲಿಂದ ನೀನು ಕಳಿಹಿದ್ದ ರೈತರನ್ನೇ ನಿಯಮಿಸಿರುವೆನು. ನನ್ನ ಕೈಕೆಳಗಿರುವ ಸೇವಕರ ಮೇಲಿನ ಎಚ್ಚರಿಕೆಗೆ ನಿನ್ನ ಆಪ್ತಸೇವಕರನ್ನೇ ಗೊತ್ತುಮಾಡಿರುವೆನು. ಪ್ರಮದಾದೇವಿಯ ನೆಲೆಯನ್ನು ಕಂಡುಹಿಡಿಯಲು ಒಬ್ಬಿಬ್ಬರನ್ನಲ್ಲ; ಎಷ್ಟೋ ಜನರನ್ನು ಅಟ್ಟಿರುವೆನು. ನಾನಿನ್ನೇನು ಮಾಡಲಿ?

**ವಿಕ್ರಮ:**—'ಸರಿಯೇ, ಇರಲಿ, ದೇವರಿರುವನು ನೋಡುವ' ಎಂದು ವೈದ್ಯನನ್ನು ಕುರಿತು– 'ಧನ್ವಂತರಿಗಳೇ! ನನಗೆ ಮೊದಲಿನಷ್ಟು ಶಕ್ತಿಯುಂಟಾಗಬೇಕಾದರೆ, ಇನ್ನೂ ಎಷ್ಟುಕಾಲ ಹಿಡಿಯಬೇಕು''? ಎಂದು ಕೇಳಿದನು.

**ಧನ್ವಂತರಿ:**—(ಕಿರುನಗೆಯಿಂದ) "ಇನ್ನೂ ಎರಡು ಪಕ್ಷವಾದರೂ ಬೇಕಾಗುವುದು."

**ವಿಕ್ರಮ.**— ಆವರೆಗೂ ಹೀಗೆಯೇ ನರಳಬೇಕೇ? ಹೊರಗೆ ಹೋಗಲಾಗದೇ?

**ಧನ್ವಂತರಿ:**— ಈಗಲೇ ನೀನು ಹೊರಗೆ ಹೇಗೆ ಬರಲಾಗುವುದಯ್ಯ? ಶಕ್ತಿಮೀರಿ ಸಾಹಸಪಡುವಿಯೇಕೆ? ಆತುರಪಡಬೇಡ. ಈಗ ನೀನು ಖಂಡಿತವಾಗಿಯೂ ಹೊರಗೆ ಬರಲಾಗದು. ಅದಲ್ಲದೆ ಜನಗಳ ದೃಷ್ಟಿಗೆ ತಕ್ಕ ಮಟ್ಟಿಗೂ ನೀನು ಅಗೋಚರನಾಗಿರುವುದೇ ಈ ನಿನ್ನ ರೋಗಕ್ಕೆ ಚಿಕಿತ್ಸೆ. ಭದ್ರ! ಮರೆತಾದರೂ ಹೊರಕ್ಕೆ ಬರಬೇಡ. ಭದ್ರ, ಭದ್ರ!

**ವಿಕ್ರಮ.**— ಒಳ್ಳೆಯ ಭದ್ರ! ಒಳ್ಳೆಯ ರೋಗ! ಇದಾವ ಪ್ರಾರಬ್ಧವೋ ತಿಳಿಯದು.

**ಮು. ಪ್ರ:**— ಧನ್ವಂತರಿಗಳೇ! ಇವರಿಗೆ ಬೇಸರಾಗಿರುವುದಲ್ಲ, ಮುಂದೇನು ಮಾಡಬಹುದು?

**ಧನ್ವಂತರಿ:**— ಜಾಗ್ರತೆ ಗುಣವಾಗಬೇಕೆಂದಿದ್ದರೆ, ಒಂದು ವಾರದವರೆಗೆ ಇವರಿಬ್ಬರೇ ಬಂದು, ನನ್ನ ಮನೆಯ ತೋಟದಲ್ಲಿ ಬೀಸುವ ಆರೋಗ್ಯಕರವಾದ ಗಾಳಿಯಲ್ಲಿ ಸಂಚರಿಸುತ್ತಿರಲಿ. ಹಾಗೆ ಮಾಡಲೊಪ್ಪುವುದಾದರೆ, ಮುಂದಿನ ಕೆಲಸವು ನನ್ನದಾಗಿರಲಿ.

**ವಿಕ್ರಮ:**— ಅದಕ್ಕೇನೂ ಅಡ್ಡಿಯಿಲ್ಲ. ಆದರೆ ಈಗ ತಾನೇ ಇವ

ರಿಬ್ಬರನ್ನೂ ಮಗುವಿನೊಡನೆ ಕರೆಯಿಸಿದೆನು. ಸರಿಯಾಗಿ ಕುಳಿತು ನಾಲ್ಕಾರು ಮಾತುಗಳನ್ನಾದರೂ ಆಡುವುದಕ್ಕೆ ಮೊದಲೇ ಇವರನ್ನು ಬಿಟ್ಟುಬಿಡಬೇಕೆಂದರೆ, ಮನಸ್ಸು ಒಪ್ಪುವುದಿಲ್ಲ. ಇದಲ್ಲದೆ ನನ್ನನ್ನೇ ನಂಬಿ ಇರುವ ವಿದ್ಯಾರ್ಥಿಗಳಿಗೂ, ಉಳಿದ ಆಶ್ರಿತವರ್ಗಕ್ಕೂ ನನ್ನ ವಿಯೋಗವ್ಯಥೆ ಯನ್ನುಂಟುಮಾಡಿ ಹೇಗೆ ಬರಲಿ?

**ಧನ್ವಂತರಿ:—** ಹಾಗೆಂದರೆ ಹೇಗಾಗುವುದಯ್ಯ? ಒಂದೆರಡು ವಾರಗಳು ಬಿಟ್ಟಿರಲಾರೆನೆಂದರೆ, ದೀರ್ಘವಿಯೋಗವೇ ಉಂಟಾಗಿ ಬಂದ ರೇನುಗತಿ? ಅದನ್ನು ನೀನು ಪರ್ಯಾಲೋಚಿಸಬೇಡವೆ?

**ವಿಕ್ರಮ:—** ಇರಲಿ, ಈ ರಾತ್ರಿ ನನಗೆ ಅವಕಾಶ ಕೊಡಿರಿ. ರಾತ್ರಿ ಯಲ್ಲಿ ದುರ್ಗಾಮಾತೆಯ ಪ್ರೇರಣೆಯೇನಾಗುವುದೋ ತಿಳಿದು ಬಳಿಕ ಹೇಳುವೆನು.

**ಧನ್ವಂತರಿ:—** ಹಾಗೆಯೇ ಮಾಡು, ಸಂತೋಷ.

**ವಿಕ್ರಮ:—** 'ಪ್ರಸಾದ! ಇನ್ನು ಧನ್ವಂತರಿಗಳಿಗೆ ಸುಖಶಯ್ಯೆ ಯನ್ನು ಕಲ್ಪಿಸಿ, ನೀನೂ ಪತ್ನೀಪುತ್ರಿಯರೊಡನೆ ಮಲಗು, ಹೋಗು; ಉಳಿದುದಾವುದಿದ್ದರೂ ನಾಳೆಯಾಗಲಿ.' ಎಂದನು.

(ದುರ್ಗಾಪ್ರಸಾದನು ಧನ್ವಂತರಿಯನ್ನೂ, ಪುತ್ರಿಯೊಡನೆ ಪತ್ನಿ ಯನ್ನೂ ಕರೆದುಕೊಂಡು ಬೇರೆಕಡೆಗೆ ಹೊರಟುಹೋದನು. ಭವಾನೀ ದೇವಿಯೂ ಪತಿಯ ಶಯನೋತ್ಸವದ ಸೇವೆಯಲ್ಲಿ ಉದ್ಯುಕ್ತೆಯಾದಳು. ನಾವು ಕೂಡ ಈ ರಾತ್ರಿಯಲ್ಲಿ ಸ್ವಲ್ಪಮಟ್ಟಿಗೆ ವಿಶ್ರಾಂತಿ ಹೊಂದಬೇಕಲ್ಲವೆ?)



ಶ್ರೀ

# ದ್ವಿತೀಯ ಭಾಗ.

## ಪ್ರಥಮ ಪರಿಚ್ಛೇದ.

“ನರನ ವಳಿತದೊಳೊಂದು ಸಮಯದೊ. |
ಳಿರುಳು ತಸ್ಕರ ಬಾಧೆಯಲಿ ಭೂಸುರರು |
ಬಾಯ್ಬಿಡುತಯ್ದೆ ಯಿಂದ್ರಪ್ರಸ್ಥಪುರವರವ ||
ಮೊರೆಯ ಬಾಯ್ಗಳ ಹುಲ್ಲುಕಯ್ಗಳ |
ಹರಿದಮೆಯ್ಗಳ ಸೆಕೆಯ ಸುಯ್ಗಳ |
ತರದಬೈಯ್ಗಳ ಕಳವಳವ ಕೇಳಿದನು ಕಲಿಪಾರ್ಥ” ||

(ಕನ್ನಡ ಭಾರತ)

( ಕಳ್ಳರ ಗಡಿ. )

ಶರತ್ಕಾಲದ ಪೂರ್ಣಿಮಾಚಂದ್ರನು ಗಗನಮಂಡಲದಲ್ಲಿ ತಾನೇ ತಾನಾಗಿ ಪ್ರಕಾಶಿಸುತ್ತಿದ್ದನು. ಚಂದ್ರದೇವನ ಸುಪ್ರಸನ್ನತೆಯ ಕುರುಹಿದೆಂದು ಹೇಳುವಂತೆ ಕೌಮುದೀ ವಿಸ್ತರವು ತನ್ನ ತನಿರಸದಿಂದ ಜಗತ್ತನ್ನೇ ಮೋಹಗೊಳಿಸುವಂತೆ ತೋರುತ್ತಿದ್ದಿತು. ಇಂತಹ ವೇಳೆಯಲ್ಲಿ ಈ ಜಗನ್ಮೋಹನಾಸ್ತ್ರಪ್ರಯೋಗದಿಂದ ಆಹ್ಲಾದಕರನೆನ್ನಿಸಿರುವ ಈ ಚಂದ್ರನ ಅಮೃತ ಕಿರಣದಿಂದ, ಮತ್ತು ಮನೋಲ್ಲಾಸವನ್ನು ಹೆಚ್ಚಿಸುವ ಮಂದಮಾರುತ ಸೇಚನದಿಂದ, ದೇಹಾಯಾಸವನ್ನು ಹೋಗಲಾಡಿಸಿ, ವಿಶ್ರಾಂತಿ ಸುಖವನ್ನು ಹೊಂದದಿರುವವರೆಂದರೆ, ಹೊಂದಲಿಷ್ಟವಿಲ್ಲದವರೆಂದರೆ, ಕೇವಲ ವಿರಕ್ತರು—ಮತ್ತೂ ವಿಯೋಗಿಜನರು.

ಚಂದ್ರಕಿರಣ ಸ್ಪರ್ಶಮಾತ್ರದಿಂದ ಮನಸ್ಸು ಕೇವಲ ಶಾರೀರಕ ಕ್ಲೇಶದ ಕಡೆಗೆ ತಿರುಗಿ ಚಾಂಚಲ್ಯಪ್ರಕೃತಿ ಹೊಂದಿ, ಮನೋದಾರ್ಢ್ಯವನ್ನು ಮಣ್ಣುಪಾಲು ಮಾಡಿ, ಕ್ಷಣಿಕ ಭ್ರಾಂತಿಸುಖಾಪೇಕ್ಷೆಯಿಂದ ಕಂಗೆಡುವಂತಾದೀತೆಂಬ ಭಾವನೆಯಿಂದ ವಿರಕ್ತರು ಚಂದ್ರಿಕಾವಿಹಾರವನ್ನು ಮನಃ

ಪೂರ್ವಕವಾಗಿಯೂ ತಿರಸ್ಕರಿಸುವರು. ವಿಚಾರಮಾಡುವೆವಾದರೆ, ಇದು ಎಂದರೆ ವಿರಕ್ತರ ಈ ವಿಧವಾದ ತಿರಸ್ಕಾರಭಾವನೆಯು ಯುಕ್ತವಾದುದೆಂದೇ ಹೇಳಬಹುದು. ಇನ್ನು ವಿಯೋಗಿಜನಕ್ಕೆಂದರೆ, ಅವರ ಭೋಗೇಚ್ಛೆಗೆ ಕಾಲವು ಅನುಕೂಲವಾಗಿದ್ದರೂ ಉಪಭೋಗಾರ್ಹಪಾತ್ರದ ಅಭಾವ (ವಿರಹ) ದಿಂದ ಮನಸ್ಸು ಉದ್ವಿಗ್ನತೆಯನ್ನು ಹೊಂದಿ, ಮೊದಲು ಆಹ್ಲಾದದಾಯಕಗಳಾಗಿದ್ದ ಚಂದ್ರಿಕಾ ಮಂದಾನಿಲಗಳೇ ಅಂತಸ್ತಾಪಗಳನ್ನು ಹೆಚ್ಚಿಸುವವುಗಳಾಗಿ ಪರಿಣಮಿಸುವುದರಿಂದ ಅವರು ಎಂದರೆ ವಿಯೋಗಿಜನರು ಚಂದ್ರನನ್ನೂ ಮಂದಾನಿಲನನ್ನೂ ಮನಬಂದಂತೆ ಬಯ್ದು ದೂಷಿಸುತ್ತಿರುವರು. ಹೇಗೆ—ಏಕೆ—ಎಂದರೆ ಅದನ್ನು ಹೀಗೆಯೇ ಸರಿಯೆಂದು ಉದಹರಿಸುವುದು ಪ್ರಕೃತದಲ್ಲಿ ನಮ್ಮ ಗುರಿಯಾಗಿಲ್ಲ.

ಮತ್ತೊಂದು ವಿಚಾರ,— ವಿರಕ್ತರು— ವಿಯೋಗಿಜನರು ಮಾತ್ರವೇ ಚಂದ್ರನನ್ನಾಗಲೀ, ಚಂದ್ರಿಕೆಯನ್ನಾಗಲಿ ತಿರಸ್ಕರಿಸುವರು, ಮತ್ತಾರೂ ತಿರಸ್ಕರಿಸಲಾರರೆಂದು ಹೇಳಬಾರದು. ಚಂದ್ರನನ್ನು-ಪೂರ್ಣಚಂದ್ರನನ್ನು ದ್ವೇಷಿಸುವವರಲ್ಲಿ ಚೋರರೂ ಒಂದು ವರ್ಗದವರಾಗಿರುವರೆಂದು ಹೇಳಬಹುದು. ಹೇಗೆಂದರೆ— ಚೋರರು ತಮ್ಮ ಪ್ರಯತ್ನಫಲಗಳನ್ನು ಯಾರೂ ನೋಡಿ ತಿಳಿಯದಂತೆ ಹೊಂಚು, ಸಂಚು, ಮೋಸ, ಠಕ್ಕು, ಮಾಟ, ಯಕ್ಷಿಣಿ ಮೊದಲಾದ ಹಲವು ಉಪಾಯಗಳಿಂದ ಜನರನ್ನು ಸುಲಿದು, ಹಣವನ್ನು ಗಳಿಸಿಕೊಳ್ಳಬೇಕೆಂದಿರುವುದರಿಂದ ಇವರ ಕಾರ್ಯಕಲಾಪಗಳಿಗೆ ಚಂದ್ರನೂ ಅನೇಕ ವೇಳೆಗಳಲ್ಲಿ ಆತಂಕವನ್ನೇ ಉಂಟು ಮಾಡುತ್ತಿರುವನೆಂದು ಇವನನ್ನು ದ್ವೇಷಿಸುವುದೂ ಅವರ ಸ್ವಭಾವವಾಗಿರುವುದು. ಇದರಿಂದಲೇ ಚಂದ್ರಾತಪದ ಆತಂಕನಿವಾರಣೆಗೆಂದು, ಅವರು ಸಹಜವೇಷಭಾಷೆಗಳನ್ನು ಕೂಡ ಮರೆಯಿಸಿಕೊಂಡು, ಅನೇಕ ವೇಳೆಗಳಲ್ಲಿ ಅನೇಕ ಬಗೆಯ ರೂಪಾಂತರಗಳಿಂದ ಉದ್ದೇಶವನ್ನು ಪೂರೈಸಿಕೊಳ್ಳುತ್ತಿರುವರೆಂಬುದೂ ಅನೇಕರ ಅನುಭವಕ್ಕೆ ಬಂದಿರುವುದು.

ಹೋಗಲಿ, ಇನ್ನು ಚಂದ್ರಿಕೆಯಿಂದ ವಿಶೇಷವಾದ ಸಹಾಯವನ್ನು ಹೊಂದಿದೆವೆಂದು ಸಂತೋಷಪಡುವವರೆಂದರೆ—ನಿರ್ದುಷ್ಟವಾದ ಆತ್ಮಾನಂದ ಮಾರ್ಗಕ್ಕೆ ಸಾಧನಗಳನ್ನು ಕಲ್ಪಿಸಿಕೊಳ್ಳಲು ಚಂದ್ರಿಕೆಯು ಸಹಕಾರಿ

ಯೆಂದು ಭಾವಿಸುವವರೆಂದರೆ ಯಾರಿರಬಹುದು? ನಿಷ್ಕಾಮಬುದ್ಧಿಯಿಂದಲೂ, ಪಾರಮಾರ್ಥಿಕಜ್ಞಾನದಿಂದಲೂ, ವಿಶ್ವಪ್ರೀತಿತತ್ವಜ್ಞತೆಯಿಂದಲೂ ಯಾವ ಪುಣ್ಯಾತ್ಮರು ಧರ್ಮಪ್ರತಿಪಾದನದಲ್ಲಿ ಬದ್ಧದೀಕ್ಷಿತರಾಗಿರುವರೋ ಅವರು ಮಾತ್ರವೇ ಚಂದ್ರನನ್ನೂ ಮತ್ತು ಮಂದಾನಿಲನನ್ನೂ ತಮ್ಮ ಸದುದ್ಯಮಕ್ಕೆ ಸಹಕಾರಿಗಳೆಂದು ಕೃತಜ್ಞತಾಬುದ್ಧಿಯಿಂದ ವಂದಿಸುವರಾಗಿರುವರು. ಉಳಿದವರ ಮಾತು ನಮಗೇಕೆ? ಪ್ರಕೃತಕ್ಕೆ ಬೇಕಾಗಿರುವುದೆಂದರೆ, ಕಳ್ಳಕಾಕರ ಕುಹಕ–ಕುತ್ಸಿಕ ವ್ಯಾಪಾರಿಗಳ ವಿಚಾರ; ಅವರಿಗೆ ದೇಶಸೇವಕರಿಂದಾಗುವ ಪ್ರಾಯಶ್ಚಿತ್ತ– ಇವುಗಳು ಮಾತ್ರವೇ ಬೇಕಾಗಿರುವುವು. ಇಂದಿನ ಈರಾತ್ರಿಯ ಬೆಳದಿಂಗಳಲ್ಲಿ, ಕನಕಗಿರಿಗೂ ಕಲ್ಯಾಣ ನಗರಿಗೂ ನಡುವೆ ಇರುವ ಕಾನನಪ್ರಾಂತದ ವಿದ್ಯಮಾನವೇನಾಗಿದ್ದಿತೆಂಬುದನ್ನು ಸ್ವಲ್ಪ ನೋಡಬೇಕಲ್ಲವೇ? ಒಂದೆಡೆ ನರಿಗಳ ಕೂಗು, ಮತ್ತೊಂದೆಡೆ ಹುಲಿ ಸಿಂಹ ಮೊದಲಾದ ಕ್ರೂರಮೃಗಗಳ ಮರ್ಮಭೇದಕವಾದ ಘರ್ಜನೆ, ನಡುನಡುವೆ ಹೆಜ್ಜೆಹೆಜ್ಜೆಗೂ ಮರದಡಿಗಳಲ್ಲೆಲ್ಲಾ ಕ್ರೂರಸರ್ಪಗಳ ಸಂಚಾರದ ಸರಸರ ಶಬ್ದ ಮತ್ತು ಬುಸುಗುಟ್ಟುವಿಕೆ; ಇಂತಹ ಸ್ಥಿತಿಯಲ್ಲಿ ಈ ಕಾನನಪ್ರಾಂತವು ಎಷ್ಟು ಭಯಂಕರವಾಗಿದ್ದಿತೋ ಹೇಳುವುದಕ್ಕೂ ಊಹಿಸುವುದೇ ಮೇಲಲ್ಲವೇ?

ಕಾಡು ಹೇಗಾದರೂ ಇರಲಿ, ಕಾಡಿನ ಕಾಲುದಾರಿಯಲ್ಲಿ, ನಾಲ್ಕಾರು ಬಂಡೆಗಳುಳ್ಳ ಒಂದು ಇಕ್ಕಟ್ಟಾದ ಪ್ರದೇಶದಲ್ಲಿ, ಬಂಡೆಗಳ ಬುಡದಲ್ಲಿ ನಾಲ್ಕಾರು ಮಂದಿಗಳು ಮೈಗೆಲ್ಲಾ ತುಪ್ಪಟದ ಹೊದಿಕೆಯನ್ನು ಹೊದ್ದು ಮೋರೆಗೆ ಮಸಿಯನ್ನು ಬಳಿದುಕೊಂಡು, ಪಿಸುಮಾತನಾಡುತ್ತ ಕುಳಿತಿದ್ದುದನ್ನು ನೋಡಿದರೆ ಹೇಗಾಗಬಹುದು? ಇವರು ಸಾಕ್ಷಾತ್ ಕಾಲಪುರುಷನ ಕಿಂಕರರೇ ಆಗಿರಬೇಕೆಂಬ ಭಾವನೆಯಾಗುವುದಿಲ್ಲವೇ? ಆದರೆ, ಅವರಾರೆಂದೂ, ಇಲ್ಲೇಕೆ ಕುಳಿತಿರುವರೆಂದೂ ತಿಳಿಯುವ ಕುತೂಹಲವಿದ್ದರೆ– ಪಾಠಕರೇ! ಇತ್ತ ಬಂದು ಈ ಬಂಡೆಯ ಮತ್ತೊಂದುಕಡೆ, ಆ ಈಚಲ ಮರದ ಮರೆಯಲ್ಲಿ ಅವರಂತೆಯೇ ಹೊಂಚಿನಿಂತು ಕೇಳಿರಿ. ಆಬಳಿಕ ಇವರ ಒಳಸಂಚೆಂಬುದು ಸ್ಪಷ್ಟಪಡುವುದು. ನಾಕು, ಸದ್ದುಮಾಡದಿರಿ–

ಇದೊ ಇವರ ಸಂಭಾಷಣೆಗೆ ಮೊದಲಾಗಿದೆ, ಒಂದನ್ನೂ ಬಿಡದೆ ಕೇಳಿರಿ.)

೧ನೇಯವನು— ಎಲಾ ತಿಮ್ಮ! ಸಮಾಚಾರವೇನೆಲಾ! ರಾಯರು ಯಾವಾಗ ಬರುತ್ತಾರಂತೆ?

೨ನೇ ತಿಮ್ಮ— (೧ನೆಯವನನ್ನು ಕುರಿತು–) 'ಏನಂದೆ, ಬೋರಣ್ಣ? ರಾಯರ ಸುದ್ದಿ ಯಾರಿಗೆ ಗೊತ್ತು? ಯಾವಾಗ ಬರುತ್ತಾರೋ, ಆ ಚಂಡಿಯೇ ಹೇಳಬೇಕು.' ಎಂದನು.

**೩ ನೇಯವನು:—** ತಿಮ್ಮಪ್ಪ! ನಿನ್ನ ಮಾತು ದಿಟ, ರಾಯರ ಬುದ್ಧಿ ಹೆಂಗಾಗದೆಯೋ ಯಾರೂ ಹೇಳಲಾರರು. ಅವರಿಲ್ಲಿಗೆ ಬರುವ ವರೆಗೂ ನಮಗೆ ಇಲ್ಲಿ ಕಾವಲು ಕೆಲಸ ತಪ್ಪುವಂತಿಲ್ಲ. ಮಾರಾಯರು ಬೇಗ ಬಂದರೆ, ಹಗಲೂ ಇರುಳೂ ಇಲ್ಲಿ ಗಾಳಿ, ಮಳೆ, ಬಿಸಿಲು, ಬೇಗೆಯೆನ್ನದೆ ಸಾಯುತ್ತಿರುವ ನಮಗೆ ಬಿಡುಗಡೆಯಾದಾತು. ಇದೆಲ್ಲಿಯ ಕಾಟವಪ್ಪ? ಏನುತಂಟೆ? ಮನೆ–ಮಾರು, ಹೆಂಡಿರು, ಮಕ್ಕಳು, ಒಕ್ಕಲುತನ ಇವೆಲ್ಲ ಬಿಟ್ಟು, ಇಲ್ಲಿ ಇವರ ಕೈಗೆ ಸಿಕ್ಕಿ ಪೇಚಾಡಬೇಕಾಗಿದೆ. ಇನ್ನು ನಾವು ಮೊದಲಂತೆ ಊರು ಸೇರಿ, ಗೊತ್ತಾದ ಕೆಲಸದಿಂದ, ಧಾರಾಳವಾಗಿ ತಿರುಗುವ ದಿವಸವಾವಾಗ ಬರುವುದೋ ತಿಳಿಯೆವು.

**೪ ನೇಯವನು:—** (೩ ನೇಯವನನ್ನು ಕುರಿತು–) 'ಮಾದಣ್ಣಾ! **ದಿಟ,** ನಿನ್ನ ಮಾತು ದಿಟ! ಮತ್ತೆ ನಮಗೆ ಅಂಥಾ ಕಾಲ ಬಂದೀತೇ? ನಾವು ಮೊದಲಿನಂತೆಯೇ ಇದ್ದೇವೆಯೇ? ಇದೇ ಕೊರತೆಯೇ ಹಗಲೂ ಇರುಳೂ ನನ್ನನ್ನು ಕಿತ್ತು ತಿನ್ನುತ್ತಿದೆ. ನಮ್ಮವ್ವೆ, ಆ ಚೆಂಡೀತಾಯಿ, ನಮ್ಮನ್ನು ಈ ಕಷ್ಟದಿಂದ ಪಾರುಗಾಣಿಸಬೇಕು.

**೫ ನೇಯವನು:—** ಏನೇನೋ ಹೇಳುತ್ತೀರಲ್ಲಪ್ಪ–ನೀವು? ಈಗ ನಿಮಗೇನು ಕಡಮೆಯಾಗಿದೆಯೆಂದು ಅಳುತ್ತಿದ್ದೀರಿ? ಹೊಟ್ಟೆಗೆ ದುಡಿಯಬೇಕೇ? ಹಿಟ್ಟಿಗೆ ದುಡಿಯಬೇಕೇ? ಇದ್ದಲ್ಲಿಗೇ ಹಿಟ್ಟು, ಸೊಪ್ಪು, ಬಟ್ಟೆ ಬರೆಗಳು ಬಂದು ಬೀಳುತ್ತವೆ. ಹಾಯಾಗಿ ದೊರೆಗಳಂತೆ ಕುಳಿತು, ಕಾಲ ಕಳೆಯಬಹುದು. ಹೀಗಿದ್ದೂ ಹೆಂಗಸರಂತೆ ಅಳುತ್ತಿದ್ದೀರಲ್ಲ?

**೩ ನೇ ಮಾದ:—** ಒಳ್ಳೆ ದೊರೆತನಕಾಣಯ್ಯ, ಮಲ್ಲಯ್ಯ! ನೀನೇನಪ್ಪ ಮಾರಾಯ, ನಿನಗೆ ಮೊದಲಿಂದಲೂ ಇಲ್ಲಿಯೇ–ಈ ಕಾಡಿನಲ್ಲಿಯೇ

ಇದ್ದು, ಕುಳಿತು ತಿಂದು ಬೊಜ್ಜುಬೆಳಸಿಕೊಂಡು ಅಭ್ಯಾಸವಾಗಿದೆ. ನಮಗೆ ಹಾಗಾದೀತೇ? ನಾವಿಲ್ಲಿಗೆ ಬಂದುದು ಮೊದಲು, ದಿನಕ್ಕೆ ಹತ್ತಾರುಸಲಕ್ಕೆ ಕಮ್ಮಿಯಿಲ್ಲದೆ ಗಂಡಾಂತರಕ್ಕೆ ಸಿಕ್ಕಿಸಿಕ್ಕಿ, ಕಣ್ಣುಬಾಯಿ ಬಿಟ್ಟು ಬರುತ್ತಿದ್ದೇವೆ. ಇಷ್ಟಾದರೂ ಯಾವಾಗ, ಯಾವ ಸರ್ಕಾರದ ಕಡೆಯವರು ಬರುತ್ತಾರೋ ಎಲ್ಲಿ ಯಾರನ್ನು ಯಾವಾಗ ಹಿಡಿದುಕೊಂಡು ಹೋಗುತ್ತಾರೋ, ನಮ್ಮ ಅವಸ್ಥೆಯೇನಾಗುತ್ತದೆಯೋ ತಿಳಿಯದು. ನಮ್ಮ ಮರಿಯಣ್ಣನಂತೂ ಕುರಿಯಂತೆಯೇ ಕೊರಗಿ ಸಾಯುತ್ತಿದ್ದಾನೆ.

**೪ ನೇ ಮರಿಯ:—** ಮತ್ತೇನ ಮಾಡಲಪ್ಪಾ ನಾನು? ನಮ್ಮ ಅಪ್ಪ ಅವ್ವೆಗಳು ಮುಪ್ಪಿನ ಮುದುಕರು. ಈ ಮುದಿತನದಲ್ಲಿ ಕುಲಕ್ಕೆಲ್ಲಾ ಒಬ್ಬನೇ ಮಗನಾಗಿರುವ ನನ್ನನ್ನೂ ಬಿಟ್ಟಿರಬೇಕೆಂದರೆ, ಎನು ಮಾಡುವೆ? ನನಗಂತೂ ಇನ್ನೂ ಮಕ್ಕಳು ಮರಿಗಳಾಗಿಲ್ಲ. ಹೆಂಡತಿಯಂತೂ ಮಡಿದು ಹೋಗಿ ಗೆದ್ದಳು. ಮುಂದೆ ನೋಡಿಕೊಳ್ಳುವ, ಯಾರ ಗುಂಡಿನ ಬಾಯಲ್ಲೋ? ಹೇಗೋ..... . ....?

**೫ನೇ:—** ಅದೇನಣ್ಣ ಬಲು ಬಲು ಮಾತಾಡುತ್ತೀಯೆ? ನೀನೇ ಬಲು ತಿಳಿದವನೆಂದಿದ್ದೀಯೋ? 'ಕಾಕುಮಾಮ' ಅಷ್ಟಾದರೂ ನಿನಗೆ ಗೊತ್ತಿದ್ದರೆ ಹೋಗಲಿ, ಅದಾದರೂ ಬಂದಿರಲಿಕ್ಕಿಲ್ಲ. ಆದರೂ ಎಷ್ಟರ ಜಂಬವಪ್ಪ. ಆಡುವ ಹುಡುಗ, ಈಗಾಗಲೇ ಸಾಯುವ ಮುದುಕರೂ ಹೇಳಬಾರದ ಮರುಳು ಮಾತುಗಳಾಡುವುದೇನು, ಚಂದವೆಂದೋ?

**೧ನೇ ಬೋರ:—** ದಿಟ ಕಾಣಯ್ಯಾ ಮಲ್ಲಯ್ಯ! ನಿನ್ನ ಮಾತು ದಿಟ, ಮರಿಯಣ್ಣನು ಮಾರಿಯ ಕೈಗೆ ಸಿಕ್ಕಿದ ಕುರಿಯಂತೆಯೇ ಅರಚುತ್ತಿದ್ದಾನೆ. ಆದರೆ ನನಗಾದರೂ ಒಂದೊಂದುಬಾರಿ ಹಾಗೆಯೇ ಆಡುವಂತಾಗುತ್ತದೆ. ನಮ್ಮ ಊರು ಕೇರಿಗಳನ್ನು ನೆನಸಿಕೊಂಡರೆ ಸಾಕು, ಹೊಟ್ಟೆಯಲ್ಲಿ ಉರಿಕಾಣುತ್ತದೆ.

**೨ನೇ ತಿಮ್ಮ:—** ಬಿಡುಬಿಡು, ದಮ್ಮಯ್ಯ ಬೋರಣ್ಣ! ನಿನ್ನ ಮಾತನ್ನು ಇಷ್ಟಕ್ಕೇ ಬಿಡು. ನಮ್ಮ ಗ್ರಹಚಾರ ಹೇಗಿರುತ್ತದೆಯೋ ತಿಳಿದವರಿಲ್ಲ. ಯಾವಕಾಲಕ್ಕೆ ಯಾವ ವೇಳೆಗೆ ಏನು ಬರುತ್ತದೆಂದು ಯಾರೂ ತಿಳಿದು ಹೇಳುವಂತಿಲ್ಲ. "ಇದ್ದಷ್ಟು ದಿನ ಯಥಾಲಾಭ" ಎಂದು ಹೇಳು

ವುದನ್ನು ನೆನಪಿಗೆ ತಂದುಕೋ, ಸುಮ್ಮನಾಗು. ಅದೃಷ್ಟದಲ್ಲಿದ್ದರೆ ಮತ್ತೆ ಹೋಗಿ ಹೆಂಡಿರು–ಮಕ್ಕಳು, ಮನೆ–ಮಾರು, ತಾಯಿ–ತಂದೆ, ಬಂಧು ಬಳಗಗಳನ್ನು ನೋಡುವೆವು. ಅದೃಷ್ಟದಲ್ಲಿ ಇಲ್ಲವಾದರೆ ಇಲ್ಲ. ಇಲ್ಲಿಗೆ ನಾವು ಕಳುಹಲ್ಪಟ್ಟ ಕೆಲಸವನ್ನು ನೆಟ್ಟಗೆ ಮಾಡಿಬಿಟ್ಟರೆ ಸಾಕು.

**೫ನೇ:—** ಹೇಗಾದರೂ ಹೇಳಿರಣ್ಣ, ಇಷ್ಟು ದಿನಗಳು ತಾಳಿದಿರಿ; ಇನ್ನು ಹತ್ತಿಪ್ಪತ್ತು ದಿನಗಳನ್ನು ಎಚ್ಚರಿಕೆಯಿಂದ ಕಳೆದರೆ, ನಿಮಗೇನು ಕಡಿಮೆಯಾಗುತ್ತದೆ? ಎಲ್ಲರೂ ಕುಬೇರನ ಪರಿವಾರವೇ ಆಗುತ್ತೇವೆ. ಧೈರ್ಯವಾಗಿರಿ.

**೪ನೇ:—** ಆಗಲಯ್ಯ ಮಾರಾಯ! ಹಾಗಾಗಲಪ್ಪ! ಆದರೆ ಹೇಳು, ಇಲ್ಲಿಯ ಕಾವಲು ತಪ್ಪಬೇಕಾದರೆ ಯಾವಾಗ?

**೫ನೇ ಮಲ್ಲ —** ರಾಯರು ಬಂದು, ಬೇಟೆಯಲ್ಲಿ ಹಿಡಿದುತಂದಿರುವ ಆ ಎರಡು ಮೃಗಗಳ ವಿಚಾರವನ್ನೂ ತೆಗೆದುಕೊಂಡ ಬಳಿಕ ...

**೪ನೇ —** ಈಗ ಷಿಕಾರಿಯನ್ನು ಎಲ್ಲಿರಿಸಿರುತ್ತಾರೆ ಗೊತ್ತುಂಟೇ?

**೫ನೇ:—** ನನಗೇನು ಗೊತ್ತು? ಬಂದವರನ್ನು ಹಿಡಿದು ಕಟ್ಟಿ ಕರೆದುಕೊಂಡುಹೋಗಿ ಬಿಟ್ಟರೆ, ಚಾವಡಿಕೊತ್ತವಾಲನೇ ಮುಂದಿನ ಕೆಲ ಸವನ್ನು ನೋಡಿಕೊಳ್ಳುತ್ತಾನೆ. ಅದೊಂದೂ ನಮಗೆ ತಿಳಿವಂತಿಲ್ಲ.

**೩ನೇ:—** ಹೋಗಲಿ, ಅವರನ್ನು ಮಟ್ಟಕ್ಕೆ ಬೈತಿಟ್ಟಿರುವರೋ? ಅವರ ಮೈಮೇಲಿದ್ದುದು ಬಳಿಯಲ್ಲಿದ್ದುದನ್ನೂ ಕೊಂಡುಹೋದರೋ?

**೨ನೇ:—** ಪಾದಣ್ಣ? ನಿನಗೆ ಬುದ್ಧಿ ಹೀಗೇಕಾಯಿತು? ಅದನ್ನೆಲ್ಲಾ ನಾವು ಕೇಳಬಹುದೇ? ಅವರೇನೆಂದುಕೊಂಡಾರು?

**೪ನೇ:—** ಅದೇನದು? ಕೇಳಿದರೆ! ಮುಳುಗಿಹೋಯಿತೇನು? ಅದರಿಂದ ನಮಗೇನಾಗುವುದು? ಅದಾರಿಗೆ ಬೇಕು? ಜೀವದಿಂದಿದ್ದರೆ ಹೇಗಾದರೂ ಸಂಪಾದಿಸಬಹುದು. ನೋಡು, ಇದಿರಿಗೆ ಪಾಳುದೇಗುಲದ ಒಳಗಿನ ಕತ್ತಲೆಕೋಣೆಯಲ್ಲಿಟ್ಟಿರಬೇಕು.

**೫ನೇ:—** ಮರಿಯಣ್ಣ! ನೀನು ಒಳ್ಳೆಯವನಾಗಿ ನನಗೆ ಕಾಣು ತ್ತಿಲ್ಲ. ನಿನ್ನಿಂದ ನಮಗೂ ನಮ್ಮ ಧಣಿಗಳಿಗೂ ಏನಾದರೂ ಪೀಕಲಾಟ ವಾಗಬಹುದು. ಹಾಗಿದ್ದರೆ, ಈಗಲೇ ಹೇಳು.

**೪ನೇ:—** ಹೋಗು ಹೋಗಯ್ಯ, ಅದಾರಿಗೆ ಬೇಕು? ನಾನೇನೂ ಇಲ್ಲಿಗೆ ಕೂಳಿಲ್ಲದೆ ಬಂದು ಸೇರಿಕೊಳ್ಳಲಿಲ್ಲ. ರಾಯರು, ತಮ್ಮ ಕೆಲಸಕ್ಕಾಗಿ ಗೊತ್ತುಮಾಡಿ, ಬಲವಂತಮಾಡಿ ಕಳಿಸಿದರಿಂದ ಬಂದೆನು. ನನಗೇನು ಈಗ–ಈಗಲೇ ಬಿಟ್ಟುಹೋದರೂ ಆಯಿತು. ಕುಳಿತಕಡೆಯೇ ಹಳ್ಳಿಸಾಲೆಯ ಮಕ್ಕಳಿಗೆ ಒಂದೆರಡು ಆಟದ ಸಾಮಾನುಗಳನ್ನೂ ಹಣಿಗೆ ಕೆಲಸವನ್ನೂ ಹೇಳಿಕೊಟ್ಟರೆ, ನನಗಾಯಿತು. ಆದರ ಮೇಲೇನು?

(ಮರಿಯುನ ಮಾತು ಮುಗಿವುದಕ್ಕೆ ಮೊದಲೇ ಪೊದರಿನಲ್ಲಿ ಅಡಗಿದ್ದ ನಾಯಿಯೊಂದು ಓಡಿಬಂದು ಕೂಗಲಾರಂಭಿಸಿತು. ನಾಯಿ ಒಂದೇ ಸಮನಾಗಿ ಕೂಗುತ್ತಿರುವುದನ್ನು ನೋಡಿ, ಕುಳಿತಿದ್ದ ಐವರೂ ಚಕಿತರಾಗಿ ಎದ್ದು ಬಂದು ನೋಡಿದರು. ಸ್ವಲ್ಪ ದೂರದಲ್ಲಿಯೇ ಒಬ್ಬ ದಾರಿಗನು ತಮ್ಮ ಕಡೆಗೆ ಬರುತ್ತಿದ್ದಂತೆ ಕಂಡು ಬಂದಿತು. ಕೂಡಲೇ ಐವರೂ ಸ್ವಲ್ಪಸ್ವಲ್ಪ ಸರಿದುನಿಂತು ಹೊಂಚುತ್ತಿದ್ದರು. ಒಂದೆರಡು ನಿಮೇಷದಲ್ಲಿಯೇ ಮುದುಕನೊಬ್ಬನು ತಿರುತಿರುಗಿ ನೋಡುತ್ತಾ ಒಂದೊಂದು ಸಲ 'ಮಗು–ಮಗು, ಎಲ್ಲಿರುವೆಯಮ್ಮ? ಎಲ್ಲಿರುವೆ? ಅಯ್ಯೋ, ಏನಾದೆ?' (ಎಂದು ಹೇಳುತ್ತಾ ಬರುತ್ತಿದ್ದನು. ಆ ಮುದುಕನು ಗಡಿಯ ಚೌಕವನ್ನು ಸೇರಿದ, ಕೂಡಲೇ ನಾಲ್ಕುಕಡೆಯಲ್ಲಿಯೂ ಹೊಂಚಿನಿಂತಿದ್ದವರು ಒಂದೇ ವೇಗದಿಂದ ಹಾರಿಬಂದು ಮುತ್ತಿಬಿಟ್ಟರು. ಮುದುಕನು ತನ್ನನ್ನು ಮುತ್ತಿದವರನ್ನು ಕುರಿತು ಕಳವಳದಿಂದ ತತ್ತರಗೊಳ್ಳುತ್ತ–'ದಮ್ಮಯ್ಯ, ಅಪ್ಪ! ನನ್ನನ್ನು ಕೊಲ್ಲಬೇಡಿರಿ. ಬಿಟ್ಟುಬಿಡಿರಪ್ಪಾ!' ಎಂದು ಕೇಳಿಕೊಂಡನು.

**೫ನೇ ಮಲ್ಲ:—** ಆಗಲಿ, ಬಿಡುತ್ತೇನೆ. ಹೇಳು, ನೀನಾರು? ಎಲ್ಲಿಂದ ಬಂದೆ? ಎಲ್ಲಿಗೆ ಹೋಗುತ್ತೀ? ಜತೆಯಲ್ಲಿ ಯಾರುಯಾರು ಬಂದಿದ್ದಾರೆ? ಏನೇನು ತಂದಿದ್ದೀರಿ?

**ಮುದುಕ:—** (ನಡನಡುಗುತ್ತ, ತೊದಲುನಾಲಿಗೆಯಿಂದ, ತಡತಡೆದು ಮೆಲ್ಲಮೆಲ್ಲನೆ) 'ಅಪ್ಪಾ, ನಿಮ್ಮ ಧರ್ಮ! ನನಗೆ ಇಂದಿಗೆ ಎಂಬತ್ತು ವರ್ಷವಾಯಿತು. ಸಾಯುವ ಕಾಲ, ನನಗಿಬ್ಬರೇ ಹೆಣ್ಣು ಮಕ್ಕಳು; ಹೆಂಡತಿಯಿಲ್ಲ. ದೇವರು ಕೊಟ್ಟುದು ಏನೋ ಹೊಟ್ಟೆಗೂ

ಬಟ್ಟೆಗೂ ತಕ್ಕಷ್ಟು ಇದೆ. ಆದರೇನು? ಅಯ್ಯೋ. ......" ಎಂದನು.

**೫ನೇ:**— ಹೀಗಾಡುತ್ತೀಯಾಕೆ? ಕೇಳಿದ್ದಕ್ಕೆ ಸರಿಯಾಗಿ ಹೇಳು.

**ಮುದುಕ:**— ಅಪ್ಪ! ಹೊಡೆಯಬೇಡ. ನಾನು ನಿಮಗೇನೂ ತಂಟೆ ಮಾಡಲಿಲ್ಲ, ಮನ್ನಿಸಿಬಿಡು. ನನಗೆ ಅರುಳುಮರುಳು, ತ್ರಾಣವಿಲ್ಲ. ನಾನು ಹೊತ್ತುತಂದಿರುವುದು ಇದೊಂದು ಗಂಟು, ಇದೊಂದು ದೊಣ್ಣೆ, ನನ್ನ ಸೊಂಟದಲ್ಲಿರುವುದೊಂದು ನಸ್ಯದ ಭರಣಿ, ಇಷ್ಟೆ. ಇಷ್ಟಕ್ಕೇಕೆ ಹೀಗೆ ಕೊಲ್ಲುತ್ತೀರಿ? ನೀವು ಕೊಲ್ಲದಿದ್ದರೂ ನಾನೇ ಹೋಗುವ ಕಾಲ. ಧರ್ಮವನ್ನು ಕಟ್ಟಿಕೊಳ್ಳಿರಿ, ಮುದುಕನನ್ನು ಹೊಡೆಯಬೇಡಿರಿ. ಹುಹೂ-ಹೂ-ಹೂ-ಅಯ್ಯೋ! ಅಪ್ಪಾ! ಊಹೂ! ಹಾಳು ಕೆಮ್ಮಲು.'

**೫ನೇ:**— ( ಕೇಕೆಹಾಕಿ ನಗುತ್ತ- ) 'ಏನಯ್ಯ ಮುದುಕಯ್ಯ' ಹೀಗೇಕೆ ಒಂದೇ ಉಸಿರಿಗೆ ನಾಲಿಗೆ ಹಿಡಿದುಕೊಂಡು ಸಾಯುತ್ತಿದ್ದೀಯೆ?

**ಮುದುಕ:**— ಅಪ್ಪಪ್ಪ! ಅಯ್ಯಯ್ಯೋ ಯಮಧೂತರು! ಯಮಧೂತರು! ನಾರಾಯಣಾ, ಗೋವಿಂದಾ, ಅಯ್ಯೋಮಗು, ಅಮ್ಮಾ ದುರ್ಗಾದೇವಿ! ನೀನೇನಾದೆಯಮ್ಮಾ! ಬಾ, ತಾಯಿ! ಅಯ್ಯೋ ನನ್ನನ್ನು ಬಿಡಿಸಿಕೋ, ಹೋದೆ-ನಾನು ಹೋದೆ

**೪ ನೇ ಮರಿಯಣ್ಣ:**—( ಮುದುಕನ ಬೆನ್ನು ಸವರಿ-) 'ಸ್ವಾಮಿ! ಭಯಪಡಬೇಡಿ. ನಾವು ಯಮಧೂತರಲ್ಲ, ಗಡಿಯ ಕಾವಲುಗಾರರು, ತಳವಾರರು. ನಿಮಗೇನಾಗಿದೆಯೋ ಹೇಳಿ. ಯಾಕೆ ಅಳುತ್ತೀರಿ? ಈ ಮುಪ್ಪಿನಲ್ಲಿ ಒಬ್ಬರೇ ಈ ದಾರಿಯಲ್ಲಿ ಯಾಕೆ ಬಂದಿರಿ?

**ಮುದುಕ:**— 'ಉಸ್ಸಪ್ಪಾ-ಅಪ್ಪಪ್ಪಾ! ಬದುಕಿದೆನಪ್ಪ! ನೀವು ನೀವು ಕಾವಲುಗಾರರೇ? ಹಾಗಿದ್ದರೆ ನನ್ನನ್ನು ಬದುಕಿಸಿರಿ?

**೨ ನೇ:**— ಈಗ ನಿಮಗೇನಾಗಿದೆ?

**ಮುದುಕ:**— ನನಗೇನಾಗಿರುವುದೆಂದೆಯಾ? ಅಯ್ಯೋ-ನನಗಿನ್ನೇನಾಗಬೇಕು? ನನ್ನ ಬಲಗಣ್ಣಿಗೆ ಪೆಟ್ಟು ಬಿದ್ದಿರುವುದೆಂದು ಬಂದ ನನಗೆ-ಅಯ್ಯೋ, ಇಲ್ಲಿ ಈ ನಡುಗಾಡಿನಲ್ಲಿ ಈ ಕತ್ತಲೆಯಲ್ಲಿ ಎಡಗಣ್ಣಿಗೂ ಅಪಾಯವಾಗಿರುವುದೇ! ಅಯ್ಯೋ, ಅಪ್ಪಾ, ಬೇಗಬಿಡಿಸಿರಪ್ಪಾ!

**೫ ನೇ:**— ಥೂ, ಥೂ, ಹಾಳುಮುದುಕ! ಹೀಗೇಕೆ ಒದರುತ್ತಿ

ಡ್ಡಾನೆ? ಇವನಿಗೇನಾಗಿದೆ ಪ್ರಾಣಾಪತ್ತು?

**ಮುದುಕ:—** ಅಯ್ಯಪ್ಪಾ, ಮೊದಲೇ ನಾನು ಸಾಯುವ ಮುದುಕ, ಸಾಲದುದಕ್ಕೆ ಕಣ್ಣಿನಂತಿದ್ದ ಹೆಣ್ಣುಹುಡುಗಿಯನ್ನೂ ಕಳೆದುಕೊಂಡು ಅಳುತ್ತಿರುವೆನು. ಸಂಕಟವೇನೆಂದಾದರೂ ಕೇಳದೆ ನೀವೂ ಕೊಲ್ಲುತ್ತಿರುವಿರಲ್ಲಾ! ದೇವರೇ! ಎಂತೆಂತಹ ಜನರನ್ನು ನಿರ್ಮಿಸಿರುತ್ತೀಯಪ್ಪಾ! ಇವರೂ ನನ್ನಂತೆಯೇ ಮುಪ್ಪಿಗೆ ಬಂದು, ಸಾಯುವಾಗ ಹೊಟ್ಟೆಯ ದುಃಖವನ್ನು

**ಳನೇ:—** ಸ್ವಾಮಿ! ಶಾಪಕೊಡಬೇಡಿ, ತಾಳ್ಮೆಯನ್ನು ತೆಗೆದುಕೊಳ್ಳಿ, ನಾವೇನೂ ಕೊಲೆಗಡುಕರಲ್ಲ. ಹೇಳಿ? ನಿಮ್ಮ ಮಗಳೆಲ್ಲಿರುವಳು—ಏನಾಗಿರುವಳು?

**ಮುದುಕ —** ಅಯ್ಯೋ! ಈ ಕತ್ತಲೆಯಲ್ಲಿ ಅವಳೆಲ್ಲಿರುವಳೆಂದು ಹೇಳಲಿ? ಈ ಸುಡುಗಾಡಿನಲ್ಲಿ ಅವಳೇನಾಗಿರುವಳೆಂದು ತಿಳಿಯಲಿ? ಅಮ್ಮಾ! ದುರ್ಗೆ! ಬರಲಾರೆಯೇನಮ್ಮಾ? ಮಗು, ಬರಲಾರೆನೆಂದರೂ ಬಿಡದೆ ನನ್ನನ್ನು ಕರೆತಂದೆಯಲ್ಲಾ! ಊರುಸೇರುವುದಕ್ಕೆ ಮೊದಲೇ ಎಲ್ಲಿ ಅಡಗಿರುವೆ, ತಾಯಿ?"

**ಳನೇ:—** ಸ್ವಾಮಿ! ನಿಮ್ಮ ಮಗಳನ್ನು ಹುಡುಕಿ ಕರೆತರುತ್ತೇವೆ, ಹೇಳಿ. ಹೇಗಿರುವಳು? ಎಷ್ಟು ವರ್ಷ? ಮೈಮೇಲೇನಾದರೂ ಒಡವೆಗಳಿದ್ದವೆ? ಒಂಟಿಯಾಗಿರುವಳೇ?

**ಮುದುಕ:—** ಅಪ್ಪ, ನಿಮಗೆ ಪುಣ್ಯ ಬರಲಿ, ಅಷ್ಟು ಮಾತ್ರ ಮಾಡಿರಿ. ನನ್ನ ಮಗಳಿಗೆ ಹದಿನೆಂಟು ವರ್ಷ. ಅವಳೊಬ್ಬಳೇ ನನ್ನ ಜೊತೆಯಲ್ಲಿ ಬಂದಳು. ಅವಳ ಮೈಮೇಲೆ ಒಂದುಸಾವಿರ ರೂಪಾಯಿ ಬೆಲೆಬಾಳುವಷ್ಟು ಒಡವೆಗಳಿದ್ದುವು. ಒಳ್ಳೆಯ ಹುಡುಗಿ, ತುಂಬಾ ಚಲುವೆ! ಅಯ್ಯೋ ದುರ್ಗೆ! ನಿನ್ನ ಗಂಡನಿಗೆ ಏನು ಹೇಳಲಿ, ತಾಯಿ?

**ಌನೇ —** ಹೇಳಿರಯ್ಯಾ-ಅಳದೆ ಹೇಳಿ, ನೀವೆಲ್ಲಿಂದ ಬಂದಿರಿ? ಯಾವಾಗ ಹೊರಟಿರಿ? ಎಲ್ಲಿಗೆ ಹೋಗಬೇಕೆಂದಿರುವಿರಿ?

**ಮುದುಕ —** ಅಪ್ಪ! ನಾನು ಹೊರಟುದು ಕನಕಗಿರಿ ದುರ್ಗದಿಂದ; ಹೋಗಬೇಕಾದುದು ಕಲ್ಯಾಣನಗರದ ಕೊಪ್ಪಲಿಗೆ; ಅಲ್ಲಿರುವ ವಿಕ್ರಮ

ಸೇನರಾಕೂರನೇ ನನ್ನ ದೊಡ್ಡ ಮಗಳ ಗಂಡ. ಆತನಿಗೇನೋ ತುಂಬಾ ಆಯಾಸವೆಂದು ವರ್ತಮಾನವು ಬಂದುದರಿಂದ, ನನ್ನ ಕಿರಿಯ ಮಗಳೊಡನೆ ಹೊರಟುಬಂದೆನು. ಊರುಸೇರಲಿಕ್ಕೂ ಅವಕಾಶ ಕೊಡದೆ ಹಾಳು ದೈವ, ಅಯ್ಯೋ!

**ಜನೇ:—** ಹಾರುವಯ್ಯಾ! ತಾಳು ಕೊಂಚತಾಳು! ಕೂಗಿ ಕೆಲಸವನ್ನು ಕೆಡಿಸಿಕೊಳ್ಳಬೇಡ. ನಿನ್ನ ಮಗಳು ನಿನ್ನೊಡನೆ ಎಲ್ಲಿಯವರೆಗೂ ಬಂದುದನ್ನು ನೋಡಿದೆ ?

**ಮುದುಕ.—** ಉಸ್ಸಪ್ಪಾ! ಅದೋ ನೋಡಯ್ಯಾ! ಆ ಈಚಲಮರದ ಗುಂದಿ, ಅಲ್ಲಿಯವರೆಗೆ ಅವಳೂ ನಾನೂ ಒಟ್ಟಿಗೆ ಬಂದೆವು. ಅಲ್ಲಿಂದ ಮುಂದೆ ಅಯ್ಯೋ, ಅವಳಗತಿಯೇನಾಯಿತೋ, ನಾನು,....

(ಮುದುಕನ ಮಾತು ಮುಗಿವುದಕ್ಕೆ ಮೊದಲೇ, ಮೆಳೆಯಕಡೆಯಿಂದ) "ಅಪ್ಪಾ! ಕಳ್ಳ—ಕಳ್ಳ, ಅಯ್ಯೋ ಕಳ್ಳ, ಹೋದೆ—ಕಳ್ಳ! ಕಳ್ಳ, ಕಳ್ಳ," (ಎಂಬ ಆರ್ತಸ್ವರವು ಹೊರಟಿತು. ಮುದುಕನು) "ಅಯ್ಯೋ—ದುರ್ಗೆ! ಹಾ—ತಾಯಿ, ಅಮ್ಮಾ ಮಗು!" ಎಂದು ಕೂಗುತ್ತ ಕೆಳಗೆ ಬಿದ್ದನು. ಕಾವಲಿನವರಲ್ಲಿ ಜನೆಯುವನಾದ ಮಲ್ಲನೆಂಬುವನು ೧ನೆ, ೨ನೆಯವರನ್ನು ಕೈಹಿಡಿದೆಳೆದು, ಬನ್ನಿರಣ್ಣಾ—ಬನ್ನಿರಿ, ಹೋಗಿ ನೋಡಿ ಬರುವ. ಮರಿಯಣ್ಣಾ—ಮಾದಣ್ಣಾ, ಇಬ್ಬರೂ ಈ ಮುದುಕಯ್ಯನನ್ನು ಹಿಡಿದಿರಲಿ?" ಎಂದು ಹೇಳಿ ಅವರನ್ನೂ ಎಳೆದುಕೊಂಡು ಓಡಿದನು.

ಮಾದನೂ ಮರಿಯನೂ ಮುದುಕನನ್ನು ನೋಡಿಕೊಳ್ಳುತ್ತಿದ್ದರು. ಒಂದೆರಡು ನಿಮಿಷದಲ್ಲಿಯೇ ಮತ್ತೊಂದುಕಡೆ—ಪುರುಷಕಂಠದಿಂದ 'ಹುಲಿ, ಹುಲಿ, ಹುಲಿ; ಬಿತ್ತು, ಮೇಲೆ ಬಿತ್ತು' ಎಂಬ ಸ್ವರವೂ ಉತ್ತರಕ್ಷಣದಲ್ಲಿಯೇ ಗುಂಡು ಹಾರಿದ ಶಬ್ದವೂ ಅದರೊಡನೆಯೇ 'ಸಿಕ್ಕಿತು—ಸಿಕ್ಕಿತು; ಶಿಕಾರಿಸಿಕ್ಕಿತು.' ಎಂಬ ವೀರನಾದವೂ ಹೊರಟು ಹಾರಿ ಹಾರಿ ಹೋಗುತ್ತಿದ್ದ ಮಲ್ಲನ ಬೆನ್ನಿಗೆ ಹಿಂದಿನಿಂದ ವೇಗವಾಗಿ ಹಾರಿಬಂದ ಗುಂಡಿನೇಟು ತಗಲಿ, ಅವನನ್ನು ನೆಲಕ್ಕುರುಳಿಸಿತು. ಅವನ ಎಡಬಲಗಳಲ್ಲಿ ಬರುತ್ತಿದ್ದ ಬೋರ ತಿಮ್ಮ ಇಬ್ಬರೂ ಹಾಹಾಕಾರದಿಂದ ಹಿಂತಿರುಗಿನೋಡದೆ, ಓಡಿಹೋದರು. ಇದೆಲ್ಲವನ್ನೂ ನೋಡಿ ಮಾತಿಲ್ಲದೆ ಮೂರ್ಛಿತನಂತೆ ಬಿದ್ದಿದ್ದ

ಮುದುಕನನ್ನು ಮರಿಯ ಮಾದ ಇಬ್ಬರೂ ಸೇರಿ ಹೊತ್ತುಕೊಂಡು ಹೊರಟುಹೋದರು. (ಮುಳ್ಳು ಮೆಳೆಯಲ್ಲಿ ಆರ್ತಳಾಗಿ ಕೂಗಿದ ಹೆಂಗಸಿನ ಗತಿಯಾಗಲಿ, ಗುಂಡಿನೇಟು ತಗಲಿ ಕೆಳಗೆ ಬಿದ್ದ ಮಲ್ಲನ ಅವಸ್ಥೆಯಾಗಲೀ ಏನಾಯಿತೆಂಬುದನ್ನು ಅಲ್ಲಿ ಕೇಳುವರಾರು? ಕಣ್ಣಾಣದ ಕತ್ತಲೆಯಲ್ಲಿ, ಗುರುತರಿಯದ ನಟ್ಟಡವಿಯಲ್ಲಿ ಸಿಕ್ಕಿಬಿದ್ದು ಕೂಗಿಕೊಂಡ ಅಂಗನೆಯನ್ನೂ ಕಳ್ಳರಗಡಿಯಲ್ಲಿ ಕ್ರೂರರಕೈಯಲ್ಲಿ ಸೆರೆಯಾದ ಮುದುಕನನ್ನೂ ಬಿಡಿಸಿ ಕೊಂಡು ಹೋಗಲು ಬರುವ ಆಪ್ತರಾರು? ಅವರೆಲ್ಲಿರುವರು? ಏನಾದರು? ಭಗವಂತ! ನೀನೇ ಸುತ್ತಲು ಕಾವಲಾಗಿದ್ದು, ನೋಡಿಕೊಳ್ಳುತ್ತಿರುವ ನಲ್ಲವೇ? ಹಾಗಿದ್ದರೆ, ಕಳ್ಳರಗಡಿಗೂ–ಗುಳ್ಳೆನರಿಯಾಗಿ ಹೊಕ್ಕು ಬಂದು, ಗಲಿಬಿಲಿ ಮಾಡಬಲ್ಲೆ! ಮಾಡು ಮಾಡು! ನೀನೇ ಗತಿಯೆಂದು ನಿನ್ನ ಮೇಲೆ ಭಾರವನ್ನು ಹೊರೆಯಿಸಿರುವ ನಾವು ನಿಶ್ಚಿಂತರಾಗಿರುವೆವು.)

---

ಶ್ರೀ:

# ದ್ವಿತೀಯ ಪರಿಚ್ಛೇದ.

---

ಶೂಲಖಡ್ಗಧರೇ ದೇವಿ, ದೈತ್ಯಹೃತ್ಸ್ವ ಪದಾಂಬುಜೇ |
ಘೋರರೂಪೇ ಮೃದುಸ್ವಾಂತೇ ವಿಷ್ಣುಶಕ್ತಿ ನಮೋಸ್ತುತೇ ||"

(ಧ್ಯಾನಶ್ಲೋಕ)

(ದುರ್ಗೆಯ ರೌದ್ರಾವೇಶ)

"ಕಳ್ಳರ ಗಡಿಯಲ್ಲಿ ಚೇಷ್ಟಾರಹಿತನಾಗಿ ಬಿದ್ದಿದ್ದ ಮುದುಕನನ್ನು ಅವರೆಲ್ಲಿಗೆ ಹೊತ್ತುಕೊಂಡು ಹೋದರು? ಕಳ್ಳರ ಕೈಗೆಸಿಕ್ಕಿದೆನೆಂದು ಮೊರೆಯಿಟ್ಟ ಆ ಅಬಲೆಯೇನಾದಳು? ಅಂಗನೆಯ ಮೈಮೇಲಿನ ಆಭರಣ ಗಳ ಆಶೆಯಿಂದ ಓಡಿಬಂದಾ ಚೋರನ ಗತಿಯನ್ನು ಹೇಳಬಲ್ಲವರಾರು?" ಆತುರಪಡಬೇಡಿರಿ, ಪಾಠಕರೇ, ಆತುರದಿಂದ ಭೀತರಾದರೆ, ಧೂರ್ತರ ಕೃತ

ಕದಿಂದ ಸೋತುಹೋಗುವಿರಿ. ಧೀರರಾಗಿ, ಪ್ರತ್ಯಕ್ಷಪ್ರಮಾಣದಿಂದ ಪರಾಮರ್ಶಿಸಿ, ತಾಳ್ಮೆಯಿಂದವಲೋಕಿಸಿದರೆ ವಿದ್ಯಮಾನವೆಲ್ಲವೂ ತಿಳಿಯ್ಯ ಬರುವುದು. ಇನ್ನು ನಾವು ಪಾಳುದೇಗುಲವನ್ನು ಗಮನಿಸುವ. "ಅಬ್ಬಬ್ಬಾ! ಪಾಳುದೇಗುಲ! ಈ ಕತ್ತಲೆಯಲ್ಲಿ, ಈ ಘೋರಾರಣ್ಯಮಧ್ಯದ ಗುರುತು ಕಂಡರಿಯದೆಡೆಯಲ್ಲಿ, ನಮ್ಮಿಂದಾಗದು! ಇದು ನಮ್ಮಿಂದ ಹೇಗೂ ಸಾಧ್ಯ ವಾಗದು."

ಭಲೆ, ಸುಹೃದರೆ, ಭಲೆ! ಭಟರೆಂದರೆ, ನೀವೇ ಅಹುದಹುದು! ಮೆಚ್ಚಿದೆವು, ನಿಮ್ಮಾ ಧೈರ್ಯ ಸ್ಥೈರ್ಯ ಸಾಹಸಾದಿಗಳನ್ನು ಮೆಚ್ಚಿದೆವು! ನಿಜ, ನೀವೇ ದೇಶದ್ರೋಹಿಗಳನ್ನು ಜಯಿಸಿ, ಅವರಿಂದಾಕ್ರಮಿಸಲ್ಪಟ್ಟಿರುವ ನಮ್ಮಾ ದೇಶಮಾತೆಯನ್ನು ಪುನರುದ್ಧಾರ ಮಾಡತಕ್ಕ ಧೀರರೆಂಬುದು ನಿಜ. ಅಲ್ಲವೇ? ಸಂದೇಹವೇನು? ಕತ್ತಲೆಗೆ ತತ್ತರಿಸುವುದೂ, ಗುರುತು ಕಾಣದೆಡೆಯಲ್ಲಿ ಕಳ್ಳರ ಗಡಿಗೆ ಒತ್ತಾಸೆಯಾಗಿರುವ ದೇಗುಲವೆಂದು ಧೃತಿ ಗೆಟ್ಟು ಕೂಗುವುದೂ, ಧೀರಾಗ್ರೇಸರರ ಕುರುಹೇನು? ಎತ್ತೆತ್ತಲೂ ಸುತ್ತಿ ಮುತ್ತಿ ಕಾಡುತ್ತಿರುವ ಹಿತಶತ್ರುಗಳನ್ನೇ ಗೊತ್ತುಹಿಡಿದು ಪರಾಜಿತರನ್ನಾಗಿ ಮಾಡಲಾರದೆ, ಅವರ ಬೆಳ್ನುಡಿಗೆ ಕಿವಿಕೊಟ್ಟು, ಬಳಿಕ್ಕವರ ಅಟ್ಟುಳಿಗೆ ಕಂಗೆಟ್ಟು ಹೋಗುತ್ತಿರುವವರಿಗೆ ಪ್ರತ್ಯಕ್ಷಶತ್ರುಗಳೆಂದರೆ, ಹೇಗೆ ಧೈರ್ಯ ವಾಗಬೇಕು? ಹೇಗಾದರೂ ಇರಲಿ, ಪಾಠಕರಾದ ನೀವು ಹೇಗಿದ್ದರೂ ಕಾರ್ಯವೇನೋ ನಡೆದೇ ಹೋಗುವುದಲ್ಲದೆ ನಿಲ್ಲುವುದಿಲ್ಲ. ಆದರೆ, ಕರ್ಮ ಕ್ಷೇತ್ರದಲ್ಲಿ ಕಾಲಿಟ್ಟು, ಕರ್ತವ್ಯಚಕ್ರಕ್ಕೆ ಕೈಗಳನ್ನೊಪ್ಪಿಸಿಬಿಟ್ಟಿರುವ ಲೇಖಕರಾದ ನಾವು ನಿಮ್ಮಂತೆ ಬೇರೆ ಹಿಂದೆಗೆದು ಕುಳಿತುಕೊಳ್ಳುವಂತಿಲ್ಲ. ಕತ್ತಲೆಯಲ್ಲಿಯಾಗಲೀ, ಬಿರುಬಿಸಿಲ ಬಲುಬೇಗೆಯಲ್ಲಿಯಾಗಲೀ, ಮಳೆ ಗಾಳಿಗಳ ಹೊಡೆತದಲ್ಲಾಗಲೀ, ಅಡವಿಗೆಂದರಾಗಲೀ, ಗಿರಿಗುಹೆಗಳಿಗೆಂದ ರಾಗಲೀ, ಕ್ರೂರಮೃಗಗಳ ಗರ್ಭವಾಸಕ್ಕೆಂದರಾಗಲೀ, ಇಲ್ಲವೇ–ಪ್ರಚಂಡರ ಮುಂದೆ ಹೋರಾಡಲು ನಿಲ್ಲಬೇಕೆಂದರಾಗಲೀ, ಹಿಂದು ಮುಂದು ನೋಡದೆ, ಚಿತ್ತೈಕಾಗ್ರತೆಯಿಂದ ಮಾರಾಂತು ನಿಲ್ಲಲೇ ಬೇಕಾಗಿರುವುದು.)

ಇದೇ ಪಾಳುದೇಗುಲ! ಕಟ್ಟಡವು ನೆಲಕ್ಕೇ ಇಳಿದು ಮಣ್ಣಿನಲ್ಲಿ ಹೂತುಹೋಗಿ, ನೆಲಮಾಳಿಗೆಯಂತೆಯೇ ಕಾಣುತ್ತಿರುವುದು. ಮುಂದೆ

ಕಾಣುತ್ತಿರುವ ಹಳ್ಳದಲ್ಲಿಳಿದು, ಮೆಲ್ಲನೆ ದೇಗುಲದ ಒಳಗೆ ಹೋಗಬೇಕು.

ಇದೇನು ? ಹೊರಗೆ ನೋಡಲು ಹೂತು ಹೋದಂತೆ ಕಂಡು ಬಂದ ಈ ದೇಗುಲವು, ಒಳಭಾಗದಲ್ಲಿ ಇಷ್ಟು ವಿಶಾಲವುಳ್ಳುದಾಗಿರುವುದು ? ಅದಾರು ಒಳಗಿರುವರು ? ಇದೇನಿದು, ಇಲ್ಲಿ ಪ್ರಕಾಶಮಾನವಾದ ದೀಪ ! ಒಳಗಡೆ ಬಲವಾದ ಶಬ್ದವು ಕೇಳುತ್ತಿರುವುದು.

"ಮೂರ್ಖ ! ಪಾಷಂಡಿ !! ಉಸಿರೆತ್ತುವೆ, ಜೋಕೆ ! ಕುಲ, ಮಾನ, ಧರ್ಮ, ಧ್ಯೇಯ, ಕರ್ತವ್ಯ—ಇವೆಲ್ಲಕ್ಕೂ ಶತ್ರುವಾಗಿ ತಿರುಗುತ್ತಿದ್ದೆ ಯಲ್ಲವೇ ? ಧೂರ್ತ ! ಇರಲಿ, ಹೇಳು. ಬಾಯ್ದೆರೆದು ಬೇಗ ಹೇಳು. ನಿನ್ನವರೆಲ್ಲಿರುವರು ?" ಒಳಗೆ ಹೀಗೆ ಶಬ್ದವು ಘನಘರ್ಜನೆಯಿಂದ, ಸ್ತ್ರೀ ಕಂಠದಿಂದ—ಹೊರಡುತ್ತಿದ್ದಿತು.

ಒಳಗಡೆ ಕರಾಳವದನನಾದ ಮನುಷ್ಯನೊಬ್ಬನು 'ಮಹಿಷಾಸುರ' ದಾನವನಂತೆ ನೆಲದಮೇಲೆ ಹಲ್ಗಿರಿದು ನೋಡುತ್ತ ಬಿದ್ದಿದ್ದನು. ಅವನ ಎದೆಯಮೇಲೆ ಎಡಗಾಲೂರಿ ಬಲಗಾಲನ್ನು ಮೇಲಕ್ಕೆತ್ತಿ ತಲೆಯ ಮೇಲಿಡುವ ಪ್ರಯತ್ನದಲ್ಲಿದ್ದಂತೆ ಸ್ತ್ರೀಮೂರ್ತಿ ನಿಂತಿದ್ದಿತು, ಪ್ರತ್ಯಕ್ಷ ಮಹಿಷ ಮರ್ದಿನಿಯೆಂಬಂತೆ, ಉಗ್ರರೂಪಧಾರಿಣಿಯಾಗಿದ್ದಾ ದೇವಿಯ ಎಡಗೈ ಯಲ್ಲಿ ತ್ರಿಶೂಲವೂ ಬಲದ ಕೈಯ್ಯಲ್ಲಿ ಖಡ್ಗವೂ ಇದ್ದುವು. ಮುಖದಲ್ಲಿ ರೌದ್ರರಸವುಕ್ಕುತ್ತಿರುವಂತೆ ಕಿಡಿಗಳುದುರುವ ನೋಟವು ಭಯಾನಕ ವಾಗಿದ್ದಿತು.

"ದುರ್ಜನ ವಿದಾರಿಣಿಯಾದ ದೇವಿಗೆ ಜಯ !"

ಜಯ, ಭಗವತಿ, ದುರ್ಗಾಮಾತೆ, ಜಯಜಯ, ಕಾಳಿ, ಜಯಜಯ!! ನಿನ್ನೀ ಕರಾಳರೂಪಧಾರಣಕ್ಕೆ ಜಯವು! ನಿನ್ನೀ ದುಷ್ಟನಿಗ್ರಹಕಾರ್ಯಕ್ಕೆ ದಿಗ್ವಿಜಯವು ! ನಿನ್ನೀ ಭಕ್ತರಿಗೆಲ್ಲಾ ಆಮೋದವು. "ಆದರೆ ಅವನಾರು, ಆ ಕ್ರೂರದಾನವನು ? ಕಳ್ಳರ ಮಲ್ಲನಲ್ಲವೆ ?" ಅಹುದು, ಗಡಿಯ ಕಾವಲಿನ ಮಲ್ಲ; ಸಂದೇಹವಿಲ್ಲ.

(ದೇವಿ ದೀಪದ ಇದಿರಿಗೆ ಬಲಗೈಯಿಂದ ಖಡ್ಗವನ್ನು ಮೇಲಕೆತ್ತಿ ಝಳಪಿಸುತ್ತ ಮೆಲ್ಲನೆ ಎದೆಯ ಮೇಲೆ ಎಡಗಾಲೂರಿ ಕರ್ಕಶಸ್ವರದಿಂದ 'ಹೇಳು, ಮೂರ್ಖ, ಈಗಲಾರದೂ ಹೇಳು; ಉಳಿಯಲಿಷ್ಟವುಂಟೋ

ಇಲ್ಲವೋ? ಎಂದು ಘರ್ಜಿಸಿದಳು.)

ಮೊದಲೇ ಭಯಜನಕವಾದ ರೂಪಧಾರಣವು; ಮೇಲೆ ಆಗ್ರಹ-ವೀರನಾದಗಳೂ ಸೇರಿದ್ದರೆ ಹೇಳುವುದೇನು? ಸಾಲದುದಕ್ಕೆ ಉಟ್ಟಿರುವ ಚಂದ್ರಕಾಳಿಸೀರೆಯ ಅಂಚಿನಥಾಳವು ಬೇರೆ ಸೇರಿ, ದೀಪದ ಬೆಳಕಿನಲ್ಲಿ ಕಣ್ಣು ಗುಡ್ಡೆಗಳನ್ನು ತಿರುಗಿಸುವಂತೆ ತೋರುತ್ತ ಅವಿರಳವಾದ-ದೀರ್ಘವಾದ-ಕೇಶರಾಶಿಯು ಎರಡು ಭುಜದ ಮೇಲೆಯೂ ಹರಿದಾಡುತ್ತ ಎಂತಹ ಕಲ್ಲೆದೆಯನ್ನಾದರೂ ಕರಗಿಹೋಗುವಂತೆ ಮಾಡುತ್ತಿರುವುದು. ಇಷ್ಟು ಸಾಲದೆಂದು, ಈ ಬಗೆಯಲ್ಲಿ ಖಡ್ಗತ್ರಿಶೂಲ ಧಾರಿಣಿಯಾಗಿ, ಸಾಕ್ಷಾತ್ ಮೃತ್ಯುದೇವತೆಯೇ ತಾನೆಂದು ಘರ್ಜಿಸುತ್ತಿರುವಳೆಂದರೆ, ಪಾಪ! ಕಳ್ಳರ ಮಲ್ಲನ ಮನಸ್ಸ್ಥಿತಿ ಹೇಗಾಗಿರಬಹುದು! ಅವನು ಧೈರ್ಯಶಾಲಿಯೇ ಇರಬಹುದು. ಆದರೆ ಆತನ ಶೌರ್‍ಯ-ಧೈರ್ಯಗಳು, ಹೊಂಚಿನಿಂತು ನಿಸ್ಸಹಾಯರಾದ ದಾರಿಹೋಕರ ಮೇಲೆ ತನ್ನವರೊಡನೆ ಬೀಳುವಂತಹದು. ಇಂತಹ ಘೋರಮೂರ್ತಿಯ ಕೈಯ್ಯಿಗೆ ಆಕಸ್ಮಿಕವಾಗಿ ಸಿಕ್ಕಿಬಿದ್ದು ಕೆಳಗೆ ಕೆಡಹಲ್ಪಟ್ಟಾಗ ಆ ಹುಲುಮನುಜನಾದ ಮಲ್ಲನು ನಡುನಡುಗುತ್ತ ಮಲಗಿದ್ದಂತಯೇ ಕೈಗಳನ್ನು ಜೋಡಿಸಿ, ತೊದಲು ನಾಲಿಗೆಯಿಂದ, "ತಾಯಿ! ಕೊಲ್ಲಬೇಡ, ಶರಣುಹೊಕ್ಕಿರುವೆನು, ಕರುಣಿಸಿ ಕಾಪಾಡು. ಕೋಪದಿಂದ ಕೊಲ್ಲಬೇಡ." ಎಂದು ಮೊರೆಯಿಟ್ಟನು.

**ದೇವಿ** (ದರ್ಪದಿಂದ)— "ಹುಚ್ಚ! ಸದ್ದೆತ್ತುವೆ, ಜೋಕೆ! ನನಗೆ ನೀನೆಷ್ಟರವನು? ನೋಡಿಕೋ, ಕೊಲ್ಲಬೇಕೆಂದರೆ, ನೀನು ನನಗೆ ಒಂದು ಇರುವೆಗೂ ಕಡೆ. ಏಕೆನ್ನುವೆ? ನೀನು ಪಾಪಿ, ನಿನ್ನ ಬೆಟ್ಟದಂತಿರುವ ಪಾತಕದ ಫಲಾನುಭವವು ಇನ್ನೂ ಇಷ್ಟಕ್ಕೇ ತಪ್ಪಿ ಹೋಗುವುದಿಲ್ಲ. ಅದನ್ನು ನೀನು ಚೆನ್ನಾಗಿ ಅನುಭವಿಸಬೇಕು. ನಿನ್ನ ಮಾಂಸಖಂಡವನ್ನೇ ನೀನು ತಿಂದು ಜೀವಿಸುವಂತಹ ಕ್ರೂರ ದಂಡನೆ ನಿನಗಾಗಬೇಕು. ಅದಕ್ಕಾಗಿ ನಿನ್ನನ್ನು ಈಗ ಬಿಟ್ಟಿರುವೆನು. ಆದರೆ ಹೇಳು, ನಿನ್ನ ಕಡೆಯವರೆಲ್ಲಿರುವರು, ಹೇಳು ಸತ್ಯವಾಗಿ ಹೇಳು?'

**ಮಲ್ಲ:**— "ನಾನರಿಯೆ, ನನ್ನತಾಯಿ, ನಾನರಿಯೆ-ಕಾಪಾಡು ಕಾಪಾಡು."

**ದೇವಿ —** ಹುಚ್ಚ, ನನಗೆಲ್ಲವೂ ಗೊತ್ತಿರುವುದು. ಆದರೂ ನಿನ್ನ ಬಾಯಿಂದಲೇ ಹೊರಡಿಸಬೇಕೆಂದು ಕೇಳುತ್ತಿರುವೆನು, ಈಗಲಾದರೂ ದಿಟ ವನ್ನು ಹೇಳಿದೆಯಾದರೆ ನಿನ್ನ ಪಾಪರಾಶಿಯಲ್ಲಿ ಸ್ವಲ್ಪವಾದರೂ ಕ್ಷಮಿಸಲ್ಪ ಡುವುದು. ನೀನು ಹೇಳಿದರೂ, ಹೇಳದಿದ್ದರೂ ನೋಡಿಕೋ, ಹೀಗೆಯೇ ಹೋಗಿ ಅವರೆಲ್ಲರಿಗೂ ಗತಿಕಾಣಿಸಿ ಬಂದೇ ಬರುವೆನೆಂದು ತಿಳಿ.

**ಮಲ್ಲನು** ಮುಂದೆ ಕೇಳಲಾರದೆ, ಜ್ಞಾನವಿಲ್ಲದವನಂತಾಗಿ " ಅಯ್ಯಯ್ಯೋ ಹೋದೆ, ಅಮ್ಮಾ ದುರ್ಗೆ, ಪ್ರಸನ್ನಳಾಗು, ತಾಯಿ,ಅವರು ಇಲ್ಲಿಗೆ ಹತ್ತಿರದಲ್ಲಿ, ಇದೇ ಕಾಡಿನಲ್ಲಿಯೇ, ಬೆಟ್ಟದ ಕಿಬ್ಬಿಯೊಳಗೆ–ಅಯ್ಯೋ ಹೇಳಲಾರೆ " ಎಂದು ಹೇಳುತ್ತಿದ್ದಂತೆಯೇ ಮೂರ್ಛಿತನಾಗಿ ಕಣ್ಣು ಮುಚ್ಚಿ ಬಿಟ್ಟನು.

'ದುರ್ಗೆ ನೋಡಿದಳು; ಮಲ್ಲನು ಮುಂದೆ ಸೊಲ್ಲೆತ್ತದವನಾಗಿದ್ದನು. ಸುತ್ತಲೂ ನೋಡಿದಳು, ಏನನ್ನೋ ಆಲೋಚಿಸಿ ಕಡೆಗೆ ನಕ್ಕು ಹಿಂತಿರುಗಿ " ಭೈರವ, ಎಲ್ಲೈ ಕಾಲಭೈರವ ! ಇತ್ತಬಾ. " ಎಂದು ಕೂಗಿದಳು. ಕೂಡಲೇ ಕೌಪೀನಧಾರಿಯಾಗಿ, ಸರ್ವಾಂಗವೂ ಭಸ್ಮಾಚ್ಛಾದಿತವಾಗಿರಲು ಕರಿಯ ಶಿಖೆಯನ್ನು ಕಟ್ಟದೆ ಬಿಟ್ಟು, ಗದಾಧರನಾಗಿದ್ದ ಕರಾಳಮೂರ್ತಿ ಯೊಬ್ಬನು ಮುಂದೆ ಬಂದು ನಿಂತು, ಕೈಮುಗಿದು "ದುರ್ಗಾಭವಾನೀ ದೇವಿಗೆ ಜಯವಾಗಲಿ " ಎಂದು ನಿವೇದಿಸಿದನು. ಭವಾನಿ ಒಮ್ಮೆ ಅವನನ್ನು ನೋಡಿ ನಕ್ಕು ಮೃದು ಮಧುರ ಸ್ವರದಿಂದ ' ಭೈರವಮೂರ್ತಿ, ಇದೋ ಇವನನ್ನು ಹಿಂಗಟ್ಟು ಮುಂಗಟ್ಟು ಬಿಗಿದು ಕಟ್ಟಿಹಾಕಬೇಕು. ನಾನಿನ್ನು ಹೊರಡು ವೆನು. ಮುಂದಿನ ಸಿದ್ಧತೆಯಲ್ಲಿ ಎಚ್ಚರಿಕೆ ! ' ಎಂದು ಹೇಳಿ ಉತ್ತರ ನಿರೀಕ್ಷೆಯಿಲ್ಲದೆ, ಮಲ್ಲನನ್ನು ಭೈರವನಿಗೊಪ್ಪಿಸಿ, ಖಡ್ಗತ್ರಿಶೂಲಧಾರಿಣಿ ಯಾಗಿ, ಹೊರಟು ಕಾನನದಲ್ಲಿ ಎಲ್ಲಿಯೋ ಅದೃಶ್ಯವಾದಳು.

---

ಶ್ರೀ

# ತೃತೀಯ ಪರಿಚ್ಛೇದ.

"ವಿಪ್ರಲಂಭ ಪ್ರಯುಕ್ತಾನಾಂ ವಿಪ್ರಲಂಭೋऽಪಿ ಯುಜ್ಯತೇ"
(ವೇಣೀ ಸಂಹಾರ)

(ಭವಾನಿಯ ತಂತ್ರ.)

ದುರ್ಗಾಪ್ರಸಾದನಿಗೆ ಕಾರ್ಯವನ್ನು ನಿಯೋಜಿಸಿ ಹೊರಟ ಭವಾನಿ ತ್ರಿಶೂಲವನ್ನು ಹೆಗಲಮೇಲಿರಿಸಿಕೊಂಡು, ಬಲಗಯ್ಯಲ್ಲಿ ಖಡ್ಗವನ್ನು ಝಳಪಿಸುತ್ತ ದೇಗುಲದ ಹಿಂದಿನ ಕಾನನವನ್ನು ಹೊಕ್ಕು, ಅಲ್ಲಲ್ಲಿ ಸಂಚರಿಸಿ ನೋಡುತ್ತ ಅಡಿಗಡಿಗೆ ಅಲ್ಲಿ ಬರುತ್ತಿದ್ದ ಶಬ್ದವನ್ನು ಕಿವಿಕೊಟ್ಟು ಕೇಳುತ್ತ ಕಡೆಗೆ ಸದ್ದಿಲ್ಲದೆ ಮೆಲ್ಲಮೆಲ್ಲನೆ ನಡೆದುಬಂದು, ಹತ್ತಾರು ದಟ್ಟವಾದ ಆಲದ ಮರಗಳಿಂದ ಸುತ್ತುವರಿಯಲ್ಪಟ್ಟು, ದೊಡ್ಡ ದೊಡ್ಡ ಪೋಟರೆಗಳುಳ್ಳುದಾಗಿ, ಕಳ್ಳ ಕಾಕರಿಗೂ, ಕ್ರೂರ ಮೃಗಗಳಿಗೂ ಅತ್ಯನುಕೂಲವಾಗಿದ್ದ ಕಳ್ಳರ ಕೋಟೆಯ ಒಳಹೊಕ್ಕು ಮರದ ಮರೆಯಲ್ಲಿ ನಿಂತು, ಅದೇನನ್ನೋ ಗುರಿಯಿಟ್ಟು ನೋಡುತ್ತಲೂ ಆಲಿಸಿ ಕೇಳುತ್ತಲೂ ನಿಂತಿದ್ದಳು.

(ಒಳಗೆ ಮರದ ಪೊಗರಿನ ಮರೆಯಲ್ಲಿ ನಾಲ್ವರು ಕುಳಿತು, ಮಾತುಗಳನ್ನಾಡುತ್ತಿದ್ದರು. ಆ ನಾಲ್ವರಲ್ಲಿ ಗಡಿಯ ಕಾವಲಿನ ಮಾದ, ಬೋರ, ತಿಮ್ಮ ಈ ಮೂವರು ಇನ್ನೊಬ್ಬನು ಹೊಸಬನು ಕುಳಿತು ಇವರನ್ನು ವಿಚಾರಿಸುತ್ತಿದ್ದನು. ನೋಡುವುದರಲ್ಲಿ ಹೊಸಬನೇ ಗಡಿಯ ಹೆಗ್ಗಡೆಯೆಂದು ತೋರುತ್ತಿದ್ದಿತು.)

**ಹೆಗ್ಗಡೆ:—** ಆಗ ನೀವೇನು ಮಾಡುತ್ತಿದ್ದಿರೋ! ನಿಮ್ಮ ಜ್ಞಾನವೆಲ್ಲಿ ಹೋಗಿತ್ತು? ಏನಾದರೂ ಕುಡಿದು-ಗಿಡಿದು ಹೋಗಿದ್ದರೋ?

**ಬೋರ:—** ಅಪ್ಪಯ್ಯ! ನೀವೇನೋ ಆಕ್ಷೇಪಿಸುವಿರಿ. ಆಗ ನಮಗಾದ ಆಶ್ಚರ್ಯ, ಭಯ, ಸಂಶಯಗಳು ಎಷ್ಟು ಮಟ್ಟಿಗಿತ್ತೆಂದಾದರೂ ನಾವು ಹೇಳಲಾರೆವು.

**ಹೆಗ್ಗಡೆ:—** ನಿಲ್ಲಿಸಯ್ಯ-ತಲೆಹರಟೆ, ತಪ್ಪಿಸಿಕೊಳ್ಳುವುದಕ್ಕೆ ಏನಾದರೊಂದು ಸುಳ್ಳನೆವ! ಆಗಲಿ, ಒಂದು ಆಳುವಿಗೆ, ಅದೂ ಯಾವಳೋ

ಒಬ್ಬಳು ಹೆಂಗಸು ಅತ್ತುದಕ್ಕೆ ದಿಕ್ಕೆಟ್ಟು ಓಡಿಹೋಗಿ ಹಿಂದೆಮು ನೋಡದೆ ಹೀಗೆ ಸೋತು ಓಡಿಬಂದಿರಲ್ಲವೇ? ಸಾಕು, ನಿಮ್ಮ ಭ ತನವು ಸಾಕು. ನಿಮ್ಮನ್ನು ಆಪ್ತರೆಂದು ನಂಬಿದ್ದಕ್ಕೆ ಅಪಜಯ ಫಲವು.

**ತಿಮ್ಮ:**— ಅಯ್ಯ! ದೊಡ್ಡವರಾದ ನೀವೇ ಹೀಗೆ ಹೇಳಿ ನಮ್ಮ ಪಾಡೇನಾಗಬೇಕು? ನಾವು ಈಗಳಿಗೆವರೆಗೂ ನಿಮಗೆ ಕೇ ದನ್ನೇನೂ ಮಾಡಿರುವುದಿಲ್ಲ ಹೀಗಿದ್ದೂ ಸುಮ್ಮನೆ ನಮ್ಮನ್ನು ಹೀಯ ಸುತ್ತಿದ್ದೀರಿ. ಊಳಿಗಕ್ಕಿರುವ ನಾವಿನ್ನೇನು ಹೇಳುವ?

**ಹೆಗ್ಗಡೆ:**— ಸಾಕಯ್ಯ; ನಿನ್ನ ಪುರಾಣವನ್ನು ಅತ್ತ ಕಟ್ಟಿ ಮಾತನಾಡು. ನಿಮಗೆ ನಾವು ಗೊತ್ತುಮಾಡಿರುವ ಕೆಲಸವೇನು? ನಿ ಮಾಡಿರುವುದೇನು?

**ತಿಮ್ಮ:**— ನಾವೇನು ಮಾಡುವುದಪ್ಪ! ಕಾಲ ಹಾಗೆಬಂ ಅದಾವುದೋ ಕೆಟ್ಟ ಹಾಳಭೂತವು, ಮಾಟಮಾಡಿ, ಇಷ್ಟು ಅನರ್ಥವ ಮಾಡಿರಬೇಕು. ಇಲ್ಲದಿದ್ದರೆ ಮಲ್ಲಯ್ಯನನ್ನು ಹೊತ್ತುಹಾಕಲು ಯಾ ತಾನೇ ಆಗುತ್ತಿತ್ತು?

**ಹೆಗ್ಗಡೆ:**— ಸಾಕಯ್ಯ, ಹೆಚ್ಚು ಹರಟಬೇಡ. ಇದೆಲ್ಲವೂ ನಿ ಮರಿಯಣ್ಣನ ತಂತ್ರವೇ ಇರಬೇಕು. ಇಲ್ಲದಿದ್ದರೆ ಆ ಹಾರುವ ಆ ಮುಪ್ಪಿನ ಮುದಿಗೂಬೆಯೊಡನೆ ಅವನೆಲ್ಲಿಗೆ ಹೋಗಿರಬೇಕು?

**ತಿಮ್ಮ:**— ನಾನರಿಯೆನಪ್ಪಾ, ಮರಿಯಣ್ಣನಂಥಾ ಒಳ್ಳೆ ಹುಡು ನಮ್ಮ ಸುಳ್ಳು ತಟವಟವೇನೂ ಆತನಿಗೆ ಬೇಡ. ನಾವು ಹೇಳಿದ ಕೆ ವಲ್ಲದೆ ಮತ್ತೊಂದಕ್ಕೂ ಅವನು ಹೋಗಬೇಕೆಂದು ಬಯಸುವನೇ ಪಾಪ, ಅವನೇನಾದನೋ? ಹಾಳುಭೂತ—

**ಹೆಗ್ಗಡೆ:**— ಸಾಕು ಸಾಕು; ಅಂಜುಕುಳಿಗಳೇ! ಸೊಲ್ಲೆತ್ತು ಜೋಕೆ! ಒಳ್ಳೆಯ ಮಾತಿನಿಂದ ಆ ಮುದುಕನೊಡನೆ ಮರಿಯನ ನಮ್ಮ ಮಲ್ಲಯ್ಯನನ್ನೂ ಹುಡುಕಿ ಕರೆತಂದರೆ ಸರಿ, ಇಲ್ಲವಾದರೆ ನಿಮ್ಮ ಹೇಗೂ ಬಿಡುವುದಿಲ್ಲ; ತಿಳಿದಿರಿ. ಎಚ್ಚರಿಕೆ! ನಾವು ಸಾಮಾನ್ಯರಲ್ಲ, ನೋ ಕೊಳ್ಳಿರಿ! ನಮ್ಮಲ್ಲಿ ಸರಿಯಾಗಿ ನಡೆದುಕೊಂಡರೆ ನೀವು ಕುಬೇ

ಮಕ್ಕಳೇ ಆಗುವಿರಿ!

ಹೆಗ್ಗಡೆಯಿಂದ ಇನ್ನೂ ಅವುದೋ ಮಾತು ಹೊರಡುತ್ತಿದ್ದಿತು; ಆದರೆ ಅಷ್ಟರಲ್ಲಿ ಹಿಂದೆ ನಿಂತಿದ್ದ 'ದುರ್ಗಾಭವಾನಿ' ಯ ತ್ರಿಶೂಲವು, ಅಕಸ್ಮಾತ್ತಾಗಿ, ಹೆಗ್ಗಡೆಯ ಬೆನ್ನಿನಮೇಲೆಯೇ ಹಾರಿಬಂದು ಕುಳಿತು, ಹೆಗ್ಗಡೆ ಅವಾಕ್ಕಾಗಿ ಹಿಂತಿರುಗಿ ನೋಡುವಂತೆ ಮಾಡಿದುದಲ್ಲದೆ, 'ಧೂರ್ತ! ಮೈಮರೆಯದಿರು, ಇಲ್ಲಿಯೇ ಇರುವೆನು. ಭದ್ರ! ನಾನು ನಿನ್ನ ಮೃತ್ಯು!' ಎಂಬೀ ಕಠಿನವಾಕ್ಯಗಳಿಂದ ಜರ್ಝರಿತನಾಗುವಂತೆಯೂ ಮಾಡಿಬಿಟ್ಟಿತು.

(ಹೆಗ್ಗಡೆ ಉಸಿರೆತ್ತಲಾರದೆ ದಿಂಗು ಬಡಿದಂತಾಗಿ, ನೆಟ್ಟದೃಷ್ಟಿಯಿಂದ 'ಭವಾನಿ' ಯನ್ನೇ ನೋಡುತ್ತ ಅಂಗಾಂಗಲನೆಯಿಲ್ಲದೆ ಸ್ತಬ್ಧನಾಗಿ ಕುಳಿತುಬಿಟ್ಟನು. 'ಭವಾನಿ' ಯ ಭೀಕರಾವತಾರವನ್ನು ನೋಡಿ, ಉಳಿದ ಮೂವರೂ ಎದ್ದು—"ಶಿವಶಿವ! ನಾರಾಯಣಾ! ಕೆಟ್ಟೆವು ಕೆಟ್ಟೆವು" ಎಂದು ಕೂಗುತ್ತಾ ಓಡಿಹೋಗಲು ಪ್ರಯತ್ನ ಪಟ್ಟರು, ಆದರೆ ಅದಕ್ಕೂ ಮಾರ್ಗವಿಲ್ಲ.

ಭವಾನಿ ಘರ್ಜಿಸಿ, 'ಹೇಡಿಗಳೆ, ದಾರಿಯನ್ನು ಕಟ್ಟಿ, ಕೊಲೆ ಸುಲಿಗೆಯನ್ನು ಮಾಡುವಂತಿಲ್ಲ ಈ ವೇಳೆ—ತಿಳಿದಿರೋ? ನಾನು ಎಲ್ಲೆಲ್ಲಿಯೂ ಇದ್ದೇನೆ, ನಿಮ್ಮನ್ನು ಬೆನ್ನಟ್ಟಿ ಬಂದು ಕೊಲ್ಲಲು ನನಗೇನೂ ಕಷ್ಟವಿಲ್ಲ.' ಎಂದು ಕೂಗಿಹೇಳಿ ಅಟ್ಟಹಾಸದಿಂದ ನಗುತ್ತಿರುವಳು. ಎಲ್ಲಿಗೆ ಹೋಗಲಿಕ್ಕೂ ದಾರಿಯಿಲ್ಲ

ಹೆಗ್ಗಡೆ ಮೆಲ್ಲನೆ ಎಚ್ಚತ್ತು ನೋಡಿದನು, ತಲೆದೂಗುತ್ತಾ ಎದ್ದು ನಿಂತು ತ್ರಿಶೂಲವನ್ನೇ ಕಿತ್ತುಕೊಳ್ಳಲು ಪ್ರಯತ್ನಿಸಿದನು. ಭವಾನಿ ಅವನ ಸಾಹಸಕ್ಕೆ ಕೇಕೆ ಹೊಡೆದು ನಗುತ್ತ 'ಶೂರನಹುದೋ ಬಲು ಶೂರನೇ ನೀನಹುದು, ಬಲ್ಲೆ, ಕೂಗದೆ ಕದಲದೆ ನಿಲ್ಲು, ಯಾರು ಯಾರಿರುವಿರೋ? ಎಲ್ಲರೂ ಕೇಳಿರಿ, ಈಗ ಒಂದು ಮುಹೂರ್ತವೇ ನಿಮಗೆ ಅವಧಿಯನ್ನು ಕೊಟ್ಟಿರುವುದು. ಅಷ್ಟರೊಳಗಾಗಿ, ಈ ಕಾನನವನ್ನೇ ನೀವು ಬಿಟ್ಟು ಹೊರಟುಹೋಗಿರಬೇಕು, ಹಾಗಿಲ್ಲದೆ ಇಲ್ಲಿರುವರು ಯಾರೂ ಜೀವದಿಂದಿರಲಾರರು! ಎಲ್ಲರನ್ನೂ ಸುಟ್ಟು ಬೂದಿಮಾಡಿಬಿಡುವೆನು. ಎಚ್ಚರಿಕೆ! ಈಗಲೆ, ಈ ಕ್ಷಣವೇ ನಿಮ್ಮವರೆಲ್ಲರೊಡನೆ, ನಿಮ್ಮ ಸಮಸ್ತ ಸಾಮಗ್ರಿಗಳೊ

ಡನೆ, ಈ ಕಾನನವನ್ನು ಬಿಟ್ಟು ಹೊರಟು ಹೋಗಬೇಕು. ಇಲ್ಲದಿದ್ದರೆ ಸಾವಿ೨.' ಎಂದಳು.

ಹೆಗ್ಗಡೆ ಪಾಪ, ಈವರೆಗೆ ತನ್ನ ಕೈಕೆಳಗಿನವರನ್ನು ಬಯ್ಯುತ್ತಿದ್ದುದಕ್ಕೆ ಈಗ ತಕ್ಕ ಪ್ರಾಯಶ್ಚಿತ್ತವಾಯ್ತೆಂದು ತಿಳಿದು ಕ್ಲೇಶ ರೋಷ ಸಂತಾಪ ಇವುಗಳೆಲ್ಲವೂ ಏಕಕಾಲದಲ್ಲಿ ಆವಿರ್ಭವಿಸಲು ಕುದಿದು ಗದಗದಿಸುತ್ತ ತೊದಲು ನಾಲಿಗೆಯಿಂದ "ಹಾಯ್ ಹಾಯ್ ! ಏನೆಂದೆ ? ಕೊಲ್ಲು...." ಎಂದನು.

ದುರ್ಗೆ ಗಹಗಹಿಸಿ ನಕ್ಕ ತ್ರಿಶೂಲವನ್ನೆತ್ತಿ ತೋರಿಸಿ, 'ಹುಚ್ಚ, ನೋಡು, ನೀನು ತಡೆವುಮಾಡಿದರೆ, ನಿನ್ನವರೊಡನೆ, ಇಲ್ಲೆಲ್ಲಿಯಾದರೂ ಅಡಗಿದ್ದು ನನ್ನ ಮಾತನ್ನು ಕಡೆಗಣಿಸಿದರೆ, ಇದೋ ನೋಡು, ಈ ತ್ರಿಶೂಲದ ಮೊನೆಯಿಂದಲೇ ನಿಮ್ಮೆಲ್ಲರ ಬೆನ್ನೆಲಬುಗಳನ್ನೂ ಕಿತ್ತೆಸೆದು ಬಿಡುವೆನು. ಎಚ್ಚತ್ತಿರು! ಮಲೆತು ಸಾಯಬೇಡ. ಏನು ಹೇಳುವೆ ? ಬೇಗಹೇಳು, ನಿನ್ನವರೆಲ್ಲರೂ ಎಲ್ಲೆಲ್ಲಿರುವರು ? ಎಷ್ಟೆಷ್ಟು ದೂರದಲ್ಲಿರುವರು ? ಒಂದು ಮುಹೂರ್ತದೊಳಗಾಗಿ ಎಲ್ಲರೂ ಈ ಕಾಡನ್ನು ಬಿಟ್ಟು ಹೋಗಬಹುದೋ? ಇನ್ನೂ ಹೆಚ್ಚಿನ ಅವಧಿ ಬೇಕೋ ?

ಹೆಗ್ಗಡೆಗೆ ಈಗಲೀಗ ಭವಾನಿಯಲ್ಲಿ ಭಕ್ತಿ–ಗೌರವಗಳಂಕುರಿಸಿದುವು ಮೆಲ್ಲನೆ ತಲೆಯೆತ್ತಿ 'ತಾಯಿ! ದುರ್ಗೆ, ಕರುಣಿಸು, ನಮ್ಮವರು ಒಂದು ಕಡೆಯಲ್ಲಿಲ್ಲ, ಒಂದು ಕೆಲಸದಲ್ಲಿಲ್ಲ, ಒಬ್ಬೊಬ್ಬರ ಅಧೀನದಲ್ಲಿಲ್ಲ. ಎಲ್ಲರೂ ಇಲ್ಲಿಂದ ಹೊರಟು ಹೋಗಲು ಸಾಧ್ಯವಿಲ್ಲ. ಆಗ್ರಹಿಸಬೇಡ, ತಾಯಿ, ಎಂದು ಕೈಜೋಡಿಸಿ ಕೇಳಿಕೊಂಡನು.

**ದುರ್ಗೆ:—** (ತಲೆಯಲ್ಲಾಡಿಸುತ್ತ–) ' ಆದಾಗದು; ಆ ಮಾತು ಇಲ್ಲಿ ನಡೆಯದು. ಭದ್ರ ! ಈಗಲೇ ಈ ರಾತ್ರಿಯೇ, ಒಂದು ಪಿಳ್ಳೆ ಯಾದರೂ ಇಲ್ಲಿ ಉಳಿದಿರದೆ, ಎಲ್ಲರೂ ಹೊರಟು ಹೋಗಬೇಕು; ಇಲ್ಲವಾದರೆ, ಭೂತಗಣಗಳಿಗೆ ಬಲಿಯಾಗುವಿ೨ ! ಹೊರಡು, ಬೇಗ ಹೊರಡು, ನಿಲ್ಲಬೇಡ ನಡೆ ! ಎಂದು ಹೇಳು ಹೇಳುತ್ತ ಹಾಗೆಯೇ ಎಲ್ಲಿಯೋ ಕಣ್ಮರೆಯಾದಳು.

ಹೆಗ್ಗಡೆ ನೋಡಿದನು. 'ಭವಾನಿ' ಎಲ್ಲಿಯೂ ಕಾಣಲಿಲ್ಲ. ಚಕಿತನಾಗಿ ಆಲೋಚಿಸಿದನು; ಶಂಕಾತಂಕಗಳಿಂದ ಮನಸ್ಸು ಕಲಕಿಹೋದಂತೆ

ತು. ಮೇಲೆನೋಡಿ, ವಿಕಾರಸ್ವರದಿಂದ 'ಅಮ್ಮಾ, ದುರ್ಗೆ, ನೀನು
ಾಡಿದಂತಾಗಲಿ' ಎಂದು ಹೇಳಿ, ಒಮ್ಮೆ ನಾಲ್ಕು ಕಡೆಯನ್ನೂ ನೋಡಿ,
ತ್ತೆ ಒಂದೆರಡು ನಿಮೇಷಗಳವರೆಗೆ ನೆಲವನ್ನು ನೋಡುತ್ತಿದ್ದು–"ಹುಂ,
ಲಿ, ನೋಡುವೆನು. ಇದರ ಸತ್ಯವನ್ನು ವಿಚಾರಮಾಡಿ ತಿಳಿವೆನು."
ದು ತನ್ನಲ್ಲಿ ತಾನೇ ಹೇಳಿಕೊಳ್ಳುತ್ತ ಆಲದಮರದ ಉತ್ತರದಿಕ್ಕನ್ನು
ರಿತು, ಓಡಿಬರುತ್ತ ದಾರಿಯಲ್ಲಿ ಅದಾವುದನ್ನೋ ಎಡವಿದಂತಾಗಲು,
ಂದು ಬಾಗಿನೋಡಿದನು. ಎಡವಿದುದು ಒಂದು ಮನುಷ್ಯಾಕೃತಿಯಾ
ದ್ದಂತೆ ಕಾಣಲು ಶಂಕಿತನಾಗಿ ಅದನ್ನು ಕೈಯಿಂದ ಮುಟ್ಟಿನೋಡಿದನು.
ಾಣವಾಯು ಹೊರಹೊರಡುವ ಸ್ಥಿತಿಯಲ್ಲಿದ್ದಂತೆ ತಿಳಿದಿತು. ಚಕಿತ
ಗಿ ಬಿದ್ದಿದ್ದವನ ಬಳಿಯಲ್ಲಿ ಕುಳಿತು, ಮುಖವನ್ನು ಚೆನ್ನಾಗಿ ದೃಷ್ಟಿಸಿ
ೋಡಿದನು. ಅವನು ಮತ್ತಾರೂ ಆಗಿರಲಿಲ್ಲ, ಗಡಿಯ ಮರಿಯಣ್ಣನೇ
ದ್ದನು. ಹೆಗ್ಗಡೆಯ ಸ್ಥಿತಿ ಆಗ ಏನಾಯಿತೆಂದು ಹೇಳಲಳವಲ್ಲ, ಹೇಗೂ
ರಿಯನನ್ನು ಕುರಿತು–'ಇದೇನಿದು ? ಮರಿಯಾ, ಈ ಅವಸ್ಥೆಯೇನು ?
ಾರಿಂದ ? ಏನಾಗಿದೆ ? ಇಲ್ಲೇಕೆ ಬಿದ್ದಿರುವೆ ? ಹೇಳು, ಏನಾಯಿತು ?'
ದು ಕೇಳಿದನು.

**ಮರಿಯ:**— ಅಯ್ಯೋ, ಏನೆನ್ನಲಿ ! ಪ್ರಾಣಾಪತ್ತು, ಮರ್ಮವೇಧೆ! ಪರೀತ ಸಂಕಟ ! ನನಗೆ ಈವೇಳೆಯಲ್ಲಿ, ಅಯ್ಯೋ, ತಾಯ್ತಂದೆಗಳ ುಖ....... ಇಲ್ಲ ಅಯ್ಯೋ ! ನೋಡುವಂತಿಲ್ಲ. ಹೋಗುತ್ತೇನೆ.... ರ್ಗೆ ! ಭವಾನಿ ! ಎಲ್ಲಿರುವೆಯಮ್ಮಾ ?

ಹೆಗ್ಗಡೆ ಅವನ ಕೈಹಿಡಿದುಕೊಂಡು "ಮರಿಯಣ್ಣಾ ! ಯಾರೇನು ಮಾಡಿ ?ನಿನ್ನ ಜತೆಯವರೆಲ್ಲಿ ? ಏನಾಗಿದೆ ಹೇಳು ?" ಎಂದನು.

**ಮರಿಯ:**— ಅಪ್ಪಯ್ಯ ! ಹೋದರು, ಎಲ್ಲರೂ ಕೈಸೆರೆಯಾದರು. ತಗಣಕ್ಕೆ ನಾನು ಬಲಿ ! ಮುದಿ ಹಾರುವಯ್ಯ 'ಪರಾರಿ!' ಅವನಿಂದಲೇ ಷ್ಟು ಆಪತ್ತು ! ಅಯ್ಯೋ, ನನ್ನ ಬೆನ್ನೆಲಬು ಹಾರುತ್ತಿದೆ........

**ಹೆಗ್ಗಡೆ:**— ಹಾಗಾದರೆ ಈಗ ಗತಿ ? ಮಾಡುವುದೇನು ? ಮರಿಯ, ನ್ನು ಎಲ್ಲಿಗೆ ಹೊತ್ತುಕೊಂಡು ಹೋಗಲಿ ? ಮುಂದಿನ ದಾರಿಯೇನು ?

**ಮರಿಯ:**—"ಬೇಡ, ನನ್ನ ಹಂಬಲಿನ್ನು ಬೇಡ, ನೀವು ಎಲ್ಲರೊ

ಡನೆ ಹೊರಟು ಹೋಗಿ. ನನ್ನ ಪಾಡು ಹೇಗೆಯೋ ಹೋಗಲಿ."

ಮರಿಯನ ಮಾತು ಪೂರಯಿಸುವುದಕ್ಕೆ ಮೊದಲೇ, ಹಿಂದಿನಿಂದ ಕರ್ಕಶಸ್ವರದಲ್ಲಿ—'ಅಹುದು. ಅವನನ್ನು ಬಿಟ್ಟು ಹೋದರೆ ಮೇಲು, ಇಲ್ಲದಿದ್ದರೆ ನೀನೂ ಸಾಯುವೆ. ಹೊರಟು ಹೋಗು. ನಾನು ಎಲ್ಲೆಲ್ಲಿಯೂ ಇರುವೆನೆಂದು ಹೇಳಿರಲಿಲ್ಲವೆ? ತಿಳಿದೆಚ್ಚತ್ತಿರು." ಎಂಬ ತೀಕ್ಷ್ಣ ವಾಕ್ಯವು ಬಂದು, ಹೆಗ್ಗಡೆಯ ಹೃದಯದಲ್ಲಿ ಬಲವಾಗಿ ನಾಟಿ ಹೋಯಿತು.

ಹೆಗ್ಗಡೆಯಿಂದ ಇನ್ನು ಅಲ್ಲಿ ನಿಂತಿರಲಾಗಲಿಲ್ಲ, ಉಸಿರೆತ್ತದೆ, ಹಿಂದೆ ಮುಂದೆ ನೋಡದೆ, ಒಂದೇ ಓಟದಿಂದ ಓಡಿಹೋದನು.

---

# ಚತುರ್ಥ ಪರಿಚ್ಛೇದ.

ಸರ್ವಂ ಚೋರಗತಂ ತ್ವಯಾ ಗೃಹೀತಮ್

(ವಿಕ್ರಮೋರ್ವಶೀಯ)

(ಕೈಸೆರೆ.)

ರಾತ್ರಿ ಹನ್ನೆರಡು ಘಂಟೆ, ಪಾಳುದೇಗುಲದ ಬಾಗಿಲಬಳಿ, ಇದೇ ಬಂದು ಕುಳಿತ ಕಳ್ಳರ ಹೆಗ್ಗಡೆ ಆಯಾಸದಿಂದ—"ಉಸ್ಸಪ್ಪಾ! ಹಾಳು ದೈವ, ಉರಿಮಾರಿ! ಎಂತಹ ಹೆಮ್ಮಾರಿ ಬಂದಿರುವಳಪ್ಪಾ? ಈ ಕಾಡಿಗೆ ಬಂತು ಕೆಟ್ಟಶನಿಕಾಟ! ಸಾಕು, ಈ ಭವಣೆ ಇಷ್ಟಕ್ಕೇ ಸಾಕು. ಹಣವನ್ನು ಯಾರಿಗಾಗಿ ಗಳಿಸಬೇಕು? ಜೀವವೊಂದು ಉಳಿದಿದ್ದರಲ್ಲವೇ ಉಳಿದ ಸಂಪತ್ತಿನ ಮಾತು? ಅದೇ ಹೋಗುತ್ತಿರುವಾಗ ಇನ್ನೇತರ ಹಂಬಲು? ಮುಂದೇನು ಮಾಡಲಿ? ಹೇಗೂ ನಮಗೆ ಉಳಿಗಾಲವಿಲ್ಲ. ಇದಕ್ಕೇನು ಉಪಾಯ? ಈ ರಾತ್ರಿಯಲ್ಲಿ, ಈ ಒಂದೇ ಒಂದು ಮುಹೂರ್ತಮಾತ್ರದಲ್ಲಿ, ನಾನು ಆವ ಕೆಲಸಗಳನ್ನು ಮಾಡಲಿ? ಇಲ್ಲಿರುವುವೆಲ್ಲವನ್ನೂ ಇನ್ನೆಲ್ಲಿಗೆ ಕೊಂಡುಹೋಗುವುದು? ಹೇಗೆ ಸಾಗಿಸುವುದು? ಆರಾರು ಆವಾವ ಕೆಲಸಗಳಿಗೆ ಹೋಗಿ ಎಲ್ಲೆಲ್ಲಿ ಅಡಗಿರುವರೋ! ಎಲ್ಲರನ್ನೂ ಕಂಡುಹಿಡಿದು ಕರೆ

ದೊಯ್ಯಲು ಆಳವೇ ? ಹೇಗಾದರೂ ಹಾಳಾಗಲೆಂದು ನನ್ನ ಪಾಡನ್ನು ನಾನು ನೋಡಿಕೊಳ್ಳಲೇ?" ಎಂದೀ ಬಗೆಯಾಗಿ ತನ್ನಲ್ಲಿತಾನೇ ಹೇಳಿಕೊಳ್ಳುತ್ತಿದ್ದು, ಆ ಬಳಿಕ– 'ಇದೆಂತಹ ಕೆಟ್ಟ ಆಲೋಚನೆ ? ಹಾಗೆ ಎಲ್ಲರನ್ನೂ ಬಿಟ್ಟು, ನಾನೊಬ್ಬನು ತಲೆತಪ್ಪಿಸಿಕೊಂಡರೆ ಆಗುವುದೇನು ? ಇಂದು ಆ ಊರಿವಾರಿಯಿಂದ ತಪ್ಪಿಸಿಕೊಂಡು ಹೋದೆನಾದರೂ, ಎಂದಾದರೂ ನಮ್ಮವರ ಕೈಗೆ ಸಿಕ್ಕಿ ಪ್ರಾಣಬಿಡುವುದು ಬೇರೆ ತಪ್ಪುವಂತಿಲ್ಲ. ಇದ್ದಷ್ಟುದಿನ ಲಾಭವೆಂದರೂ ಈ ಅಪಾರವಾದ ಸಂಪತ್ತನ್ನು ಇಲ್ಲಿಯೇ ಬಿಟ್ಟು ಹೋಗಬೇಕಾಗುವುದು. ಇರಲಿ, ನಮ್ಮವರನ್ನು ಕರೆತರಲು ಹೋಗಿರುವ ಆಳುಗಳು ಬರುವವರೆಗೂ ಸ್ವಲ್ಪ ತಡೆದು ನೋಡುವೆನು. ಆದುದಾಗಲಿ' ಎಂದು ಹೇಳಿಕೊಳ್ಳುತ್ತ ಒಂದೆರಡು ನಿಮೇಷದವರೆಗೆ ಸುಮ್ಮನೆ ನಿಂತಿದ್ದು ಮತ್ತೆ ತಡೆಯಲಾರದೆ, "ಇಲ್ಲ–ಇಲ್ಲ, ಹೀಗಿದ್ದರೆ ಯಾವ ಕೆಲಸವೂ ಮುಗಿವುದಿಲ್ಲ. ಮತ್ತೊಂದು ಬಾರಿ ನಾನೇ ಹೋಗಿ ನೋಡಿಕೊಂಡು ಬರುವೆನು" ಎಂದು ಹೇಳುತ್ತ ನಾಲ್ಕು ಕಡೆಯನ್ನೂ ನೋಡಿ, ಗಟ್ಟಿಯಾಗಿ– 'ಬಂದಿರಾ–ಭಂಟರೇ! ಬಂದಿರಾ ? ಬೇಗ ಬನ್ನಿರಿ' ಎಂದು ಕೂಗುತ್ತ ಪ್ರಜ್ಞೆಯಿಲ್ಲದವನಂತೆ ಮೇಲೆ ನೋಡುತ್ತಲೇ ಮುಂದಕ್ಕೆ ನಡೆದನು. ನಾಲ್ಕಾರುವಾರು ದೂರಹೋಗುವುದರಲ್ಲಿ, ದೂರದಲ್ಲಿ–'ಬಂದೆವು, ಇದೋ ಬಂದೆವು' ಎಂಬ ಸ್ವರವು ಕೇಳಬಂದಿತು. ಹೆಗ್ಗಡೆ ತನ್ನವರೇ ಬಂದರೆಂದು ತಿಳಿದನು. ಅವನ ಮುಖದಲ್ಲಿ ಉತ್ಸಾಹದ ಕಳೆಯೇರಿತು. ಉತ್ತರವು ಹೊರಟುಬಂದ ಕಡೆಯನ್ನೇ ಗುರಿಕಟ್ಟಿ ಹವ್ಮೈಲಿಸಿನೋಡುತ್ತ ಅಡಿಗಡಿಗೆ– 'ಬಂದಿರಾ ? ಎಷ್ಟುದೂರದಲ್ಲಿರುವಿರಿ ? ಬೇಗ ಬನ್ನಿರಿ' ಎಂದು ಹೇಳುತ್ತ ನಿಂತಿದ್ದನು. ನಾಲ್ಕಾರು ನಿಮಿಷಗಳೊಳಗಾಗಿ, ದೊಡ್ಡ ದೊಡ್ಡ ಪಂಜುಗಳನ್ನು ಹಿಡಿದುಕೊಂಡು, ಬಲವಾದ ಹಾರೆ, ಕೊಡಲಿ, ದೊಣ್ಣೆ, ಕಲ್ಲುಗಳನ್ನು ಹಿಡಿದಿದ್ದ ಸುಮಾರು ಎಪ್ಪತ್ತು– ಎಂಭತ್ತು ಮಂದಿ ಕಳ್ಳರು ನೆಲವನ್ನು ದಟ್ಟಿಸುತ್ತ ಬರುತ್ತಿದ್ದುದನ್ನು ಕಂಡನು. ಮತ್ತಷ್ಟು ಹೆಚ್ಚಿದ ಧೈರ್ಯದಿಂದ ಕೈ ಮೇಲಕ್ಕೆತ್ತಿ 'ಓಡಿ ಬನ್ನಿರಿ. ಹೊತ್ತು ಮೀರುತ್ತಿದೆ, ಬೇಗ ಬನ್ನಿರಿ. ತಳುವಿದರೆ ಉಳಿವಂತಿಲ್ಲ.' ಎಂದು ಕೂಗಿದನು.

ಹೆಗ್ಗಡೆಯ ವಿಕಾರದ ಕೂಗನ್ನು ಕೇಳಿ ಪಂಜುಕಳ್ಳರು ಒಂದೇ ಓಟ

ದಿಂದ ಓಡಿಬಂದು ಮುಂದೆ ನಿಂತು, ಕೋಲಾಹಲವನ್ನೆಬ್ಬಿಸಿ, ಕೈ ಕಟ್ಟಿ– 'ಮುಂದೇನು ಮಾಡಬೇಕು ?' ಎಂದು ಕೇಳಿದರು.

**ಹೆಗ್ಗಡೆ:**—ನಿಟ್ಟುಸಿರುಬಿಟ್ಟು–' ಅಪ್ತರೇ, ನಿಮಗೆ ಸುದ್ದಿಯನ್ನು ತಂದ ಅವರಿಬ್ಬರೆಲ್ಲಿ? ಯಾವಾಗ ಬರುತ್ತಾರೆ?' ಎಂದನು.

**ಕಳ್ಳರು:**— ಬುದ್ಧಿ, ನಮ್ಮನ್ನು ಇತ್ತ ಕಳಿಸಿ, ಅವರಿಬ್ಬರೂ ಉಳಿದ ಹೆಂಗಳು ಮಕ್ಕಳನ್ನೂ ಹೊರಡಿಸಿಕೊಂಡು ಬೇಗ ಬರುತ್ತೇವೆ–ನಡೆಯಿರೆಂದು ಹೇಳಿ, ಗುಡ್ಡದ ಗುಡಿಸಿಲ ಬಳಿಗೆ ಹೊರಟುಹೋದರು. ನಾವಿತ್ತ ಬಂದೆವು '

**ಹೆಗ್ಗಡೆ:**— ಇನ್ನೇನನ್ನೂ ಹೇಳಲಿಲ್ಲವೆ? ಮತ್ತಾರನ್ನಾದರೂ ಕರೆ ತರುವೆವೆಂದು ಹೇಳಿದರೋ ಇಲ್ಲವೋ?

**ಕಳ್ಳರು:**—ಗುಡ್ಡದಲ್ಲಿ ಕೆಲಸವಿದೆಯೆಂದೂ, ಅದಾದಬಳಿಕ ಗುಡಿಸಲುಗಳಲ್ಲಿರುವ ಹೆಂಗಸರು ಮಕ್ಕಳನ್ನೂ ಹೊರಡಿಸಿಕೊಂಡು ಬರುವೆವೆಂತಲೂ ಹೇಳಿದರು. ಅಷ್ಟೆ!

**ಹೆಗ್ಗಡೆ:**— ಕೊಂಚ ಹೊತ್ತು ಚಿಂತಿಸುತ್ತಿದ್ದು ಬಳಿಕ ತಲೆಯೆತ್ತಿ ' ಪ್ರಿಯರೇ! ನಾವು ಇಲ್ಲಿಯವರೆಗೂ ಈ ಕಾಡಿನಲ್ಲಿ ಸುಖವಾಗಿದ್ದೆವು. ಇಂದು ಇಲ್ಲಿಯ ಋಣಾನುಬಂಧವು ನಮಗೆ ತೀರಿದಂತೆ ತೋರುತ್ತದೆ. ಈ ರಾತ್ರಿ ಎರಡು ಜಾವದೊಳಗಾಗಿ ಈ ಕಾಡನ್ನು ಬಿಟ್ಟು ಹೊರಟು ಹೋಗುವವರು ಉಳಿವರೆಂದೂ, ಉಳಿದವರು ಉಳಿಯಲಾರರೆಂದೂ ಉಗ್ರ ರೂಪಿಣಿಯಾದ ದುರ್ಗೆ ಹೇಳಿರುವಳು. ಬಂದವರು ಬರಲಿ, ಬಾರದವರು ಹಾಳಾಗಲಿ. ನಮ್ಮ ಪಾಡನ್ನು ನಾವು ನೋಡಿಕೊಳ್ಳುವುದು ಮುಖ್ಯ. ನಮಗೆ ಗೊತ್ತುಗಾರರಾಗಿರುವ ಅವರು ಇಲ್ಲಿಗೆ ಬರುವರೆಂದು ಕಾದಿರ ಬಾರದು.

**ಕಳ್ಳರು:**— ಹೌದೌದು, ಒಬ್ಬರನ್ನೊಬ್ಬರು ಕಾದುಕೊಂಡಿರುವ ಕಾಲವು ಇದಲ್ಲ. ಬರುವರು ಹಿಂದಿನಿಂದ ಬರಲಿ. ನಾವು ಈಗಲೇ ಹೊರಟುಹೋಗುವ.

**ಹೆಗ್ಗಡೆ:**— ಹಾಗೆಯೇ ಮಾಡಬೇಕು. ಇಲ್ಲದಿದ್ದರೆ ಯತ್ನವೇ ಇಲ್ಲ. ನೀವೆಲ್ಲರೂ ಒಂದುಗಳಿಗೆಯವರೆಗೆ ಇಲ್ಲಿಯೇ–ಹೊರಗೆ ನಿಂತಿರಿ.

ಮುಂದಾಳುಗಳಾಗಿರುವ ನಾಲ್ಕು ಜನಮಟ್ಟಿಗೆ ಕೈಹಾರೆ-ಗುದ್ದಲಿಗಳೊಡನೆ ಬೆಳಕಿಗಾಗಿ ಪಂಜನ್ನು ಹಿಡಿದುಕೊಂಡು ನನ್ನ ಹಿಂದೆ ಬರಲಿ." ಎಂದು ಹೇಳಿ, ದೇಗುಲದೊಳಗೆ ಪ್ರವೇಶಿಸಿದನು.

ಹೆಗ್ಗಡೆಯ ಅಪ್ಪಣೆಯಂತೆಯೇ, ಕಳ್ಳರ ಗುಂಪಿನವರು ಕೈಗೊಳ್ಳಿಗಳನ್ನು ಹಿಡಿದುಕೊಂಡಂತೆಯೇ ದೇಗುಲದ ಮುಂದೆ ಗುಂಪಾಗಿ ನಿಂತು, ಹೆಗ್ಗಡೆಯ ಮುಂದಿನ ಅಪ್ಪಣೆಯನ್ನು ಪ್ರತೀಕ್ಷಿಸುತ್ತಿದ್ದರು. ಮುಂದಾಳುಗಳಾಗಿದ್ದ ನಾಲ್ವರಲ್ಲಿ ಇಬ್ಬರು ಎಡಗೈಯಲ್ಲಿ ಒಂದೊಂದು ದೊಂದಿಯನ್ನೂ ಬಲಗೈಯ್ಯಲ್ಲಿ ಹಾರೆಯನ್ನೂ ಹಿಡಿದುಕೊಂಡೂ ಮತ್ತಿಬ್ಬರು ಗುದ್ದಲಿ-ಹಾರೆಗಳೊಡನೆಯೂ ಹೆಗ್ಗಡೆಯ ಹಿಂದೆಯೇ ದೇಗುಲದೊಳಕ್ಕೆ ಬಂದರು.

ಹಿಂದೆಯೇ ಬಂದ ನಾಲ್ವರು ಅನುಚರರೊಡನೆ ಹೆಗ್ಗಡೆ ದೇಗುಲದ ಒಳಹೊಕ್ಕು, ದೊಂದಿಯ ಬೆಳಕಿಂದ ದೇಗುಲದ ಒಳಗಡೆಯ ಕತ್ತಲೆ ಕೋಣೆಗೆ ಬಂದು, ಕಿರಿದಾಗಿದ್ದ ಅದರ ಬಾಗಿಲನ್ನು ಹಿಂದಕ್ಕೆ ತೆರೆದು ದೊಂದಿಯನ್ನು ಹಿಡಿದಿದ್ದವರಲ್ಲಿ ಒಬ್ಬನನ್ನು ಹೊರಗೆ ನಿಲ್ಲಿಸಿ, ಒಬ್ಬನನ್ನು ಕೋಣೆಯೊಳಕ್ಕೆ ನುಗ್ಗಿಸಿ, ಆ ಬಳಿಕ ತಾನೂ ಕೋಣೆಯ ಒಳಕ್ಕೆ ಹೊಕ್ಕು, ಉಳಿದ ಇಬ್ಬರನ್ನೂ ಬರಮಾಡಿಕೊಂಡನು.

ಹೆಗ್ಗಡೆ ಕೋಣೆಯ ನಾಲ್ಕುಕಡೆಯನ್ನೂ ಒಂದಾವೃತ್ತಿ ಚೆನ್ನಾಗಿ ನೋಡಿ, ಸಂಭ್ರಾಂತನಾಗಿ ಬಳಿಕ ನೆಲವನ್ನು ಗುರಿಯಿಟ್ಟು ನೋಡಿ ಸ್ತಬ್ಧನಾಗಿ ಕುಳಿತನು.

ಹೆಗ್ಗಡೆಯ ಈ ಬಗೆಯ ಚೇಷ್ಟಿತವನ್ನು ನೋಡಿ ನಿಂತಿದ್ದ ಮೂವರೂ ಬೆರಗಾಗಿ ಏನನ್ನೂ ತಿಳಿಯಲಾರದೆ-'ಅದೇನು ಸಂಗತಿ? ಏನಾಗಿದೆ?' ಎಂದು ಕೇಳಿದರು.

**ಹೆಗ್ಗಡೆ:—** (ನಿಟ್ಟುಸಿರುಬಿಟ್ಟು) 'ಅಯ್ಯೋ! ಮೋಸ, ನಂಬಿಸಿ ಮೋಸ, ಅಯ್ಯೋ, ಗುರುತು ಕಂಡ ಕಳ್ಳರು ಯಾರೋ ಕೈಕೊಟ್ಟು ಬಿಟ್ಟರು!' ಎಂದನು.

**ಅನುಚರರು:—** (ಭಯ ಕುತೂಹಲ ವಿನಯಗಳಿಂದ) 'ಏನು ಏನು ಸಮಾಚಾರ? ಏನಾಗಿದೆ?' ಎಂದರು.

**ಹೆಗ್ಗಡೆ:**—( ಖತಿಯಿಂದ) ಆಗಲಿ, ಮೊದಲು ಈ ನೆಲವನ್ನು ಅಗೆದು ಽೀಡಿ, ಏನಾದರೂ ಇಲ್ಲಿ ಪೆಟ್ಟಿಗೆ ಪಾತ್ರೆ—ಪದಾರ್ಥಗಳಿವೆಯೋ—ಹೇಳಿರಿ.' ಂದನು.

ಅನುಚರರು ಆತುರದಿಂದ ಅಗೆಯತೊಡಗಿದರು. ಅವರು ಅಗೆಯುತ್ತಿದ್ದಾ ಲೇ, ಹೊರಗಡೆಯಲ್ಲಿ "ಹೊರಗೆಬನ್ನಿ, ಯಾರೋ ಕೂಗುತ್ತಿರುವರು. ಽೀ—ಹೋ! ಮಲ್ಲಯ್ಯನ ದನಿ. ಅಳುತ್ತಿರುವಂತೆ ಕೇಳುವುದು." ಎಂದು ರೋ ಕೂಗಿದಂತಾಯಿತು. ಹೆಗ್ಗಡೆಯ ಕಿವಿ ನೆಟ್ಟಗಾಗಿ, ಥಟ್ಟನೆ ಅಲ್ಲಿಂದ ಽರಗೆಬಂದುನಿಂತನು. ಅವನ ಹಿಂದೆಯೇ ಉಳಿದವರೂ ಬಂದರು; ಲ್ಲರೂ ಕುತೂಹಲದಿಂದ ಶಬ್ದವನ್ನು ಕೇಳಿದರು. ಶಬ್ದವು ಆ ಕೋಣೆಗೆ ದಿರಾಗಿದ್ದ ಉಗ್ರಾಣದ ಮನೆಯಿಂದಲೇ ಬರುತ್ತಿರುವುದೆಂದು ಬೋಧೆಯಾ ಽತು. ಅವರು ಒಂದೇ ನೆಗೆತಕ್ಕೆ ಹಾರಿಬಂದು, ಉಗ್ರಾಣದ ಬಾಗಿಲನ್ನು ಭಸದಿಂದ ತೆಗೆದು ಒಳಗೆ ಹೊಕ್ಕು ನೋಡಿದರು.

ಮಲ್ಲಯ್ಯನು ನೆಲದಮೇಲೆ ಬಿದ್ದಿದ್ದನು. ಅವನ ಕೈಕಾಲುಗಳು ಬಟ್ಟೆ ಖಂದ ಬಿಗಿಯಾಗಿ ಕಟ್ಟಲ್ಪಟ್ಟಿದ್ದಿತು ಮಲಗಿದ್ದವನ ಎದೆಯಮೇಲೆ ಡಗಾಲೂರಿ ನಿಂತಿದ್ದ ಪುರುಷವ್ಯಕ್ತಿ, ದರ್ಪದಿಂದ– 'ಹೂಂ, ಕೂಗು ಲವಾಗಿ ಕೂಗಿ ಕರೆ. ನಿಮ್ಮವರೆಲ್ಲರೂ ಬಂದಿರುವರು; ಗಟ್ಟಿಯಾಗಿ ಽಗಿ ಎಲ್ಲರನ್ನೂ ಬರಮಾಡಿಕೊಂಡು ಜೀವವನ್ನುಳಿಹಿಕೊ' ಎಂದು ೀಳುತ್ತಿದ್ದನು.

**ಹೆಗ್ಗಡೆ:**— (ವ್ಯಕ್ತಿ ಯಾರಿರಬಹುದೆಂದು ನೋಡಿದನು. ಗಡಿ ಖಲ್ಲಿ ಕೈಸೆರೆಯಾಗಿ ಸಿಕ್ಕಿಬಿದ್ದ ಮುದುಕನಂತೆ ತೋರಿತು. ಹೆಗ್ಗಡೆ ಆಗ್ರಹ ಂದ ಮೈಮರೆತು, ಮುಷ್ಟಿಯಿಂದಲೇ ಮುದುಕನ ಮೂಳೆಯನ್ನು ಜಜ್ಜು ನೆಂದು ಹೆಮ್ಮೆಗೊಂಡು, ಹಾರಿಬಂದು ನಿಂತಿದ್ದವನ ಮುಂದೆ ನಿಂತು, ವನ ಕೊರಳನ್ನು ಹಿಡಿದು ರೋಷದಿಂದ 'ಸಿಕ್ಕಿದೆಯಾ, ಮುದಿಗೂಬೆ! ಲೆತಪ್ಪಿಸಿಕೊಂಡಿದ್ದವನು ಇಲ್ಲಿ ಸಿಕ್ಕಿದೆಯಾ? ದೇವರನ್ನು ನೆನೆ! ಹೆಂಡತಿ ಮಕ್ಕಳನ್ನು ನೆನೆದು ಒಂದು ಬಾರಿ ಕಣ್ಣೀರನ್ನು ಸುರಿಸಿಬಿಡು!! ಆಯಿತು- ಇನ್ನು ನಿನ್ನ ಆಟವು ಪೂರೈಸಿತು.' ಎಂದು ಹೇಳುತ್ತ ಅವನ ಕತ್ತನ್ನು ಂಸಿಕಿದನು.

**ಮುದುಕನು:—** ಅದುವರೆಗೂ ಸುಮ್ಮನೆ ನಿಂತಿದ್ದು, ಆಬಳಿಕ ನಗುತ್ತನಗುತ್ತ ತನ್ನೆರಡು ಬಾಹುಗಳಿಂದಲೂ ಹೆಗ್ಗಡೆಯನ್ನು ಬಿಗಿಯಾಗಿ ತಬ್ಬಿಹಿಡಿದು 'ಓಹೋ—ಬಂದೆಯಾ? ನಿನಗೆ ಸುಖಾಗಮನವೆ? ಬಲು ಹೊತ್ತಿನಿಂದ ನಿನ್ನನ್ನೇ ನಿರೀಕ್ಷಿಸುತ್ತಿದ್ದೆವು. ಎಲ್ಲಿ, ನಿಮ್ಮವರೆಲ್ಲರೂ ಬಂದರೋ—ಹೇಗೆ? ಓಹೋ! ಇದೇನು, ಕತ್ತನ್ನು ಮಿಸುಗುವೆಯೋ? ಶೂರನಹುದಪ್ಪ!! ಆದರೆ, ನನ್ನನ್ನು ಈಗ ನೀನು ಕೊಲ್ಲಲಾರೆ, ಹೀಗೆಲ್ಲಾ ನನ್ನನ್ನು ಕೊಲ್ಲಲು ಸಾಧ್ಯವಿಲ್ಲಾ. ಸ್ವಲ್ಪತಾಳು, ದುರ್ಗಾದೇವಿ ನಿನಗಾಗಿ ಪ್ರಸಾದವನ್ನು ಕೊಡಲು ಕಾದಿರುವಳು, ನಡೆ!' ಎಂದು ಹೇಳುತ್ತ ಮಲ್ಲಯ್ಯನ ಎದೆಯಮೇಲಿದ್ದ ಕಾಲನ್ನು ತೆಗೆದು, ಹೆಗ್ಗಡೆಯನ್ನು ಬಲಾತ್ಕಾರ ದಿಂದ ದೇವಿಯ ಬಳಿಗೆಂದು ಗರ್ಭಾಂಕಣಕ್ಕೆ ಕರೆದುಕೊಂಡುಬರುತ್ತಿದ್ದನು.

ಹೆಗ್ಗಡೆ ಬಿಡಿಸಿಕೊಳ್ಳಲು ಎಷ್ಟೋ ಪ್ರಯತ್ನಪಟ್ಟನು; ಸಾಧ್ಯವಾಗ ಲಿಲ್ಲ. ಮುದುಕನ ಬಾಹುಗಳಲ್ಲಿಯೂ ಅಷ್ಟರ ಬಲವುಂಟಾಗಿರುವುದೂ ಊಹಿಸುವುದಕ್ಕೂ ಆಗದಷ್ಟು ಅನರ್ಥಪರಂಪರೆಗಳು ಬಂದೇ ಒಂದು ಪ್ರಹರ ದಲ್ಲಿ ಒದಗಿ ಬರುತ್ತಿದ್ದುದೂ, ಎಲ್ಲೆಲ್ಲಿ ನೋಡಿದರೂ ದುರ್ಗಾದೇವಿಯ ಹೆಸರು, ಭೀಕರರೂಪ, ಅದ್ಭುತಕಾರ್ಯಕಲಾಪಗಳೇ ತೋರಿಬರುತ್ತಿದ್ದುದೂ ಇವೆಲ್ಲಾ ಕಾರಣಗಳಿಂದ ಹೆಗ್ಗಡೆಯ ಮನಸ್ಸ್ಥಿತಿ ಹೇಗಾಗಿದ್ದಿತೋ ಹೇಳು ವಂತಿಲ್ಲ. ಹೇಗೂ ಆತನು ಉಸಿರೆತ್ತುವುದಕ್ಕೂ ತೋರದವನಾಗಿ, ವಿಕಾರ ಸ್ವರದಿಂದ ತನ್ನ ಅನುಚರರನ್ನು ಕುರಿತು—'ಬಿಡಿಸಿ.... ಮಲ್ಲಯ್ಯ—ನಾಯು— ನಾನು—ಬೇಗ ಬನ್ನಿರಿ——' ಎಂದು ಕೂಗಿಕೊಂಡನು.

(ಮುದುಕನು ಪರಿಹಾಸ್ಯದಿಂದ ನಗುತ್ತ) 'ಅಷ್ಟೇಕೆ ಕೂಗುತ್ತಿರುವೆ! ನಿಮ್ಮಂತೆ ನಾವೂ ಕೊಲೆಗಡುಕರೆಂದೋ? ಭಯಪಡಬೇಡ, ನಿನ್ನ ಮಲ್ಲಯ್ಯ ನನ್ನೂ ಉಳಿದ ನಿನ್ನ ಭಂಟರನ್ನೂ ಪ್ರಾಣಾಪಾಯವಿಲ್ಲದಂತೆ ನೋಡಿಕೊಳ್ಳಲು ಜನರಿರುವರು. ಇನ್ನವರ ಹಂಬಲವನ್ನು ಬಿಟ್ಟು ಬಾ.' ಎಂದು ಹೇಳಿ ಅವನ ಅನುಚರರು ಚಿತ್ರಪುತ್ಥಳಿಗಳಂತೆ ಕದಲದೆ ನಿಂತು ನೋಡು ತ್ತಿದ್ದಂತೆಯೇ ಹೆಗ್ಗಡೆಯನ್ನು ಎಳೆದುಕೊಂಡು ಬಂದು ಗರ್ಭಾಂಕಣದಲ್ಲಿ ನಿಲ್ಲಿಸಿ, "ಹುಚ್ಚ, ನೋಡು, ಚೆನ್ನಾಗಿ ಕಣ್ಣು ಬಿಟ್ಟು ನೋಡು; ಮುಂದೆಡೆ ಯಲ್ಲಿಯೇ ದೇವಿ ಪ್ರತ್ಯಕ್ಷವಾಗುತ್ತಿರುವಳು. ಬೇಡು ಶರಣು ಬೇಡು."

ಎಂದು ತನ್ನ ತೋಳುಗಳ ಕಟ್ಟನ್ನು ಸಡಿಲುಮಾಡಿ ಮುಂದಕ್ಕೆ ನೂಕಿದನು.

**ಹೆಗ್ಗಡೆ:—** ಮೆಲ್ಲನೆ ಕಣ್ದೆರೆದು ನೋಡಿದನು. ಆಭರಣಗಳನ್ನೂ ವಸ್ತ್ರಗಳನ್ನೂ ಇರಿಸಿದ್ದ ಪೆಟ್ಟಿಗೆ ತೆರೆದಿದ್ದು ಆ ಪೆಟ್ಟಿಗೆಯೊಳಗೆಯೇ-ಸಾಕ್ಷಾತ್ ದುರ್ಗಾಕೃತಿ ಹೊಂದಿದ ಸ್ತ್ರೀಮೂರ್ತಿ ನಸುನಗುತ್ತ ನಿಂತಿದ್ದಳು. ದೇವಿಯ ಕೇಶರಾಶಿ ಎರಡುಭುಜಗಳ ಮೇಲೆಯೂ ಹರಿದಾಡುತ್ತಿದ್ದಿತು. ಶಿರಸ್ಸಿನಲ್ಲಿ ಪುಷ್ಪಮಯ 'ಕಿರೀಟವೂ, ದೇವಿಯ ಭುಜದಮೇಲೆಸೆಯುತ ಲಿದ್ದ ಎರಡು ಕೈಗಳಲ್ಲಿ ಗದಾ-ತ್ರಿಶೂಲಗಳೂ, ಮತ್ತೆರಡು ಕೈಗಳಲ್ಲಿ ದಂಡ-ಪಾಶಗಳೂ ಕಾಣಬಂದುವು. 'ದೇವಿಯ ಬಲಗಡೆಯಲ್ಲಿ ಜಟಾ ರುದ್ರನಂತೆ ಭಸ್ಮಧರನಾಗಿ ಗದೆಯನ್ನು ಹಿಡಿದಿದ್ದ ಭೈರವಮೂರ್ತಿಯೂ ಅವನ ಮುಂದೆ ಕೈಕಟ್ಟಿಕೊಂಡು ನಿಂತಿದ್ದ ಮರಿಯಣ್ಣನೂ, ದೇವಿಯ ಇನ್ನೊಂದು ಪಾರ್ಶ್ವದಲ್ಲಿ ಕೈಕೋಳಗಳೊಡನೆ ನಿಂತಿದ್ದ ಮಾದ-ತಿಮ್ಮ ಇವರಿಬ್ಬರೂ ದೃಷ್ಟಿಗೆ ಬಿದ್ದರು. ಹೆಗ್ಗಡೆಗೆ ಆಗ ಮನಸ್ಸಿಗೆ ಹೇಗಾಗಿರ ಬಹುದೆಂದು ಹೇಳಲಳವೇ? ಅವನು ಎರಡು ಕೈಗಳನ್ನೂ ಮೇಲಕ್ಕೆತ್ತಿ, ಉನ್ಮತ್ತನಂತೆ 'ಎಲ್ಲಾ ಹೋಯಿತು! ಪಾಪಿಗಳಾ! ವಂಚಕರಾ-ನಿಮ್ಮ ದೆಸೆಯಿಂದ ಕೆಟ್ಟೆವು. ಅಯ್ಯೋ, ಮುಂದೆಗತಿ ... .' ಎಂದು ಹೇಳುತ್ತಿದ್ದಂತೆಯೇ ಪ್ರಜ್ಞೆಯಿಲ್ಲದೆ ಕೆಳಗೆ ಬಿದ್ದುಬಿಟ್ಟನು.

ದೇವಿ ನಸುನಗುತ್ತ ಮುಂದೆಬಂದು ಪಾಶವನ್ನು ಹೆಗ್ಗಡೆಯ ಕೈಗಳಿಗೆ ಹಾಕಿ, ಮರಿಯನ ಕೈಯಿಂದ ಕಟ್ಟಿಸಿ, 'ದುಷ್ಟ, ಏಳುಏಳು, ಈಗಲೇ ನಿನಗೆ ಮೃತ್ಯುವಿಲ್ಲ, ಎದ್ದುನಿಲ್ಲು.' ಎಂದು ಕೂಗಿ ಹೇಳಿದಳು.

ಹೆಗ್ಗಡೆ ಮೆಲ್ಲನೆ ಕಣ್ಣುಬಿಟ್ಟು ನೋಡಿ, ಬಳಿಯಲ್ಲಿಯೇ ನಿಂತಿದ್ದ ದುರ್ಗೆಯನ್ನು ಕಂಡು ಚೀರತೊಡಗಿದನು. ವೃದ್ಧನು ದೇವಿಯ ಇಂಗಿತವನ್ನರಿತು, ಹೆಗ್ಗಡೆಯನ್ನು ಹಿಡಿದೆತ್ತಿ ನಿಲ್ಲಿಸಿ, ಹಿಡಿದುಕೊಂಡು ನಿಂತನು. ಹೆಗ್ಗಡೆ ಗಡಗಡನೆ ನಡುಗುತ್ತ ತಲೆಬಾಗಿ ನಿಂತನು.

**ದುರ್ಗಾ:—** ಭೈರವಮೂರ್ತಿ, ಇವನು ತನ್ನವರನ್ನು ಬಿಟ್ಟು ಬೆದರುತ್ತಿರುವನು. ಪಾಪ, ಎಲ್ಲರನ್ನೂ ಒಂದೇಕಡೆಗೆ ಸೇರಿಸಲು ತಡೆಯೇಕೆ?

ಭೈರವಮೂರ್ತಿ ದುರ್ಗಾದೇವಿಯನ್ನು ನೋಡಿ ತಲೆಬಾಗಿ ಮರಿಯನೊಡನೆ ಹೊರಗೆ ಹೊರಟನು.

**ದುರ್ಗಾ:**— ಏನು ಹೇಳುವೆ? ದುರುಳ, ಹೇಳು, ಸತ್ಯವನು ಹೇಳು. ಪಂಜು ಕಳ್ಳರೊಡನೆ ಬಂದಿರುವೆನೆಂದೇನಾದರೂ ಇದಿರು ಬಿದ್ದರೆ, ಈಗಲೇ ಹತನಾಗುವೆ ಎಚ್ಚರಿಕೆ! ನಿನ್ನವರೆಲ್ಲರೂ ಇಷ್ಟರಲ್ಲಿ ಕೈಸೆರೆಯಾಗಿ ಬರುವರೆಂದು ತಿಳಿದು, ಸತ್ಯವನ್ನು ಹೇಳಿಬಿಡು ನಿಮ್ಮ ದುರ್ಗದ ಗೊತ್ತುಗಾರರೆಲ್ಲಿರುವರು? ಕೈಸೆರೆ ಸಿಕ್ಕಿದವರ ಪಾಡೇನಾಗಿರುವುದು; ಅರಾಪನ್ನು ಹಿಡಿದು ಎಲ್ಲೆಲ್ಲಿರಿಸಿರುವಿರಿ?

ಹೆಗ್ಗಡೆ ಹುಚ್ಚನೇ ಆದನು, ಕೈತಪ್ಪಿಸಿಕೊಂಡು ಹೊರಟು ಹೋಗಬೇಕೆಂದು ಆಲೋಚಿಸಿ ಬಿಡಿಸಿಕೊಳ್ಳಪ್ರಯತ್ನಪಟ್ಟನು. ನಾಗಲಿಲ್ಲ. ಕ್ರೋಧ, ಭಯ, ಕ್ಲೇಶಗಳೇಕಕಾಲದಲ್ಲಿ ಮೇರೆ ಮೀರಿದಂತಾಗಲು ಹಿಂದುಮುಂದು ನೋಡದೆ ವೃದ್ಧನ ಕೈಯನ್ನು ಬಲುವಾಗಿ ಕಚ್ಚಿ ಗಾಯ ಮಾಡಿದನು. ಅಷ್ಟಾದರೂ ವೃದ್ಧನು ಇವನನ್ನು ಬಿಟ್ಟುಬಿಡಲಿಲ್ಲ. ದುರ್ಗೆ ನೋಡಿ ಹೇಳಿದಳು. "ಬಿಟ್ಟುಬಿಡು. ಇವನೆಲ್ಲಿಗೆ ಹೋಗುವನೋ, ಹೋಗಲಿ. ಪಾಪ! ಬಲು ಬಳಲಿರುವನು. ತಲೆ ತಪ್ಪಿಸಿಕೊಂಡು ಹೋಗಿ ಉಳಿದುಕೊಳ್ಳುವನೋ ಏನೋ ನೋಡುವ" ಎಂದು ಹೇಳಿದಳು.

ವೃದ್ಧನು ಕೈಹಿಡಿತವನ್ನು ಬಿಟ್ಟನು ಹೆಗ್ಗಡೆಯು ಅತ್ತಿತ್ತ ನೋಡದೆ ಗರ್ಭಾಂಕಣದ ಬಾಗಿಲಬಳಿಗೆ ಓಡಿಬಂದನು. ಆದರೆ ಅಲ್ಲಿ ಭೈರವಮೂರ್ತಿ ಗದಾಧರನಾಗಿ ಅಡ್ಡಗಟ್ಟಿ ನಿಂತಿದ್ದುದರಿಂದ ಮುಂದಕ್ಕೆ ಹೋಗುವುದಕ್ಕಾಗಲಿಲ್ಲ. ಹೆಗ್ಗಡೆ ಪೆಟ್ಟುತಿಂದ ಸರ್ಪದಂತೆ ಕೆರಳಿ ನಿಂತಿದ್ದವನ ಕೊರಳಿಗೆ ಕೈಹಾಕಿ—'ಹೋಗು—ಪಿಶಾಚಿ! ದೂರಹೋಗು. ದಾರಿಯನ್ನು ಬಿಡು.' ಎಂದು ಗದರಿಸಿ, ಅವನನ್ನು ಬಲುವಾಗಿ ನೂಕಿದನು.

ಭೈರವನು ಕದಲದೆ ಕೈಯಲ್ಲಿದ್ದ ಗದೆಯನ್ನು ತೆಗೆದು ಹೆಗ್ಗಡೆಯ ತಲೆಯ ಮೇಲಿಟ್ಟು— 'ತಡೆ ಏಕೆ ಹಾರಾಡುವೆ? ಕೂಗಿದರೆ, ಗದೆಗೆ ಬಲಿಯಾಗುವೆ. ಭದ್ರ! ಬಾಗಿಲಲ್ಲಿ ನಿನಗೆ ಹೋಗಲು ದಾರಿ ಇದ್ದರಲ್ಲವೇ? ದಾರಿಯಿಲ್ಲದೆ ಎಲ್ಲಿಗೆ ಹೋಗುವೆ?' ಎಂದನು. ಭೈರವಮೂರ್ತಿ ಹೇಳುತ್ತಿದ್ದಂತೆಯೇ ಇವರಿದ್ದಲ್ಲಿಗೆ ಹೆಗ್ಗಡೆಯ ಜತೆಯಲ್ಲಿ ಬಂದಿದ್ದ ಮೂವರಿಗೂ ಕೈಕೋಳಗಳನ್ನು ಹಾಕಿ ಕರೆತಂದ ಭಟರಿಬ್ಬರೂ ಭೈರವನ ಮುಂದೆ

ನಿಂತು ಕೈಕಟ್ಟಿ—'ಮಹಾಸ್ವಾಮಿ ! ಇವರನ್ನು ಮಾತ್ರ ಇಲ್ಲಿಗೆ ಕರತಂದಿದ್ದೇವೆ. ಹೊರಗಿದ್ದವರೆಲ್ಲರೂ ದೇಗುಲದ ಉಗ್ರಾಣದ ಮನೆಯಲ್ಲಿಯೂ ಕತ್ತಲೆಕೋಣೆಯಲ್ಲಿಯೂ ಸೆರೆಯಾಳುಗಳಾಗಿದ್ದಾರೆ, ನಮ್ಮವರು ಹನ್ನೆರಡು ಮಂದಿಯೂ ಆಯುಧಪಾಣಿಗಳಾಗಿ ಅವರ ಕಾವಲಿಗಿದ್ದಾರೆ. ಮುಂದೇನಪ್ಪಣೆ?' ಎಂದರು.

**ಭೈರವ** — ಏನು ! ಇಷ್ಟು ಬೇಗ, ಗದ್ದಲವಿಲ್ಲದೆಯೇ, ಆಯಿತೇ ?

**ಭಟರು** — (ಕೈಮುಗಿದು–) 'ಆಹುದು ಸ್ವಾಮಿ, ನಮ್ಮವರೆಲ್ಲರೂ ದೇಗುಲದ ಮಾಳಿಗೆಯಲ್ಲಿ ಅವಿತು ಸಮಯವನ್ನು ನೋಡುತ್ತಿದ್ದರು. ಈಗ ಸ್ವಲ್ಪ ಹೊತ್ತಿಗೆ ಮುಂಚೆ ನಮ್ಮ ಕಡೆಯ ಗೂಢಚಾರನಾದ ಮರಿಯಣ್ಣನು ಬಯಲಿಗೆ ಬಂದು ಬಾಗಿಲಲ್ಲಿ ಕುಳಿತಿದ್ದ ಕಳ್ಳರ ಗುಂಪನ್ನು ಕುರಿತು–"ಈಗ ರಾತ್ರಿ ಈ ದೇಗುಲದಲ್ಲಿಯೇ ನಾವು ಉಳಿದಿದ್ದು, ನಾಳೆ ಮುಂದಕ್ಕೆ ಹೋಗಬೇಕೆಂದು ನಿಶ್ಚಯಿಸಿರುವುದರಿಂದ ನೀವೆಲ್ಲರೂ ಇಬ್ಬಿಬ್ಬರಂತೆ ಗದ್ದಲವಿಲ್ಲದೆ ದೇಗುಲದ ಒಳಗೆ ಬರಬೇಕೆಂದು ಅಪ್ಪಣೆಯಾಗಿರುವುದು. ನಿಮಗೆ ಒಳಗೆ ಉಳಿಯಲು ತಕ್ಕ ಸ್ಥಳವನ್ನು ತೋರಿಸುತ್ತ ಹಿಂದೆಯೇ ಬರುವೆನು. ಕೈಯಲ್ಲಿರುವ ಪಂಜುಗಳಲ್ಲಿ ಒಂದೆರಡನ್ನು ಇರಿಸಿಕೊಂಡು ಉಳಿದವನ್ನು ಆರಿಸಿಬಿಟ್ಟು, ಗದ್ದಲವಿಲ್ಲದೆ ಭಯಭಕ್ತಿಯಿಂದ ದೇಗುಲದೊಳಕ್ಕೆ ಬನ್ನಿರಿ" ಎಂದು ಹೇಳಿ ಅವರಿಂದ ಹಾಗೆಯೇ ಮಾಡಿಸಿ ಕರೆತಂದನು.

**ಭೈರವ:** – 'ಕೇಳು ಕೇಳಯ್ಯ, ಹುಚ್ಚಯ್ಯ, ಚನ್ನಾಗಿ ಕೇಳು' ಎಂದು (ಭಟರನ್ನು ಕುರಿತು) 'ಆಗ ನೀವೆಲ್ಲರೂ ಎಲ್ಲಿದ್ದಿರಿ ? ಏನು ಮಾಡುತ್ತಿದ್ದಿರಿ ? ಎಂದು ಕೇಳಿದನು.

**ಭಟರು:**— ಆ ವೇಳೆಗೆ ನಾವು ಈ ಕೈಸೆರೆಯಾಳುಗಳನ್ನು ವಾಗ್ದಾನ ದ್ರವ್ಯಾಶೆಗಳಿಂದ ನಮ್ಮ ವಶಪಡಿಸಿಕೊಂಡು ಇವರನ್ನು ಉಗ್ರಾಣ–ಕತ್ತಲೆ ಕೋಣೆಗಳೆರಡರ ಒಳಗೂ ಮಲ್ಲಯ್ಯನೂ ಸೇರಿ ಇಬ್ಬಿಬ್ಬರಂತೆ ಕುಳ್ಳಿರಹೇಳಿ, ನಾವು ಹಿಂದುಗಡೆ ನಿಂತೆವು. ಅಷ್ಟರಲ್ಲಿ ಇವರಲ್ಲರನ್ನೂ ಕರೆದುಕೊಂಡು ಬಂದ ಮರಿಯಣ್ಣನು ಬಂದಿದ್ದವರನ್ನು ಎರಡು ಗುಂಪಾಗಿಮಾಡಿ, ಎರಡು ಕಡೆಗಳಲ್ಲಿಯೂ ಎರಡು ಗುಂಪನ್ನು ಸೇರಿಸಿ,–"ಹೆಗ್ಗಡೆಯವರನ್ನು ಈಗಲೇ ಕರತರುವೆನು, ಭವಾನಿಯನ್ನು ಭಕ್ತಿಯಿಂದ ಭಜಿಸುತ್ತಿರಿ" ಎಂದು

ಹೇಳಿ ಒಡನೆ ದೇಗುಲದ ಹೊರಗೆ ನಿಂತು—'ಎಲ್ಲರೂ ಕಾದಿರುವರು, ಒಳಗೆ ಬರಬಹುದು' ಎಂದು ಕೂಗಿಹೇಳಿದನು. ಉತ್ತರಕ್ಷಣದಲ್ಲಿಯೇ ಮಾಳಿಗೆಯ ಮೇಲಿದ್ದ ಭಟರೆಲ್ಲರೂ ಗದ್ದಲವಿಲ್ಲದೆ ಕೆಳಗಿಳಿದು ಬಂದು, ಉಗ್ರಾಣ, ಕೋಣೆ, ಇವುಗಳ ಬಾಗಿಲಿಗೆ ಅಡ್ಡಲಾಗಿ ನಿಂತು—'ನೀವೆಲ್ಲರೂ ಭವಾನಿಯ ಕೈಸೆರೆಯಾಗಿರುವಿರಿ. ಗದ್ದಲವಿಲ್ಲದೆ ಅಡಗಿದ್ದರೆ ಪ್ರಾಣದಾನವಾಗುವುದು' ಎಂದು ಕೂಗಿಹೇಳಿದರು. ನಾವೂ ಅದೇಕ್ಷಣದಲ್ಲಿಯೇ ಅಲ್ಲಿಗೆ ಬಂದು ಈ ಮೂವರೂ ನಮ್ಮ ಕೈಸೆರೆಯಾಳುಗಳೆಂದು ಹೇಳಿ ಇಲ್ಲಿಗೆ ಕರೆತಂದೆವು. ಅವರಲ್ಲಿಯೇ ಬಾಗಿಲುಗಳನ್ನು ಭದ್ರಪಡಿಸಿಕೊಂಡು ಕಾವಲಿರುವರು.

**ಭೈರವ** — ಮಲ್ಲಯ್ಯನ ಗತಿಯೇನಾಗಿರುವುದು ?

**ಭಟರು** —ಮಲ್ಲಯ್ಯನು ಪ್ರಾಣಭಯದಿಂದ ಗೋಳಾಡುತ್ತಿರುವನು.

**ಭೈರವ** — ಮರಿಯನೆಲ್ಲಿ ?

**ಭಟರು** —'ನಮ್ಮ ಪ್ರಭುಗಳನ್ನು ಕಂಡು ಕರೆದುಕೊಂಡು ಬರಬೇಕು. ಈಗಲೇ ಹೋಗಿಬರಬೇಕೆಂದು ಹೇಳಿ ಹೋಗಿರುವನು.'

**ಹೆಗ್ಗಡೆ:**— (ಹುಚ್ಚನಂತೆ ನೋಡುತ್ತ ಗಟ್ಟಿಯಾಗಿ) ಯಾರು ಯಾರು ? ಮರಿಯಣ್ಣ ? ನಮ್ಮ ಗುಡಿಯ ಮರಿಯಣ್ಣ, ಇಷ್ಟಕ್ಕೂ ಮುಂದಾಳು ! ಅಯ್ಯೋ ಅವನೆಲ್ಲಿ ?' ಎಂದು ಕೂಗಿಕೊಂಡನು.

**ಭೈರವ** — ಅಹುದಹುದು. ಮರಿಯಣ್ಣನೇ ಇಷ್ಟಕ್ಕೂ ಮೂಲ! ನಿನ್ನ ಕೈಕಾಲುಗಳಿಗೆ ತೊಡಿಸಬೇಕಾದ ತೊಡವನ್ನು ತರಲು ಹೋಗಿರಬೇಕು. ಪ್ರಭುವನ್ನು ಕರೆತಂದು ಆತನ ಪಾದದಲ್ಲಿ ನಿನ್ನನ್ನು ಕೆಡಹಿ ಪುನೀತನಾಗಬೇಕೆಂದು ಹೋಗಿರುವನು. ಇಷ್ಟೇಕೆ ಕಾತರಿಸುವಿರಿ ?

**ಹೆಗ್ಗಡೆ:**— 'ಅಯ್ಯೋ, ಹೋದೆವು, ಮೋಸಕ್ಕೊಳಗಾದೆವು. ಎಂದಿಷ್ಟು ಮಾತ್ರ ಹೇಳಿ ಕೆಳಗೆ ಬಿದ್ದುಬಿಟ್ಟನು.'

ಭೈರವಮೂರ್ತಿ ಭಟರಿಬ್ಬರಿಗೂ ಕೆಳಗೆ ಬಿದ್ದಿರುವವನನ್ನು ಎತ್ತಿಕೊಂಡು ಬರುವಂತೆ ಕಟ್ಟುಮಾಡಿ, ದುರ್ಗಾದೇವಿಯ ಮುಂದೆ ಬಂದು ನಿಂತು "ದೇವಿ, ಕುರಿಯ ಹಿಂಡನ್ನು ಹಿಡಿದುಕಟ್ಟಿ ಬಂದಿರುವರು. ಇನ್ನೇನು ?" ಎಂದು ನಿವೇದಿಸಿದನು. ಅಷ್ಟರಲ್ಲಿ ಭಟರು ಹೆಗ್ಗಡೆಯನ್ನು ಹೊತ್ತುಕೊಂಡು ಬಂದು ದೇವಿಯ ಮುಂದೆ ನೆಲದಮೇಲೆ ಮಲಗಿಸಿ ಕೈ

ಮುಗಿದು ನಿಂತರು.

**ದುರ್ಗಾ**·— ಮಕ್ಕಳೇ, ಸಂತೋಷವಾಯಿತು. ಇವನನ್ನೂ ಇಲ್ಲಿಯೇ ಬಂಧಿಸಿ ಈ ರಾತ್ರಿ ಇವರಿಗೆ ಇಲ್ಲಿ ವಿಶ್ರಾಂತಿಯನ್ನು ಕೊಟ್ಟಿದ್ದು, ನಾಳೆ ಇವರ ವಿಚಾರವನ್ನು ತೆಗೆದುಕೊಳ್ಳುವುದು. ಎಚ್ಚರಿಕೆ! ಇನ್ನು ಇಲ್ಲಿಯುವರ ಮೇಲವಿಚಾರಣೆಯಲ್ಲಿ ಜಾಗ್ರತೆಯಿರಲಿ.

**ಭೈರವ**:—'ಸಂಶಯಪಡಬೇಕಾದುದಿಲ್ಲ.' (ಬಳಿಕ ದುರ್ಗಾದೇವಿ ವೃದ್ಧನೊಡನೆ ಉತ್ಸಾಹದಿಂದ ಹೊರಟುಹೋದಳು.)

---

**ಶ್ರೀ:**

# ಪಂಚಮ ಪರಿಚ್ಛೇದ.

---

॥ಶ್ಲೋಕ॥ ಸರ್ವ ಮಂಗಳಮಾಂಗಲ್ಯೆ ಶಿವೇ ಸರ್ವಾರ್ಥಸಾಧಕೆ ॥
ಶರಣ್ಯೇತ್ರ್ಯಂಬಿಕೆ ದೇವಿ ನಾರಾಯಣಿ ನಮೋಽಸ್ತುತೆ ॥
ಸ್ತ್ರೀ ಸ್ತೋತ್ರ

(ಅನ್ವೇಷಣೆ, ವಿಚಾರಣೆ, ಅಭಯಪ್ರದಾನ.)

ರಾತ್ರಿ ಮೂರನೆಯ ಪ್ರಹರವು ಮುಗಿಯುತ್ತಿದ್ದಿತು. ಕಾನನವು ನಿಶ್ಶಬ್ದ, ಗಗನವೂ ನಿಸ್ತಬ್ಧ. ಎಲ್ಲವೂ ಗಂಭೀರ-ಸ್ತಬ್ಧಭಾವದಲ್ಲಿದ್ದಂತೆ ತೋರುತ್ತಿದ್ದಿತು. ಹೆಗ್ಗಡೆಯನ್ನು ಅವನ ಅನುಗಾಮಿಗಳೊಡನೆ ದೇಗುಲ ಹಲ್ಲಿ ಸೆರೆಯಿಟ್ಟು ಹೊರಟ ದೇವಿ, ಹಿಂದೆ ವೃದ್ಧಬ್ರಾಹ್ಮಣನನ್ನೂ, ಮುಂದೆ ದೀಪಹಸ್ತನಾಗಿ ದಾರಿತೋರುತ್ತಿದ್ದ ಮರಿಯುನನ್ನೂ, ಜೊತೆಗೊಂಡು ಬರುತ್ತಿದ್ದಳು. (ದೇವಿಯ ಎಡಗೈಯಲ್ಲಿ ತ್ರಿಶೂಲ, ಬಲಗೈಯಲ್ಲಿ ಖಡ್ಗ; ತಲೆಯಲ್ಲಿ ಪುಷ್ಪಮಯಕಿರೀಟ. ಮೊದಲಿದ್ದ ಮತ್ತೆರಡು ಹಸ್ತಗಳೇನಾದುವು? ಆಶ್ಚರ್ಯ! ದೇವಿಯ ವ್ಯಾಪಾರವೇ ಆಶ್ಚರ್ಯಮಯ! ದೇವಿ! ನಿನಗೆ, ನಿನ್ನೀ ಆವೇಶಕ್ಕೆ ದಿಗ್ವಿಜಯವು, ನಿನ್ನ ಭಕ್ತರಿಗೆ ಅಭ್ಯುದಯವು! ನಮ್ಮೀಭಾವನಾಲೋಕಕ್ಕೆ ಸರ್ವತ್ರಸುಭಿಕ್ಷವು!)

( ದೇವಿ ಅದೆಲ್ಲಿಗೆ ಹೋಗುತ್ತಿರುವಳೆಂದು ಕೇಳುವಿರೇನು ? ಪಾಠಕರೇ ! ಹಾಗಿದ್ದರೆ ನಡೆತನ್ನಿರಿ, ನಾವೂ ದೇವಿಯ ಮಾರ್ಗಾನುಸಂಧಾನ ಮಾಡುವ. ಆಗಬಹುದು, ನೋಡಿರಿ, ಇದಿರಿಗೆ ಕಾಣುವುದೇ ಮಲ್ಲಯ್ಯನು ಹಿಂದೆ ಹೇಳಿದ್ದ ಕಾಳಗುಡ್ಡವು. )

ಮೂವರೂ [ ಮರಿಯ–ದೇವಿ–ವೃದ್ಧ ] ಕಾಳಗುಡ್ಡದಮೇಲಕ್ಕೆ ಹತ್ತಿಬಂದರು. ಮರಿಯನು ದೊಂದಿಯನ್ನು ಮೇಲಕ್ಕೆತ್ತಿ ಮೆಲ್ಲಮೆಲ್ಲನೆ ನಡೆತಂದು, ಕಲ್ಲುಕಟ್ಟಡದ ಒಂದು ದೊಡ್ಡ ಮನೆಯ ಹಿಂದಣ ಬಾಗಿಲ ಬಳಿಗೆ ಕರೆತಂದನು ಅಡ್ಡಗೋಡೆಯ ಹೊರಬಾಗಿಲು ತೆರೆದಿದ್ದಿತು. ಮೂವರೂ ಒಳಹೊಕ್ಕು, ಕಟ್ಟಡದ ಮುಂದೆ ಬಂದು ನಿಂತರು. ಕಟ್ಟಡವು ಬಹುಬಲವಾದ ಕದಗಳುಳ್ಳ ಹಲವು ಕಿರುಮನೆಗಳಿಂದ ಕೂಡಿದ್ದಿತಲ್ಲದೆ, ಸುತ್ತಲೂ ಆವರಣದ ಗೋಡೆಗಳಿಂದಲೂ ಉದ್ದುಕ್ಕೂ ಗೋಡೆಯಮೇಲೆ ಮತ್ತು ಇಕ್ಕೆಲದ ನೆಲಗಳಲ್ಲಿ ಮೊಳದಷ್ಟು ಭಾಗಕ್ಕೆ ಸಾಲಾಗಿ ಒಂದ ಕ್ಕೊಂದು ಸೇರಿದಂತೆ, ನಟ್ಟಿದ್ದ ಹರಿತವಾದ ಅಲಗುಗಳಿಂದಲೂ, ದುರ್ಗಮ ಸ್ಥಾನವೆನ್ನಿಸುತ್ತಿದ್ದಿತು.

**ದೇವಿ** — ಮರಿಯನನ್ನು ಕುರಿತು 'ಇದನ್ನೇ ಅಲ್ಲವೇ–ನೀನು ಕಾಳಗುಡ್ಡದ ಕಾರಾಗಾರವೆಂದುದು ?" ಎಂದು ಕೇಳಿದಳು.

**ಮರಿಯ** — 'ತಾಯಿ ! ಇದೇ–ಅದು, ಇದನ್ನೇ ನಾನು ಹೇಳಿದುದು.' ಎಂದನು.

**ದೇವಿ.**— 'ನಡೆ, ಕಾವಲುಗಾರನನ್ನು ಕರೆದುಕೊಂಡು ಬೇಗ ಬಾ.' ಮರಿಯನು ಹೊರಟನು. ದೇವಿ ವೃದ್ಧನ ಕಡೆಗೆ ತಿರುಗಿ–'ಅಪ್ಪಾ ! ಹೇಗಿರುವುದು ? ನೋಡಿದೆಯಾ ? ಇನ್ನೂ ಮುಂದಿದೆ– ಆಶ್ಚರ್ಯವು' ಎಂದಳು.

**ವೃದ್ಧ** –– (ಕೌತುಕದಿಂದ–) ' ತಾಯಿ, ನಾನು ನಿನ್ನ ಮಾಯಾಜಾಲದ ಈ ಸಾಹಸಕಾರ್ಯಗಳನ್ನು ನೋಡಿ ಆಶ್ಚರ್ಯದಿಂದ ಮುಗ್ಧನಾಗಿರುವೆನು. ಏನನ್ನೂ ಹೇಳಲಾರೆನು.' ಎಂದನು.

ಇಷ್ಟರಲ್ಲಿ ಮರಿಯನು ಕಾವಲುಗಾರನ ಕೈಹಿಡಿದು, ಧೈರ್ಯವುಂಟಾಗುವಂತೆ ಹೊಸ ಹುರುಪಿನಿಂದ ಸವಿಮಾತನಾಡುತ್ತ ಕರೆತಂದು, ದೇವಿಯ ಮುಂದೆ ನಿಲ್ಲಿಸಿ, ' ಅಣ್ಣ, ಶರಣು ಬೇಡು; ದುರ್ಗಾಮಾತೆಗೆ ಅಡ್ಡಬಿದ್ದು

ಬೇಡಿಕೋ, ಬದುಕುವೆ; ಇಲ್ಲದಿದ್ದರೆ, ಎಲ್ಲರಿಗೂ ಆದ ಶಿಕ್ಷೆಯೇ ನಿನಗಾಗುವುದು. ಎಚ್ಚರಿಕೆ, ಅಣ್ಣಾ!' ಎಂದನು.

(ಕಾವಲುಗಾರನ ತಲೆತಿರುಗಿತು, ಉಸಿರೆತ್ತಲಾರದೆ, ನಡುನಡುಗುತ್ತ ದೇವಿಯ ಕಾಲಿನಮೇಲೆ ಉರುಳಿಬಿದ್ದನು.)

ದೇವಿ ಹಸನ್ಮುಖಿಯಾಗಿ "ಏಳು-ಏಳು, ಮಗನೇ, ಮನ್ನಿಸಿರುವೆನು. ಏಳು." (ಎಂದು ಹೇಳಿ, ವೃದ್ಧನಕಡೆಗೆ ನೋಡಿದಳು. ವೃದ್ಧನು ದೇವಿಯ ಇಂಗಿತವನ್ನು ತಿಳಿದು, ಕೆಳಗೆ ಬಿದ್ದಿದ್ದವನನ್ನು ಭರದಿಂದೆತ್ತಿ ನಿಲ್ಲಿಸಿ ವಿಶ್ವಾಸದಿಂದ ಹೇಳಿದನು.) "ತಮ್ಮ! ದೇವಿಯ ಅಭಯುವಾಗಿರುವುದು. ಎಚ್ಚತ್ತುಕೊ, ಧೈರ್ಯದಿಂದ ಮಾತನಾಡು, ನೀನಿನ್ನು ನಮ್ಮ ಕಡೆಯವನಾದೆ! ಸತ್ಯವನ್ನು ಹೇಳು."

(ಕಾವಲುಗಾರನು ಇದ್ದುದರಲ್ಲಿ ಧೈರ್ಯಹೊಂದಿ, ಒಣಗಿಹೋಗಿದ್ದ ತುಟಿಗಳನ್ನು ತುದಿನಾಲಗೆಯಿಂದ ನನೆಯಿಸಿಕೊಳ್ಳುತ್ತ ನಿಂತನು. ದೇವಿ ಕೇಳಿದಳು–) 'ಮಗನೇ, ಹೇಳು, ಈ ಸೆರೆಮನೆಯಲ್ಲಿ, ಎಷ್ಟು ಮಂದಿ ಯಿರುವರು?'

**ಕಾವಲ** –– 'ತಾಯಿ, ಇಲ್ಲಿ ಕೆಲಸಕ್ಕೆಬಾರದ ಜನರು ಹತ್ತಿಪ್ಪತ್ತು ಮಂದಿ, ಹೆಸರುವಾಸಿಗಳಾದವರು ನಾಲ್ಕಾರು ಮಂದಿ, ಇಷ್ಟು ಜನ ಇದ್ದಾರೆ.'

**ದೇವಿ** –– ಹೆಸರುವಾಸಿಗಳಲ್ಲಿ ಹೆಂಗಸರಾರಾದರೂ ಇರುವರೋ?

**ಕಾವಲ** –– ಇಬ್ಬರಿದ್ದಾರೆ, ಅವರಲ್ಲಿ ಒಬ್ಬಾಕೆ ಒಡತಿ, ಮತ್ತೊಬ್ಬಳು ಅವಳ ಊಳಿಗದವಳು.

**ದೇವಿ** –– ಅವರಿರುವ ಕಿರುಮನೆ ಯಾವುದು? ಇಬ್ಬರೂ ಒಂದೇ ಕಡೆಯಲ್ಲಿರುವರೋ?

**ಕಾವಲ** –– ಒಡತಿ ಇದೇ ಕಿರುಮನೆಯಲಿದ್ದಾಳೆ. ಅವಳನ್ನು ಬೇರೆ ಇಟ್ಟಿದ್ದಾರೆ.

**ದೇವಿ**:–– ಇರಲಿ, ಈ ಸೆರೆಮನೆಯ ಬೀಗದಕೈಗಳನ್ನು ಇಲ್ಲಿ ತಾ.

**ಕಾವಲ** –– ತಾಯಿ, ಮನ್ನಿಸಬೇಕು. ಈಗಲೇ, ಇಲ್ಲಿಯ ಅಧಿಕಾರಿಗಳು ಬಂದಿದ್ದಾರೆ.

**ದೇವಿ.**-- ಅವರಾರು ? ಎಲ್ಲಿರುವರು ? ಏನುಮಾಡುತ್ತಿರುವರು ?

**ಕಾವಲ** -- ಅವರಾರೋ-ಜಮಿಾನ್ದಾರರಂತೆ, ಅವರ ವಿಚಾರಣೆಯಾಗಬೇಕಂತೆ, ಅದಕ್ಕಾಗಿ ಬಂದು, ಕಡೆಯಕಿರುಮನೆಯಲ್ಲಿ ಹೋಗಿ ಕುಳಿತಿದ್ದಾರೆ ಈಗ ನಿಮಗೆ-

**ದೇವಿ:**-- (ವ್ಯಂಗ್ಯವಾಗಿ ನಕ್ಕು) 'ಹುಚ್ಚ ! ಭಯಪಡಬೇಡ, ನೀನೇನನ್ನೂ ಕೊಡಬೇಕಾಗಿಲ್ಲ ಸಮ್ಮನಾಗಿ ಇಲ್ಲಿದ್ದು ಮರಿಯನು ಹೇಳುವಂತೆ ಮಾಡುತ್ತಿರು, ಸಾಕು,' (ಎಂದು ಹೇಳಿ ವೃದ್ಧನಿಂದ ಮರಿಯನ ಕೈಯಲ್ಲಿದ್ದ 'ಲಾಂದ್ರ'ವನ್ನು ತೆಗೆಯಿಸಿಕೊಂಡು ಹೊರಟು, ಕಾವಲುಗಾರನಿಂದ ಮೊದಲು ಹೇಳಲ್ಪಟ್ಟ ಕಿರುಮನೆಯಬಾಗಿಲಿಗೆ ಬಂದು ನಿಂತು, ಒಳಗೇನಾಗುತ್ತಿದೆಯೆಂದು ತಿಳಿಯಲು ಬಾಗಿಲಕಂಡಿಗೆ ಕಿವಿಕೊಟ್ಟು ಕೇಳಿ, ಬಳಿಕ ತಲೆಯೆತ್ತಿ ವೃದ್ಧನನ್ನು ಕುರಿತು, 'ಅಪ್ಪ! ಒಳಗೆಂತಹ ಯಾತನಾಸ್ವರವು, ಎಷ್ಟು ದೀನಸ್ವರವು, ಹೊರಡುತ್ತಿರುವುದು ಕೇಳಲಿಲ್ಲವೇ? ಎಲ್ಲಿ, ನಿನ್ನಲ್ಲಿ ಕೊಟ್ಟಿರುವ ಬೀಗದ ಕೈಗಳನ್ನು ತೆಗೆದುಕೋ ಬೇಗ-ಬೇಗ ' ಎಂದಳು ವೃದ್ಧನು ಜಾಗ್ರತೆಯಿಂದ ನಡುಪಟ್ಟಿಯೊಳಗೆ ಇಟ್ಟುಕೊಂಡಿದ್ದ ಬೀಗದಕೈಗಳ ಗೊಂಚಲನ್ನು ತೆಗೆದು ದೇವಿಯ ಕೈಯಲ್ಲಿತ್ತು 'ತಾಯಿ! ಬೆಳಕನ್ನು ತೋರುವೆನು, ಜಾಗ್ರತೆಮಾಡು, ದೀನೋದ್ಧರಣದಲ್ಲಿ, ಆಪ್ತಸಂರಕ್ಷಣದಲ್ಲಿ ಕ್ಷಣಮಾತ್ರವೂ ವಿಲಂಬವು ಬೇಡ.'

**ದೇವಿ:**-- (ನಗುತ ನಗುತ ಬಾಗಿಲ ಬೀಗವನ್ನು ತೆಗೆದು, ವೃದ್ಧನನ್ನು ಮುಂದಿಟ್ಟು ಕಿರುಮನೆಯೊಳಹೊಕ್ಕು, ಒಂದುಬಾರಿ ನಾಲ್ಕು ಕಡೆಯನ್ನೂ ನೋಡಿದಳು. ಕಿರುಮನೆಯಲ್ಲಿ ಗಾಳಿ ಬೆಳಕಿಗೂ ಅವಕಾಶವಿರಲಿಲ್ಲ. ಅನಾರೋಗ್ಯದ ಜನ್ಮಸ್ಥಲದಂತೆ ತೋರುತ್ತಿದ್ದಿತು. ಕಿರುಮನೆಯ ಒಂದು ಮೂಲೆಯಲ್ಲಿ ಒಂದು ಮರದ ಹಲಗೆಯಮೇಲೆ, ಒಬ್ಬ ಹೆಂಗಸು ಮಲಗಿ, ಅತ್ಯುತ್ಕಟವಾದ ಸಂಕಟದಿಂದ ನರಳುತ್ತಿದ್ದುದನ್ನು ಕಂಡು, ದೇವಿ-'ಅಪ್ಪ, ಸದ್ದಿಲ್ಲದಂತೆ ಕಿರುಮನೆಯ ಬಾಗಿಲಿಗೆ ಅಗಣಿಯನ್ನು ಹಾಕಿ, ಮುಂದಕ್ಕೆ ಬಾ.' ಎಂದು ಹೇಳಿ, ತಾನು ಮೆಲ್ಲಮೆಲ್ಲನೆ ಮಲಗಿದ್ದವಳ ಬಳಿಗೆ ಬಂದು ಕುಳಿತು, ಪ್ರೀತಿಗೌರವವ್ಯಂಜಕಸ್ವರದಿಂದ "ತಾಯಿ, ಲಲಿತಾದೇವಿ, ತಾಯಿ," ಎಂದು ಕೂಗಿದಳು.

ಶೋಕವ್ಯಾಕುಲಗಳಿಂದಲೂ ಭಯಕಾತರಗಳಿಂದಲೂ ಅತಿಯಾಗಿ ಸಂತಪಿಸುತ್ತ ಮಲಗಿದ್ದ ಕೃಶಾಂಗಿಯಾದಾ ಲಲಿತಾದೇವಿ ಮೆಲ್ಲನೆ ಕಣ್ದೆರೆದು ಕೌತುಕದಿಂದ ನೋಡುತ್ತ ಕುಗ್ಗಿದಸ್ವರದಲ್ಲಿ "ಆದಾರು-ಕೂಗುವರು? ಆರು? ದುರ್ಗಾ, ತಾಯಿ-ದುರ್ಗಾಮಾತೇ! ಬಾ, ಇನ್ನು ವಿಳಂಬಿಸಬೇಡ, ಕರೆದುಕೊಂಡು ಹೋಗು-ಅಂಬಾ" ಎಂದು ಮತ್ತೆ ಮಲಗಿ ಕನವರಿಸಿದಳು.

ಅಷ್ಟರಲ್ಲಿ ವೃದ್ಧನು ಬಾಗಿಲನ್ನು ಹಾಕಿಕೊಂಡು ಮೆಲ್ಲಮೆಲ್ಲನೆ ಬಂದು ದೇವಿಯ ಬಲಗಡೆಗೆ, ಮಲಗಿದ್ದವಳ ಬಳಿಯಲ್ಲಿ ಕುಳಿತುಕೊಂಡು ಕನಿಕರದಿಂದ "ತಾಯಿ, ಲಲಿತಾ, ಕಣ್ದೆರೆ. ನೋಡು, ತಾಯಿ! ಇಹಲೋಕವ್ಯಾಪಾರದ ಕಡೆಗೆ ಸ್ವಲ್ಪಗಮನವನ್ನು ಕೊಡು, ಮುಂದೆ ಕುಳಿತಿರುವಳು ಭವಾನೀದೇವಿ. ನಿಮ್ಮ ಉದ್ಧರಣಕ್ಕಾಗಿಯೇ ಬಂದಿರುವಳು" ಎಂದನು.

**ಲಲಿತಾ** — (ತ್ವರೆಯಿಂದ ನೋಡಿ ಕೈನೀಡಿ)-"ಆದಾರು ತಾಯಿ, ನೀನಾರು? ನೀನು-ನಮ್ಮ ಭವಾನಿಯೇ? ನನ್ನ ನಾದಿನಿ, ನನ್ನ ಪ್ರೇಮದ ನಾದಿನಿ ಭವಾನಿಯೇ? ತಾಯಿ, ಹೇಳು, ನನಗೀಗ ಚಿತ್ತಪಲ್ಲಟವಾದಂತಿದೆ. ಸರಿಯಾಗಿ ತಿಳಿಯೆನು. ನೀನಾರೆಂದು ತಿಳಿಯಹೇಳು. ಆ ನಮ್ಮ ವಿಕ್ರಮಸೇನನ—

**ಭವಾನಿ**:— (ಪ್ರೇಮವ್ಯಂಜಕಸ್ವರದಿಂದ) 'ಅಹುದು, ಅತ್ತಿಗೆ! ನಾನೇ ಆ ನಿನ್ನ ಭವಾನಿ. ನಿನ್ನ ಸೋದರಮಾವನ ಮಗಳು, ಧೈರ್ಯವನ್ನು ತಂದುಕೊ.' ಎಂದಳು.

**ಲಲಿತಾ** — (ಭವಾನಿಯ ಕೈಹಿಡಿದು, ಕಣ್ಣೀರು ಸುರಿಸುತ್ತ-) "ಹಾಗಿದ್ದರೆ, ತಾಯಿ, ಹೇಳು. ಎಲ್ಲರೂ ಸುಖದಿಂದಿದ್ದಾರೆಯೋ? ಮಗು, ಆ ನನ್ನ ಮುದ್ದಿನಮಗು-ಪ್ರದ್ಯುಮ್ನನು ಹೇಗಿರುವನು? ಹೇಳು ಅಯ್ಯೋ, ಭವಾನಿ, ನನ್ನ ಗತಿ, ಹೀಗಾಯಿತು. ನಾನು ಸಾಯಲು ಸಿದ್ಧಳಾಗಿದ್ದೇನೆ. ಅದಕ್ಕಾಗಿ ದುಃಖವಿಲ್ಲ, ಆದರೆ, ಅಯ್ಯೋ, ಭವಾನಿ, ಅಯ್ಯೋ-ಹೇಳಲಾರೆ." ಎಂದು ದುಃಖವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು.

**ಭವಾನಿ** — ತನ್ನ ದಯಾರ್ದ್ರಹೃದಯದಿಂದ ಉಕ್ಕಿಬರುತ್ತಿದ್ದ

ಅನುಕಂಪಸೂಚಕವಾದ ಕಂಬನಿಗಳನ್ನು ಕಿರುಬೆರಳಿಂದ ನಿವಾರಿಸುತ್ತ— ಲಲಿತಾದೇವಿಯ ಹಣೆಯಮೇಲೆ ಕೈಯಿಟ್ಟು—) " ಅತ್ತಿಗೆ, ಅಳಬೇಡ, ಇನ್ನು ಅಳಬೇಕಾದುದಿಲ್ಲ, ಎಲ್ಲವೂ ಕ್ಷೇಮವಾಗುವುದು. ನಿನ್ನ ಸ್ವಾಮಿಯೂ ಆರೋಗ್ಯವಾಗಿರುವರು. '

**ಲಲಿತಾ** —— ( ಬಿಡುಗಣ್ಣಿನಿಂದ ನೋಡುತ್ತ ) ' ತಾಯಿ, ಏನೆಂದೆ ? ಕ್ಷೇಮವೇ ? ಇನ್ನು ಇನ್ನೂ—ನಮಗೆ ಕ್ಷೇಮ—ಜೀವನಲಾಭದ ಆಶೆಗೆ ಅವಕಾಶವಿದೆಯೇ ? ಹೇಳು, ಅವರಿಗೆ ಏನೂ ಅಪಘಾತವಾಗಲಾರದೇ ?

**ಭವಾನಿ** — ಅತ್ತಿಗೆ, ಸತ್ಯಕ್ಕೆ ಎಂದಿದ್ದರೂ ಜಯವು ಸಿದ್ಧವಾಗಿ ರುವುದು. ಧೈರ್ಯವಾಗಿರು. ನಿನ್ನ ಸ್ವಾಮಿಯ ಉದ್ಧಾರಕ್ಕೆಂದೇ ನಾವು ಬಂದಿರುವೆವು.

**ಲಲಿತಾ** — ಅಮ್ಮಯ್ಯಾ, ಅಯ್ಯೋ, ಈಗಲೋ ಇನ್ನು ಗಳಿಗೆಗೋ, ಅವರಿಗೆ, ಅಪಮೃತ್ಯುವಾಗುವುದಲ್ಲವೇ ? ತಾಯೀ, ನಿನ್ನಿಂದ, ನಿನ್ನ ಬಬ್ಬ ಳಿಂದ ನಮ್ಮ ಉದ್ಧಾರ, ಹೇಗೆ ಆದೀತೇ ?

**ಭವಾನಿ** — ಇರಲಿ, ಅಪಮೃತ್ಯುಭೀತಿಯನ್ನು ಬಿಟ್ಟು ಧೈರ್ಯ ದಿಂದ ಹೇಳು, ಅತ್ತಿಗೆ ! ನಿನ್ನನ್ನು ಇಲ್ಲಿ ಹೇಗೆ ಹಿಡಿದಿಟ್ಟರು ? ಇಟ್ಟವ ರಾರು ? ನಿನ್ನ ಜೊತೆಯಲ್ಲಿನ್ನಾರು ?

**ಲಲಿತಾ** — " ಹಾಗಿದ್ದರೆ ಕೇಳು,—" ಎಂದು ಹೇಳತೊಡಗಿದಳು.

**ಭವಾನಿ** — ( ವೃದ್ಧನನ್ನು ಕುರಿತು,) ಅಪ್ಪ ! ಇನ್ನು ಕಂತೆಯನ್ನು ಬಿಚ್ಚಬೇಕು. ನಾನು ಕೇಳುವುದಕ್ಕೆ ಅತ್ತಿಗೆ ಹೇಳುವದೆಲ್ಲವನ್ನೂ, ಸರಿ ಯಾಗಿ ಬರೆದುಕೊಳ್ಳಬೇಕು. ಎಲ್ಲಿ— ಲೇಖನಸಾಮುಗ್ರಿಗಳಿರುವವೋ, ಇಲ್ಲವೋ ? '

**ವೃದ್ಧ**:— ' ನಾನು ಬಂದಕಡೆಗೆಲ್ಲಾ, ನನ್ನ ಅಕ್ಷಯಲೇಖಿನಿ ( *Fountain Pen* ) ಮತ್ತು ಹಸ್ತಪುಸ್ತಕ ( *HandBook* ) ಗಳನ್ನು ತರದೆ ಇರುವಾತನೇನು ? ಎಲ್ಲಿ, ಯಾವಕಡೆಯಲ್ಲಿ, ಯಾವ ಹೊಸವಸ್ತು, ಅಥವಾ ಹೊಸವಿಚಾರಗಳು ದೃಷ್ಟಿಗೋಚರವಾಗುವುವೆಂಬ ದನ್ನು ನಾವು ಹೇಗೆ ಬಲ್ಲೆವು ? ಲೇಖನಸಾಮಗ್ರಿಮಾತ್ರವಲ್ಲ, ಬೇಕೆಂದರೆ, ಚಿಕಿತ್ಸಾಸಾಧನಗಳೂ ಕೂಡ ತಕ್ಕಮಟ್ಟಿಗೆ ನನ್ನ ಅಂಗಿಯ ಕಿಸೆ

ಯಲ್ಲಿರುವವು.

**ಭವಾನಿ —** ' ಅಷ್ಟಿಲ್ಲದಿದ್ದರೆ, ಆಪದ್ಬಂಧು, ಅಭಿನವಧನ್ವಂತರಿ ' ಇತ್ಯಾದಿಯಾದ ಬಿರುದಾವಳಿಗಳನ್ನು ಹೇಗೆ ಸಂಪಾದಿಸುತ್ತಿದ್ದೆ ? ಅದಿರಲಿ, ಈಗ ಮೊದಲು ಲಲಿತಾದೇವಿಯ ವಾಙ್ಮೂಲವನ್ನು ಸ್ಪಷ್ಟವಾಗಿ ಬರೆದುಕೊ.' (ವೃದ್ಧನ ವೇಷದಿಂದ ಕಾರ್ಯಸಾಧನೆಗೆ ಭವಾನಿಯ ಜೊತೆಯಲ್ಲಿ ಬಂದಿರುವ ಇವನೇ ಧನ್ವಂತರಿಯೆಂದು ಬೇರೆ ಹೇಳಬೇಕೇ ? )

**ಧನ್ವಂತರಿ** — ' ತಾಯಿ ! ಇದೋ, ಸಿದ್ಧವಾಗಿರುವೆನು. ಆಗಲಿ ' ಎಂದು ಲಲಿತಾದೇವಿಯು ಹೇಳುತ್ತ ಬಂದಂತೆಲ್ಲಾ, ಬರೆದುಕೊಳ್ಳುತ್ತ ಬಂದನು. (ಅದರ ವಿವರವನ್ನೇ ಕೆಳಗೆ ಕೊಟ್ಟಿರುವೆವು )

**ಭವಾನಿ:—** ಹೇಳು, ಅತ್ತಿಗೆ ಆದಷ್ಟು ಬೇಗ ಹೇಳು. ಇನ್ನೂ ಮುಂದಿನ ಕೆಲಸಗಳು ಹೇರಳವಾಗಿರುವವು.

**ಲಲಿತಾ —** ಏನು ಹೇಳಲಿ ? ನನ್ನ ತಾಯಿ ಆಸನ್ನ ಮೃತ್ಯುವಾಗಿ ಮಲಗಿರುವಳೆಂದು ವರ್ತಮಾನ ಬಂತು. ತಾಯನ್ನು ನೋಡಲು ನಾನು ನನ್ನ ಮನೆಯ ಊಳಿಗದವಳೊಡನೆ ಹೊರಟೆನು. ಜೊತೆಯಲ್ಲಿ ಬೋಯಿ ಗಳಲ್ಲದೆ ಮನೆಯ ಆಳುಗಳೇ ನಾಲ್ಕಾರುಮಂದಿ ಬಂದಿದ್ದರು. ಪಾಲ್ಕಿಯಲ್ಲಿ ಕುಳಿತು ಬಂದೆವು. ಬರುತ್ತಿದ್ದ ದಾರಿಯಲ್ಲಿ 'ಕಳ್ಳರಗವಿ' ಎಂಬ ಹಳ್ಳ ತಿಟ್ಟಿನ ಬಳಿಯಲ್ಲಿ, ಒಮ್ಮೆಗೇ ನಾಲ್ಕುಕಡೆಯಿಂದಲೂ ಕಲ್ಲುಗಳು ಬಂದು ಬೀಳತೊಡಗಿದುವು. ಆಳುಗಳು ಅಷ್ಟಕ್ಕೇ ಭೀತರಾಗಿ ದಿಕ್ಕುತೋರದೆ ಓಡಿಹೋದರು. ಬೋಯಿಗಳು ಇದ್ದುದರಲ್ಲಿ ಧೈರ್ಯಹೊಂದಿ ಮುಂದೆ ನಾಲ್ಕಾರು ಮಾರು ದೂರ ನಡೆದರು. ಆದರೆ ಅಲ್ಲಿಗೂ ಮುಗಿಯಲಿಲ್ಲ. ಆಗ ಕತ್ತಲೆಯಾಗುತ್ತಲಿದ್ದಿತು. ಮಬ್ಬಿನಲ್ಲಿ ಮುಖಕ್ಕೆ ಕರಿಯ ಬಟ್ಟೆ ಗಳನ್ನು ಹೊದ್ದು, ದೊಣ್ಣೆ ಕಲ್ಲುಗಳನ್ನು ಹಿಡಿದುಬಂದ ಕಳ್ಳರ ಗುಂಪು ನಮ್ಮನ್ನು ಮುತ್ತಿದುದನ್ನು ನಾನು ಕಂಡು, ಪಾಲ್ಕಿಯಲ್ಲಿಯೇ ಮೂರ್ಛಿತೆ ಯಾಗಿ ಬಿದ್ದೆನು.

**ಭವಾನಿ:—** ಆ ಬಳಿಕ ?

**ಲಲಿತಾ:—** ಮತ್ತೆ ನಾನು ಕಣ್ದೆರೆದು ನೋಡಿದಾಗ ಇಲ್ಲಿ, ಈ ಕತ್ತ ಲೆಮನೆಯಲ್ಲಿ, ಹೀಗೆಯೇ ಬಿದ್ದಿದ್ದೆನು. ನನ್ನ ಬಳಿಯಲ್ಲಿ ಮತ್ತಾರೂ ಇರ

ಲಿಲ್ಲ. ಅದನ್ನು ಕಂಡು ನಾನು ಎದ್ದು ಸುತ್ತಲೂ ಹುಡುಕಿ ತಡಕಿನೋಡಿದೆನು. ಒಂದು ಕಿಟಕಿಯಮಾತುಕೂಡ ಇಲ್ಲದ ಈ ಮನೆಯಲ್ಲಿ ನಾನು ಹೇಗೆ ಬಂದೆ, ಈಗ ಏನಾಗಿದ್ದೇನೆ ? ಎಂಬಿದೊಂದೂ ನನಗೆ ತಿಳಿಯಲಿಲ್ಲ. ಕೂಗಿದೆನು, ಗಟ್ಟಿಯಾಗಿ ಕೂಗಿ ಮೊರೆಯಿಟ್ಟೆನು. ಆದರೇನು ? ನನ್ನ ಮೊರೆಯನ್ನು ಆ ಲಲಿತಾಮಾತೆಯೇ ಕೇಳದಿರುವಾಗ ಮತ್ತಾರು ಕೇಳುವರು ? ಅತ್ತು ಅತ್ತು ಕಡೆಗೆ ಬೇಸತ್ತು ಸುಮ್ಮನಾದೆನು.

**ಭವಾನಿ —** ನಿನ್ನ ಸ್ನಾನ, ಪಾನ, ಆಹಾರ ಇವುಗಳಿಗೇನುಗತಿ ?

**ಲಲಿತಾ —** (ಕಣ್ಣೀರು ತುಂಬಿ-) 'ತಂಗೀ, ಏನು ಹೇಳಲಿ ? ಯಾವ ಕೈಯಿಂದ ಅತಿಥಿ-ಅಭ್ಯಾಗತರ, ಸ್ವಾಮಿ-ಗುರು-ಬಾಂಧವರ, ದೀನ, ಅನಾಥ, ಆಶ್ರಿತ, ವಿದ್ಯಾರ್ಥಿ-ಇವರ, ಊಟ-ಉಪಚಾರದ ಕೆಲಸಗಳನ್ನು ಮಾಡುತ್ತಿದ್ದೆನೋ ಅದೇ ಕೈಯಿಂದಲೇ ಈಗ ಈ ಪಾಪಿಗಳು ಕೊಡುತ್ತಿರುವರು ಅರಗೂಳನ್ನು ತೆಗೆದುಕೊಳ್ಳಬೇಕಾಗಿ ಬಂದಿರುವುದು. ನಾಯುವೆನೆಂದರೆ,- ಅತ್ತ ತಾಯ್ತಂದೆಗಳ ಮಾತು, ಇತ್ತ ಸ್ವಾಮಿ, ಗುರು, ಹಿತೋಪದೇಶಕರ ಮಾತು, ಇವೆಲ್ಲವನ್ನೂ ಸ್ಮರಿಸಿ ಸ್ಮರಿಸಿ, ಆತ್ಮಹತ್ಯಕ್ಕೆ ಅಂಜಿ,- 'ಬದುಕಿದ್ದರೆ ಎಂದಾದರೂ ಶುಭವನ್ನು ನೋಡಬಹುದೆಂಬ' ಸೂಕ್ತಿಯನ್ನೇ ನಂಬಿ ಹೇಗೋ ಜೀವಧಾರಣ ಮಾಡಿದ್ದೆನು. ನನ್ನ ಸ್ನಾನ ಭೋಜನಗಳಿಗೆ, ಮನೆಯ ಊಳಿಗದವಳನ್ನು ಬೇರೆಯಿಟ್ಟಿದ್ದಾರಷ್ಟೆ, ಅವಳನ್ನು ಮಧ್ಯಾಹ್ನ ಕಾಲಕ್ಕೆ ಸರಿಯಾಗಿ ಒಬ್ಬ ಕಾವಲುಗಾರನು ಕರೆತಂದು ಅವಳಿಂದ ನನಗೆ ಸ್ನಾನ ಮಡಿಗಳಿಗೆ ನೀರು ಬಟ್ಟೆಗಳನ್ನು ಕೊಡಿಸುವುದಲ್ಲದೆ, ಅವಳು ಉಸಿರೆತ್ತದೆ ಅರೆಗಂಬಿಯನ್ನು ಕಾಯಿಸಿ ಕೊಡುವಂತೆ ಮಾಡಿ, ಹಿಂದೆಯೇ ಕಾದಿದ್ದು ಕರೆದೊಯ್ಯುವನು. ಮತ್ತೆ ಮರುದಿನ ಮಧ್ಯಾಹ್ನವೇ ಊಟದ ಮಾತು. ಅದಾದರೂ ಯಾರಿಗೆ ಬೇಕಾಗಿದೆ-ಭವಾನಿ ? ಈಗ ಮೂರು ದಿನಗಳಿಂದ ನಾನು ಅನ್ನ ನೀರನ್ನು ಮುಟ್ಟಿದ್ದರೆ ಆ ಲಲಿತಾಮಾತೆಯ ಮೇಲಾಣೆ ....

**ಭವಾನಿ —** 'ಅತ್ತಿಗೆ ! ಹಾಗೇಕೆ ಆತ್ಮವನ್ನು ದಂಡಿಸುತ್ತಿರುವೆ ? ಹಸಿದಿದ್ದರೆ ಏನು ಕಾರ್ಯಸಾಧನೆಯಾಗುವುದು ?

**ಲಲಿತಾ —** (ಗದ್ಗದಸ್ವರದಿಂದ) 'ಮತ್ತೇನು ಮಾಡಲೆ, ತಾಯಿ,

ಜೀವದಿಂದಿದ್ದರೆ, ಇಂದಿಲ್ಲ ಮುಂದೆಯಾದರೂ ನನ್ನವರನ್ನು ನೋಡುವೆನೆಂದು ಎಂದಿನವರೆಗೆ ತಿಳಿದಿದ್ದೆನೋ, ಅಂದಿನವರೆಗೆ ಪ್ರಾಣಾಧಾರಕ್ಕೆ ಅಷ್ಟಿಷ್ಟು ಕವಳವನ್ನು ನುಂಗುತ್ತಿದ್ದೆನು. ಇಂದಿಗೆ ನಾಲ್ಕು ದಿನದ ಕೆಳಗೆ ಆ ಆಶೆ ಕೊನೆಗಂಡಿತು. ಎಂದರೆ–ಸ್ವಾಮಿಯ ಸೇವಾಸುಖಕ್ಕೆ ಪಾತ್ರಳಾಗುವೆನೆಂಬುದು ತಪ್ಪಿಹೋಯಿತು.

**ಭವಾನಿ** — ಏತರಿಂದ ಹೀಗೆ ನಿರಾಶೆಯಾಗಿ ಹೇಳುವೆ? ಏನಾಯಿತು?

**ಲಲಿತಾ** — ಏನಾಯಿತೆಂದೇಕೆ ಕೇಳುವೆ, ಭವಾನಿ? ನಾನು ಮೋಸದ ಬಲೆಗೆ ಬಿದ್ದಂತೆಯೇ ಅವರೂ ಬಂದು ಬಿದ್ದಿರುವರೆಂದು ಕೇಳಿದೆನು. ಅಷ್ಟೇ ಅಲ್ಲ, ನನಗಾದರೆ ಹೇಳಿ ಕೇಳುವವರಾರೂ ಇಲ್ಲ. ಅವರಿಗೆ ಹಾಗಲ್ಲ–ತಂಗೀ! ದಿನಕ್ಕೊಂದೆರಡು ಬಾರಿ ಅವರಿಗೆ ಈ ಯಮದೂತರ ದರ್ಶನವಂತೆ, ಕರ್ಣಕಠೋರವಾದ ಬೈಗುಳಂತೆ....ಒಪ್ಪೊತ್ತು, ಅದೂ ಹಾಳು ಒಣರೊಟ್ಟಿಯ ಊಟವಂತೆ, ಇದೆಲ್ಲವನ್ನೂ ಕೇಳಿ, ಹೇಗೆ ಸಹಿಸಲೇ, ತಾಯಿ?

**ಭವಾನಿ:**— ಶಾಂತೆಯಾಗಿ ಹೇಳು, ತಾಯಿ, ಇದನ್ನು ನಿನಗೆ ಹೇಳಿದವರಾರು?

**ಲಲಿತಾ** — ಮೂರು ದಿನದಲ್ಲಿ ಊಳಿಗದವಳು ಸ್ನಾನಕ್ಕೆ ಕರೆದೊಯ್ದಾಗ ಮೆಲ್ಲನೆ ಉಸಿರಿ ಹೋದಳು.

**ಭವಾನಿ.**— ಅವಳಿಗೆ ಹೇಗೆ ತಿಳಿಯಿತಂತೆ!

**ಲಲಿತಾ** — ಅವಳು ತನ್ನ ಮೇಲೆ ಕಾವಲಿರುವನ ಕೈಬೆಚ್ಚಗೆ ಮಾಡಿ, ಅವನಿಂದ ಕೇಳಿ ತಿಳಿದಳಂತೆ.

**ಭವಾನಿ**— ಬೆಚ್ಚಗೆ ಮಾಡುವದೆಂದರೆ ಹೇಗೆ? ಏತರಿಂದ?

**ಲಲಿತಾ** — ತನ್ನ ಉಡಿಯಲ್ಲಿದ್ದ ಚಿನ್ನದ ಉಂಗುರವನ್ನು ಕೊಟ್ಟು ಅದರ ದೆಸೆಯಿಂದ ... ...

**ಭವಾನಿ** — ಅವಳ ಮಾತು ಒಂದೇ ನಿನ್ನ ಇಷ್ಟುರ ನಿರಾಶೆಗೂ ಕಾರಣವಾಯ್ತೋ? ಅಲ್ಲದಿದ್ದರೆ, ಮತ್ತೇನಾದರೂ ದೃಢೀಕರಣ ವಿಷಯಗಳು ಕಾಣಬಂದುವೋ?

**ಲಲಿತಾ** — ( ನಿಟ್ಟುಸಿರುಬಿಟ್ಟು—) ' ತಾಯಿ, ಅಷ್ಟೇ ಅಲ್ಲ, ಈದಿನ ಮಧ್ಯಾಹ್ನ ಅವರಾರೋ ಇಬ್ಬರು, ಭಯಂಕರ ಕಾಳಮುಖರು ಬಂದು, ನನ್ನ ಮುಂದೆ ಬಲು ಹೊತ್ತು ಅದೇನನ್ನೋ ಹೇಳಿದರು. ಅದೇನು ಹೇಳಿದರೆಂಬುದು ನನಗೆ ತಿಳಿಯದೆ ಇದ್ದರೂ, ಕಡೆಗೆ ಅವರು—' ಜೋಕೆ ! ಈ ರಾತ್ರಿ ಇತ್ಯರ್ಥವಾಗಬೇಕು. ನಿಮ್ಮ ಆಯುಸ್ಸಿನ ಪರಿಮಾಣವಿಷ್ಟೆಂದು ಈ ರಾತ್ರಿ ನೋಡಬೇಕು. ಉಳಿದಿರಬೇಕಾದರೆ, ರಾತ್ರಿಗೆ ನಿನ್ನ ಗಂಡನನ್ನು ಇಲ್ಲಿಗೆ ಕರತರುತ್ತೇವೆ ಅವನಿಗೆ ನೀನೇ ಹೇಳಿ, ನಮ್ಮ ಕಾಗದಗಳಿಗೆ ರುಜುವನ್ನು ಹಾಕಿಸಬೇಕು ಇಲ್ಲವಾದರೆ ನಿಜವಾಗಿ ಸಾಯುವಿರಿ" ಎಂದು ಹೇಳಿ ಹೋದುದು ಮಾತ್ರ ನನ್ನ ಕಿವಿಗೆ ಸಬಳದ ಮೊನೆಗಳು ಇರಿದಂತಾಗಿ ನೋಯಿಸುತ್ತಿವೆ

**ಭವಾನಿ** — ' ಇಷ್ಟೆಲ್ಲಕ್ಕೂ ಕಾರಣರಾರೆಂದು ತಿಳಿದಿರುವೆ ? ಆ ಕಾರಣವೇನಿರಬಹುದೆಂದು ಆಲೋಚಿಸುವೆ ?

**ಲಲಿತಾ:**— ನನಗಾವುದೂ ತಿಳಿಯದು. ನಾನೇನು ಹೇಳಬಲ್ಲೆನೆ, ತಾಯಿ ?

**ಭವಾನಿ** — ಅತ್ತಿಗೆ ! ಹೆದರದೆ ಎದ್ದುಕುಳಿತು ಕೇಳು. ಇಷ್ಟೆಲ್ಲಕ್ಕೂ ಕಾರಣನು ನಿಮ್ಮ ಜ್ಞಾತಿಬಂಧು—ಕುಮಾರಶೇಖರ !

**ಲಲಿತಾ** — ( ಬೆದರಿಬಿದ್ದು ಎದ್ದುಕುಳಿತು— ' ಏನು, ಏನಂದೆ ? ತಾಯಿ ! ಕುಮಾರಶೇಖರ ? ನಾನು ಹೇಗೆ ನಂಬಲಿ ? ನಮ್ಮಿಂದ ಮುಂದಕ್ಕೆ ಬಂದವನು, ನಮ್ಮ ಮೇಲೆ............

ಭವಾನಿ — ಅತ್ತಿಗೆ ! ಅದಕ್ಕೆ ಕಾರಣಗಳು ಬೇಕಾದಷ್ಟಿರುವುವು. ಕಾರ್ಯಕರ್ತೃಗಳೂ, ಪ್ರೇರಕರೂ ಹಲವರಿರುವರು. ಪ್ರಯತ್ನಗಳೂ ಒಂದೆರಡಲ್ಲ, ಮತ್ತು ನಿನ್ನೆ ಮೊನ್ನೆಯದೂ ಅಲ್ಲ. ಬಹು ದಿನಗಳಿಂದ ನಡೆದು ಬಂದಿರುವ ಅಭಿಸಂಧಿಯಿದೆಂದು ತಿಳಿ !

**ಲಲಿತಾ** — ತಾಯಿ ! ಅದೊಂದೂ ನನಗೆ ತಿಳಿಯದೆ ಹೋಯಿತೇಕೆ ? ಈಗ ಗತಿಯೇನು ? ಏಕೆ ಹೀಗೆ ಮಾಡಿದರು ? ನಮ್ಮನ್ನು ಕಾಡುಪಾಲು ಮಾಡಬೇಕೆಂದೇ ? ನಮ್ಮ ಮನೆಯನ್ನು ಮುರಿಯಬೇಕೆಂದೇ ? ಏನಾಯಿತು ? ತಾಯಿ ! ನಮ್ಮ ಮಾವಂದಿರ ಪಾಡೇನಾಗಿರುವುದು.

**ಭವಾನಿ —** ನಿಮ್ಮ ಮಾವಂದಿರು ತಮ್ಮ ಜೀವಿತದ ಪರಮಾರ್ಥವನ್ನು ಕಂಡುಕೊಂಡರು. ನಿನ್ನ ಸ್ವಾಮಿಯೂ ತಮ್ಮ ಪುತ್ರಕರ್ತವ್ಯದಲ್ಲಿ ಕೃತಾರ್ಥರಾಗಿರುವರು. ಉಳಿದ ವಿಚಾರಗಳು ಹೇಗಿದ್ದರೂ ಇರಲಿ. ಈಗ ದರ ಹಂಬಲನ್ನು ಬಿಟ್ಟು, ನಿಮ್ಮ ಬಂಧವಿಮೋಚನೆಗೆ ಶಕ್ತಿಯನ್ನು ಹೊಂದಬೇಕಾದುದು ಮುಖ್ಯವು.

**ಲಲಿತಾ. —** (ತನ್ನೆರಡು ಕೈಗಳಿಂದಲೂ ಭವಾನಿಯ ಕೊರಳನ್ನು ಸುತ್ತಿ, ತನ್ನ ಮುಖವನ್ನು ಅವಳ ಎದೆಯ ಮೇಲಿಟ್ಟು ದೈನ್ಯದಿಂದ–) 'ಭವಾನೀ! ನನ್ನ ಭವಾನೀ! ಅಷ್ಟು ಮಾಡು. ನಮ್ಮನ್ನು ಬಿಡುಗಡೆ ಮಾಡು, ತಾಯಿ, ನೀನೇ ನನ್ನ ಇಷ್ಟದೇವತೆಯಾಗಿ ಬಂದಿರುವೆ, ನನ್ನಲ್ಲಿ ಕೃಪಮಾಡಿ, ಪತಿಭಿಕ್ಷೆಯನ್ನಿತ್ತು, ನನ್ನ ಮಾಂಗಲ್ಯಭಾಗ್ಯವು ನಷ್ಟವಾಗದಂತೆ ಕಾಪಿಡು. ಭವಾನಿ, ಮಾಡುವೆನೆಂದು ಆಣೆಯನ್ನಿಟ್ಟು ಮಾತುಕೊಡು.'

**ಭವಾನಿ —** ತಾಯಿ! ಧೈರ್ಯದಿಂದಿರು. ನಿನ್ನ ಮಾಂಗಲ್ಯ ವೃದ್ಧಿಗೂ ಮತ್ತು ನಿನ್ನ ವಂಶದ ಅಭ್ಯುದಯಕ್ಕೂ ಉದ್ಧಾರಕರ್ತರಾಗಿ ನನ್ನ ಸ್ವಾಮಿಯೇ ಬಂದಿರುವರು. ಇನ್ನು ಭಯವನ್ನು ಬಿಡು, ಮುಂದಿನ ಕೆಲಸಗಳನ್ನು ಮಾಡಲು ಹೋಗುವೆವು, ಆದರೆ ಹೊರಟುಹೋದೆವೆಂದು ಭಯಪಡಬೇಕಾಗಿಲ್ಲ, ಸಕಾಲದಲ್ಲಿ ಬರುವೆವು.

**ಲಲಿತಾ —** (ತನ್ನೆರಡು ಕರಕಿಸಲಯಗಳಿಂದಲೂ ಭವಾನಿಯ ಮೈದಡವಿ–) 'ಭವಾನಿ! ಭಗವತೀ ಲಲಿತಾಮಾತೆಯೇ ನಿನ್ನಮೇಲೆ ಆವೇಶಿಸಿರುವಳು, ಧೈರ್ಯವಾಗಿರುವೆನು, ಸಕಾಲದಲ್ಲಿ ಬರುತ್ತಿರುವೆಯೆಂದು ಬಲ್ಲೆನು, ಹೊರಡು!' ಎಂದು ಬೀಳ್ಕೊಟ್ಟಳು. ಭವಾನಿಯೂ ಧನ್ವಂತರಿಯೊಡನೆ ಕಿರುಮನೆಯ ಬಾಗಿಲನ್ನು ತೆರೆದು ಹೊರಗೆಬಂದು ಮತ್ತೆ ಹೊರಗಡೆ ಬೀಗವನ್ನು ಹಾಕಿಕೊಂಡು ಕಾರಾಗಾರದಲ್ಲಿ ಸೆರೆಯಿರುವರ ಬಿಡುಗಡೆಗಾಗಿ ಅತ್ತಕಡೆಗೆ ಹೊರಟಳು.

---

ಶ್ರೀ:

# ಷಷ್ಠ ಪರಿಚ್ಛೇದ.

"ಸಂಪತ್ಸು ಮಹತಾಂ ಚಿತ್ತಂ ಭವತ್ಯುತ್ಪಲ ಕೋಮಲಮ್
ಆಪತ್ಸುಚ ಮಹಾಶೈಲ ಶಿಲಾಸಂಘಾತ ಕರ್ಕಶಮ್ ||"
(ಭರ್ತೃಹರಿ)

(ಹಠ, ಭಯಪ್ರದರ್ಶನ ಮತ್ತು ಅರ್ಧಾಂಗೀಕಾರ.)

"ನೀನು ಬ್ರಾಹ್ಮಣ, ಸುಮ್ಮನೆ ಹಟಮಾಡಿ ಕೆಟ್ಟು ಹೋಗಬೇಡ! ನಮ್ಮ ಮಾತನ್ನು ಕೇಳು."

"ಬ್ರಾಹ್ಮಣನೂ ಅಹುದು; ನಿಷ್ಠನೂ ನಿರಪರಾಧಿಯೂ ಸತ್ಯಸಂಕಲ್ಪನೂ ಆದ ಬ್ರಾಹ್ಮಣನೆಂದೂ ಹೇಳಬಲ್ಲೆನು. ಆದುದರಿಂದಲೇ ಸಾರಿ ಸಾರಿ, ಹೇಳುವೆನು. ನನ್ನನ್ನು ಬಲಾತ್ಕರಿಸಿ ಫಲವಿಲ್ಲ. ಸುಮ್ಮನೇಕೆ ಇಲ್ಲದ ತೊಂದರೆಗಳನ್ನು ತೆಗೆದುಕೊಳ್ಳುವಿರಿ? ನಡೆಯಿರಿ."

"ಬೇಡ ಬೇಡ, ಹಠಮಾಡಬೇಡ! ನೀನು ಬ್ರಾಹ್ಮಣ, ನಾವು ಕೆಚ್ಚೆದೆಯ ಸಂಕರಜಾತಿಯವರು! ನಮ್ಮ ಮಾತನ್ನು ಕೇಳದಿದ್ದರೆ ನೋಡಿಕೋ, ಈ ಗಳಿಗೆಯಲ್ಲಿ ನಿನ್ನ ಜಾತಿನೀತಿಯೆಲ್ಲಾ ಕೆಡಿಸಿಬಿಡುತ್ತೇವೆ; ಇನ್ನೂ ಇನ್ನೂ ಎಷ್ಟೋ ಕೇಡುಗಳುಂಟು."

"ಏನನ್ನಾದರೂ ಹೇಳಿಕೊಳ್ಳಿರಿ. ನಿಮ್ಮ ಕೆಲಸವನ್ನು ನಮ್ಮ ಅಂತರಾತ್ಮವು ಒಡಂಬಡುವುದಿಲ್ಲ."

ಈ ಬಗೆಯಾದ ಉತ್ತರ ಪ್ರತ್ಯುತ್ತರಗಳು, ಕಾರಾಗಾರದ ಕಡೆಯ ಕಿರುಮನೆಯಲ್ಲಿ ನಡೆಯುತ್ತಿದ್ದುವು. ಕಿರುಮನೆಯ ಬಾಗಿಲು ಅರೆ ಮುಚ್ಚಿದ್ದಿತು. ಕಿರುಮನೆಯ ಹಿಂಗಡೆಯ ಗೋಡೆಯಲ್ಲಿ ಮೇಲೆ ಚಾವಣಿಗೆ ಹತ್ತಿರವಾಗಿದ್ದ ಕಿಟಕಿಗಳಲ್ಲಿ ಮುಖವಿಟ್ಟು, ಭವಾನಿ, ಒಳಗೇನು ನಡೆವುದೆಂಬುದನ್ನು ಕೇಳುತ್ತ ನಿಂತಿದ್ದಳು. ಬಳಿಯಲ್ಲಿ ಧನ್ವಂತರಿ ನಿಂತು, ಒಳಗೆ ನಡೆಯುತ್ತಿದ್ದ ಸಂವಾದಗಳನ್ನು ತ್ವರೆಯಿಂದ ತನ್ನ ಹಸ್ತ ಪುಸ್ತಕದಲ್ಲಿ ಬರೆದುಕೊಳ್ಳುತ್ತಿದ್ದನು. "ಒಳಗಿದ್ದವರಾರು? ಅದಾರಿಗೆ

ಮಾತುಗಳು ನಡೆಯುತ್ತಿದ್ದುವು ?" ಎಂದು ಕುತೂಹಲಗೊಂಡಿರುವಿರಲ್ಲವೇ, ಪಾಠಕರೇ ? ಹಾಗಿದ್ದರೆ ಬನ್ನಿರಿ, ನೋಡುವ ! ಇದೋ ನೋಡಿರಿ, ಈ ಜೀರ್ಣವಾದ ಹುಲ್ಲಿಚಾಪೆಯ ಮೇಲೆ, ಈ ಮಾಸಿದ ಬಟ್ಟೆಗಳನ್ನುಟ್ಟು, ಬಡವಾದಮೈ ಗಡಗಡನೆ ನಡುಗುತ್ತಿದ್ದರೂ, ಬಾಡಿಹೋದ ಮುಖದಲ್ಲಿ ಬಳಲಿಕೆಯಿಂದ ಬೆವರು ಸುರಿಯುತ್ತಿದ್ದರೂ ವಿಕಾರಕ್ಕೊಳಗಾಗದೆ, ಅಭಿಮಾನಧನನಾದ ಕೇಸರಿಯಂತೆ, ಗಂಭೀರವಾಗಿ ಕುಳಿತಿರುವ ಈ ತೇಜಃಪುಂಜಮೂರ್ತಿಯನ್ನು ನೋಡಿರಿ ! ಹೇಗಿದೆ ? ಮುಗಿಲು ಮುಸುಕಿದ ರವಿಯೇ ಈ ಮೂರ್ತಿಯಾಗಿರಬೇಕೆನ್ನುವಿರೇ ? ಚೆನ್ನಾಗಿ ನೋಡಿರಿ ! ಇವನಾರು ? ಶ್ರೀಯುತ ಮಹಾಮಹೋಪಾಧ್ಯಾಯ-ಮಧುಸೂದನಭಟ್ಟಾಚಾರ್ಯನೇ ಈ ಮೂರ್ತಿಯೆನ್ನುವಿರೇ ? ನಿಜ, ಚೆನ್ನಾಗಿ ಊಹಿಸಿದಿರಿ, ಈತನೇ ನಮ್ಮ ಸನ್ಮಾನನೀಯನೂ ಪಾರಮಾರ್ಥಿಕವಿಚಾರ ಸಂಪನ್ನನೂ ಭೂತದಯಾಪರನೂ ಆದ ಮಧುಸೂದನ ಮಹಾಮಹೋಪಾಧ್ಯಾಯನು ! "ಹಾಗಾದರೆ, ಅವರಾರು ಈತನ ಮುಂದೆ ವೀರಮಂಡಿಯೂರಿ ಕುಳಿತು, ಗದರಿಸುತ್ತಿರುವವರು ? ಇಬ್ಬರೂ ಯಮದೂತರೋ ? ಏನು ? ಹಾಗೆಯೇ ಕಾಣುತ್ತಿದೆ, ಯಮದೂತರಲ್ಲದಿದ್ದರೆ, ಈ ಕರಾಳ ಕೃಷ್ಣದೇಹವೂ ಈ ಕೆಂಬಣ್ಣದ ಉಡುಪುಗಳೂ, ಕಮ್ಮಂಕುಳುಗಳಲ್ಲಿರುವ ಉದ್ದವಾದ ದೊಣ್ಣೆಗಳೂ ಇವರಲ್ಲಿರುತ್ತಿದ್ದುವೇ ? ಇವರು ನಿಜವಾಗಿಯೂ ಕಾಲಕಿಂಕರರೇ ಸರಿ !" ಎನ್ನುವಿರೋ ?

"ಹಾಗಲ್ಲ, ಮಹೋದಯರೇ ! ' .. ನಾವು ಕೆಟ್ಟದೆಯ ಸಂಕರಜಾತಿಯವರು .. ... ...' ಎಂದಾಡಿದ ಮೇಲಿನ ಮಾತನ್ನು ನೆನಪಿಗೆ ತಂದಮೇಲೆ, ನೀವಾಗಿ ನಿಜವನ್ನು ಊಹಿಸುವಿರಲ್ಲವೆ ? ಹೋ ! ನೆನಪಿಗೆ ಬಂದಿತು. ಈಗ ತಿಳಿದೆವು– ಇವರು ಕಳ್ಳರ ಗಡಿಯ ತಳವಾರ, ಕೊತ್ತವಾಲರು.' ಅಹುದು, ಇವರೇ ಈ ಕಾರಾಗಾರದ ಒಡೆಯರು. ಆದರೆ, 'ಅದೇನದು – ಅವರ ಕಯ್ಯಲ್ಲಿರುವ ಅಖಂಡ ಪತ್ರವು ? ಅದರಲ್ಲೇನಿದೆ ? ಏನು ಮಾಡಬೇಕೆಂದು ಬಂದಿರುವರು ? ಮಹಾಮಹೋಪಾಧ್ಯಾಯರಿಗೆ ಏನಾದರೂ ಉಪಹತಿಗಳುಂಟಾಗುವುವೋ ? ಹಾಗಿದ್ದರೆ ನಾವು ಈಗಲೇ, ಇಲ್ಲಿಂದಿಲ್ಲಿಯೇ ಕಾಲನ್ನೆಳೆದುಕೊಂಡು ಹೋಗುವೆವು.

ಬೇಗಹೇಳಿರಿ ?' ಹೀಗೆನ್ನುವಿರೇ ಪಾಠಕರೇ ?

ಅಂತಹ ಭೀತಿಯಾದರೂ ನಮಗೇಕೆ ? ಸತ್ಯಕ್ಕೆ ಪರಿಭವವೆಂದಾದರೂ, ಎಲ್ಲಿಯಾದರೂ ಕಂಡುಬಂದಿರುವುದೋ ?–ಧರ್ಮದೇವತೆ ಜೀವಿಸುತ್ತಿರುವಳು. ಕರ್ಮಸಾಕ್ಷಿ ಸಮಯವನ್ನೇ ನೋಡುವಂತಿದ್ದು ಧರ್ಮದೇವತೆ ಆಪದ್ಬಂಧುವಾಗಿ ಒಂದು ನಿಲ್ಲಲು ಸ್ಥಿರವಾಗಿರುವಾಗಲೂ ಭಯವೇನು ? ಸಕಾಲದಲ್ಲಿ ಸತ್ಪುರುಷನು ಸಂದರ್ಶನವನ್ನು ಕೊಡಲಾರನೋ ? ನಿಧಾನಿಸಿರಿ. ಇಷ್ಟಕ್ಕೆ ಭೀತರಾಗಬಾರದು, ಅವರ ವಾದ–ವಿವಾದದಿಂದಲೇ ವಿಚಾರವಿಂತಹದೆಂದು ತಿಳಿಯುವ. ಅದೋ ನೋಡಿರಿ, ಈ ಕಾಳಮುಖರು ಮತ್ತೆ ಕೂಗುತ್ತಿರುವರು .)

ಕಾಳಮುಖರು ಕೈಯಲ್ಲಿದ್ದ ಪತ್ರಗಳನ್ನು ಒಮ್ಮೆ ತೋರಿಸಿ ದಟ್ಟಿಸುತ್ತ ಮಧುಸೂದನಶರ್ಮನನ್ನು ಕುರಿತು ಕೇಳಿದರು–" ಏನೆಂದೆ ? ಬ್ರಾಹ್ಮಣ. ನಿನ್ನ ಅಂತರಾತ್ಮವು ಒಡಂಬಡುವುದಿಲ್ಲ, ಹಾಗಲ್ಲವೇ ? ಆದರೆ ಇದಿರಿಗೆ ನಡೆಯುವ ಕ್ರೂರಕೃತ್ಯಗಳನ್ನು ಎಂದರೆ–ಕೊಲೆ ರಕ್ತದ ಕೋಡಿಗಳನ್ನು ನೋಡಲಿಕ್ಕೆ ಮಾತ್ರವೇ ಸಮ್ಮತಿಸುವನಲ್ಲವೆ ? ಆಗಲಿ. "

**ಮಧು —** ( ತಲೆಯೆತ್ತಿ ಉತ್ತೇಜಿತಸ್ವರದಿಂದ– ) ' ಅಯ್ಯ ! ಕೊಲೆಗೇಡಿಗಳಾದ ನಿಮ್ಮ ಕೈಯಲ್ಲಿ ಸಿಕ್ಕಿಬಿದ್ದು ನರಲುತ್ತಿರುವುದರಿಂದ, ಮರಣದ ಅಥವಾ ಕೊಲೆಯ ಭೀತಿಯೂ ಉಂಟೇ ? ಹೀಗೆ ಇಲ್ಲಿ ಅಪ್ರಯೋಜಕನಾಗಿ ನರಲುವುದಕ್ಕೂ ಸಾವುದೇ ನನ್ನಂತಹನಿಗೆ ಸುಖವು.

**ಕಾಳ —** ( ವ್ಯಂಗ್ಯವಾಗಿ– ) " ಹಹಹಾ ! ವಿರಕ್ತನಯ್ಯಾ ! ಬ್ರಾಹ್ಮಣನು, ಬಹು ವಿರಕ್ತನೇ ಇದ್ದಾನಯ್ಯಾ ! ಇರಲಿ, ಆದರೆ, ಅಯ್ಯಾ–ಬ್ರಾಹ್ಮಣ ! ಇಷ್ಟು ಪ್ರಪಂಚದಮೇಲಿನ ವೈರಾಗ್ಯವುಂಟಾಗಿದ್ದೂ ಈ ಕಾಗದಕ್ಕೆ ಒಂದೆರಡು ' ರುಜು ' ಬರೆದುಕೊಡಲೊಲ್ಲೆಯಾಕೆ ? ಸತ್ತು ಹೋಗುತ್ತಿರುವನಿಗೆ ಈ ಹಟದಿಂದ ಫಲವೇನು ? "

**ಮಧು —** ( ಜಿಗುಪ್ಸೆಯಿಂದ ) " ಅಯ್ಯ ! ಪರಮಾತ್ಮನ ಸ್ಮರಣೆಯಲ್ಲಿಯಾದರೂ ಹೊತ್ತು ಕಳೆದರೆ, ಆತ್ಮಕ್ಕೆ ಶಾಂತಿಯುಂಟು. ಮೂರ್ಖರೋಗಕ್ಕೆ ಮದ್ದೇ ಇಲ್ಲ. ಮೂರ್ಖರಾದ ನಿಮ್ಮಲ್ಲಿ ವಾದಿಸಿ ಹೊಂದುವ ಲಾಭವು ನನಗೆ ಬೇಕಾಗಿಲ್ಲ, ಹೊರಡಿರಿ. "

**ಕಾಳ.**— ಏನು ? ನಮ್ಮಲ್ಲಿ ವಾದಿಸಿದರೆ ಲಾಭವಿಲ್ಲ, ಮತ್ತು ನಿನಗೆ ಬೇಕಿಲ್ಲ ? ಹಾಗೋ ? ಈಗ ನಿನಗೆ ಜೀವದಾನ ಮಾಡಬೇಕಾದರೆ ನಾವೋ ? ಆ ನಿನ್ನ 'ಪರಮಾತ್ಮ'ನೆಂಬುವನು ಬರುತ್ತಾನೋ ?

**ಮಧು** — ಪ್ರಪನ್ನಜನಪರಿತ್ರಾಣನಾದ ಆ ಪರಮಾತ್ಮನನ್ನೇ ನಂಬಿರುವ ನನ್ನಂತಹನಿಗೆ ಪ್ರಾಣದಾತರು, ನಿಮ್ಮಂತಹ ಕಳ್ಳ-ಗುಳ್ಳೆನರಿಗಳಲ್ಲ. ಆ ಕಮಲಾಕಾಂತನೇ ನನ್ನ ಪ್ರಾಣದಾತನೂ, ಮತ್ತು ಆಪನ್ನಿವಾರಣನೂ ಆಗಿರುವನು. ಸುಮ್ಮನೆ ಮದಿಸಿ ಹೇಳುವಿರೇಕೆ ?

**ಕಾಳ** — ಎಲ್ಲಿ ಈಗ ನಿನ್ನ 'ಪರಮಾತ್ಮನನ್ನು' ಬರಮಾಡಿಕೋ, ನೋಡುವ ? ನಾವು ಈಗಲೇ ನಿನ್ನನ್ನು ಕೊಲ್ಲುವೆವು. ಹುಹೂ ! ಎಲಾ-ಮರುಳೆ ? ಆಗಲಾದರೂ ನಿನ್ನ ಉಳಿವಿಗೂ, ಅಳಿವಿಗೂ ನಾವೇ ಗೊತ್ತುಗಾರರೆಂದು ತಿಳಿದುಕೊಳ್ಳುವೆ !

**ಮಧು** — 'ಬುದ್ಧಿಹೀನರೆ ! ನಾನೇನೂ ಅವನನ್ನು ಬರಮಾಡಿಕೊಳ್ಳಬೇಕಾಗಿಲ್ಲ. ಅವನಾಗಿ ತಿಳಿದುಬರುವುದೇ ನನಗೆ ಬೇಕಾದುದು, ಆದರೆ ನನಗಿನ್ನು ಜೀವಿತದಲ್ಲಿ ಆಶೆಯಿಲ್ಲ. ಸಾಯಲು ಸಿದ್ಧನಾಗಿಯೇ ಇರುವ ನಾನು, ನಿಮ್ಮ ಕೆಲಸಕ್ಕೆ ಬಾರದ ಈ ಒಣ ಬೆದರಿಕೆಗೆ ಹೆದರುವನಲ್ಲ. ನೀವು ಹಗೆತನವನ್ನು ಸಾಧಿಸಬೇಕೆಂದು ಒಂದುವೇಳೆ ನನ್ನ ಕೊರಳನ್ನು ಕುಯ್ದರೂ ಈ ದೇಹದ ಅವಸಾನಕಾಲವು ಬಂದಿತೆಂದೂ, ಆತ್ಮನು ಬಂಧಮುಕ್ತನಾದುದರಿಂದ ಸಂಸಾರತಾಪವು ನಿವಾರಣೆಯಾಯಿತೆಂದೂ ಭಾವಿಸುವೆನಲ್ಲದೆ, ಭಗವಂತನು ನಿಮ್ಮ ಈ ನೀಚಕೃತ್ಯಕ್ಕೆ ನಿಮ್ಮನ್ನು ಕ್ರೂರವಾಗಿ ದಂಡಿಸದೆ ಕ್ಷಮಿಸಿ, ಸನ್ಮಾರ್ಗಕ್ಕೆ ತರಲೆಂದು ಮನಃಪೂರ್ವಕವಾಗಿ ಆಶೀರ್ವದಿಸುತ್ತೇನೆ. ತಿಳಿದಿರೋ !

**ಕಾಳ** — ( ತಲೆಯಲ್ಲಾಡಿಸಿ-) 'ತಿಳಿದೆವಯ್ಯಾ, ಮಹಾನುಭಾವ ! ನೀನು ಬಲುದೊಡ್ಡ ತಾಪಸನೆಂದು ಚನ್ನಾಗಿ ತಿಳಿದುಕೊಂಡೆವು. ಆಗಲಿ, ಆಶೀರ್ವಾದಮಾಡು, ಹಾಗೆಯೇ ಒಂದಿಷ್ಟು ಉದಾರ ಮನಸ್ಸಿನಿಂದ ಈ ಕಾಗದಗಳಿಗೂ ನಿನ್ನ ಕೈ ಬರಹವನ್ನು ಹಾಕಿ ನಮ್ಮನ್ನು ಸಂತೋಷಪಡಿಸಿ, ನೀನು ಸಾಯಲು ಹೋಗಬಹುದಲ್ಲವೇ ?

**ಮಧು:**— ಅದು ನನ್ನಿಂದಾಗತಕ್ಕುದಲ್ಲ.

**ಕಾಳ** -- ಯಾತಕ್ಕೆ ಇಷ್ಟು ಹಟ ?

**ಮಧು** — ಏತರಿಂದಲೇ ? ಈ ಬರೆಹವಾರದು ? ಏನೆಂದು ಬರೆದಿದೆ ? ಯಾವ ಭಾಷೆಯಲ್ಲಿ ಬರೆದಿದೆ ? ಇದಕ್ಕೆ ನನ್ನ ಕೈಬರಹವೇಕೆ ? —ಅದನ್ನಾದರೂ ಹೇಳಲಾರಿರಿ—ನೀವು ?

**ಕಾಳ** -- ಇದು ಯಾವ ಭಾಷೆಯೋ ನಮಗೇ ಗೊತ್ತಿಲ್ಲ ನಾವು ನಿನ್ನಂತೆ ಪಂಡಿತರಲ್ಲ—ಉಪಾಧ್ಯರಲ್ಲ, ಓದುಬರೆಹ ಕಲ್ತವರೂ ಅಲ್ಲ. ಇದಕ್ಕೆ ನಿನ್ನ ಕೈಬರೆಹ ಹಾಕಿಸಬೇಕೆಂದಷ್ಟೇ ನಮಗೆ ಅಪ್ಪಣೆಯಾಗಿದೆ. ಇದಕ್ಕಾಗಿ ನಿನಗೆ ಎಷ್ಟು ಒಗೆಯು ಹಿಂಸೆಯನ್ನಾದರೂ ಕೊಡಬಹುದೆಂಬ ಅಧಿಕಾರವೂ ನಮಗೆ ದೊರೆತಿದೆ. ಹೆಚ್ಚೇಕೆ, ಇದಕ್ಕೆ ನೀನು ಒಪ್ಪದಿದ್ದರೆ ನಿನ್ನನ್ನು ಕೊಂದುಬಿಡಬೇಕೆಂದು ಕೂಡ ಅಪ್ಪಣೆಯಾಗಿದೆ.

**ಮಧು** — ಹಾಗಿದ್ದರೆ ನಿಮ್ಮ ಕೆಲಸವನ್ನು ಮುಗಿಸಬಹುದು; ನನಗೆ ಅರ್ಥವಾಗದಿರುವ ಈ ಕೆಲಸದಲ್ಲಿ ಎಂತೆಂತಹ ಅಧರ್ಮವ್ಯಾಪಾರಗಳು ನಡೆದಿರುವುವೋ ತಿಳಿಯೆನಾದುದರಿಂದ ಇದಕ್ಕೆ ನಾನು ಏನುಮಾಡಿದರೂ ಕೈಬರಹವನ್ನು ಕೊಡಲಾರೆನು.

**ಕಾಳ** -- ಅಯ್ಯ ! ಕೇಳು, ನಾವು ಕೊಲೆಗಡುಕರೆಂಬುದೂ ಎಷ್ಟು ಹೇಸಿಕೆಕೆಲಸಗಳನ್ನಾದರೂ ಮಾಡುವೆವೆಂಬುದೂ ದಿಟ. ಆದರೂ ನಮಗೆ ತಪಸ್ವಿನಿಯರಾದ ಹೆಂಗಸರಲ್ಲಿ ಗೌರವಬುದ್ಧಿಯುಂಟು. ಅವರ ಕೊಲೆಗೆ ನಾವು ಹಿಂತೆಗೆಯುತ್ತೇವೆ. ಆದುದರಿಂದ, ಅವಳೊಬ್ಬಳು ಹೆಂಗಸಿಗಾಗಿ, ನಿನ್ನನ್ನು ಈವರೆಗೆ ಕೊಂದಿಲ್ಲ.

**ಮಧು** — (ಬೆದರಿಬಿದ್ದು, ಕೌತುಕದಿಂದ ನೋಡುತ್ತ—) 'ಹೆಂಗಸೆ? ಅವಳಾರು ? ಎಲ್ಲಿರುವಳು ! ನನ್ನ ಜ್ಯೇಷ್ಠ ಪತ್ನಿಯೆ ? '

**ಕಾಳ** — ಹಾಗೆಯೇ ತಿಳಿದುಕೋ. ನಿನಗೆ ಮೊದಲೇ ಇಲ್ಲಿ ನಮ್ಮ ಸೆರೆಯಾಳಾಗಿ ಸಿಕ್ಕಿರುವ ಅವಳ ಮೇಲಿನ ದಯೆ, ಗೌರವ ಮತ್ತು ಅವಳ ದೈನ್ಯಪ್ರಾರ್ಥನೆಗಳ ಮೇಲೆಯೇ ನಿನ್ನನ್ನು ಇದುವರೆಗೂ ಉಳಿಸಿದ್ದೇವೆ.

**ಮಧು**.— ( ಪತ್ನಿ ಜೀವಿಸಿರುವಳೆಂಬ ಸಂಗತಿ ತಿಳಿದು ಸಂತೋಷವೂ ತನ್ನಂತೆಯೇ ಅವಳೂ ಕೊಲೆಗಡುಕರ ಕೈಸೆರೆಯಾಗಿರುವಳೆಂಬ ವಿಷಯವನ್ನು ಕೇಳಿ ದುಃಖವೂ ಉಂಟಾಗಿ ಅವಳನ್ನು ನೋಡಬೇಕೆಂಬ

ಆತುರದಿಂದ ಬಾಲಕನಂತೆ ಆವ ವಿಚಾರವನ್ನೂ ಮಾಡದೆ ಕೈ ಜೋಡಿಸಿ ದೈನ್ಯದಿಂದ-) 'ಇಷ್ಟುಮಾಡಿರಿ, ದಯಾಳುಗಳೇ! ನನ್ನಲ್ಲಿ ಇಷ್ಟು ಕೃಪೆ ಮಾಡಿರಿ, ಆ ನನ್ನ ಮನೋದೇವತೆಯ ದರ್ಶನಲಾಭವನ್ನು ನನಗುಂಟು ಮಾಡಿಕೊಡಿರಿ. ನನ್ನ ಸಂತಾಪವೆಲ್ಲವನ್ನೂ ನೀಗಿ, ನಿಮ್ಮ ಉಪಕಾರ ಸ್ಮರಣೆ ಮಾಡುತ್ತ ಸುಖವಾಗಿ ಸಾಯುವೆನು.' ಎಂದು ಕೇಳಿಕೊಂಡನು.

**ಕಾಳ:—** ಹಾಗಲ್ಲ, ನೀನು ನಮ್ಮ ಆ ಉಪಕಾರಕ್ಕೆ ಪ್ರತಿ ಉಪ ಕಾರವಾಗಿ ಈ ಕಾಗದಕ್ಕೆ ನಿನ್ನ ಸಹಿ ಬರೆದುಕೊಡುವೆನೆಂದು ಮಾತು ಕೊಡು. ಆ ಮೇಲೆ ನೀನು ನಿನ್ನ ಪತ್ನಿಯನ್ನು ನೋಡುವೆ. ಬೇಕಾ ಗಿದ್ದರೆ, ಈ ಕೆಲಸದಲ್ಲಿ ನಿನಗೆ ಅವಳೂ ಒತ್ತಾಯಪಡಿಸುವಳು.

**ಮಧು:—** ಹಾಗಾಯೇ ಮಾಡುವೆನು, ಪುಣ್ಯಾತ್ಮರೇ! ಆ ನನ್ನ ದೇವಿ ಈ ಕೆಲಸಕ್ಕೆ ಒಪ್ಪಿದರೆ, ಅವಳ ಇದಿರಿನಲ್ಲಿ ಬರೆದುಕೊಡುವೆನು. ನನಗೆ ಮೊದಲು ಅವಳನ್ನು ತೋರಿರಿ.

**ಕಾಳ —** ಎಚ್ಚರಿಕೆಯಿರಲಿ! ಆಮೇಲೆ ಒಲ್ಲೆನೆಂದರೆ ನಿನ್ನ ಮುಂದೆ ಮೊದಲು ನಿನ್ನ ಪತ್ನಿಯಕೊಲೆಯಾಗಿ, ಆ ಮೇಲೆ ಇನ್ನೂ ಹೆಚ್ಚಿನ.. ....

(ಇವರ ಮಾತು ಮುಗಿಯುತ್ತಿದ್ದಾಗಲೇ, ಹೊಂಚಿನಿಂತಿದ್ದ ಭವಾನೀ ಧನ್ವಂತರಿಗಳು ಅಲ್ಲಿಂದ ಮರೆಯಾದರು. ಒಂದೆರಡು ನಿಮೇಷದೊಳ ಗಾಗಿಯೇ ಕಾರಾಗಾರದ ಕಾವಲುಗಾರನು ಓಡಿಬಂದು ಬೆದರಿದವನಂತೆ ನಡುಗುತ್ತ ಕಾಳಮುಖರಿಗೆ ಅಡ್ಡಬಿದ್ದು-' ಅಯ್ಯೋ, ಅಪಾಯ, ಅಪಾಯ, ಪ್ರಾಣಾಪಾಯ, ಸ್ತ್ರೀಹತ್ಯವಾಗುವಂತಿದೆ- ಏಳಿರಿ, ಅಪ್ಪ! ಏಳಿರಿ. ಅಮ್ಮ ನವರು ಸಾಯುತ್ತಿದ್ದಾರೆ. ಬಾಗಿಲು ತೆಗೆದು ನೋಡಬೇಕು.' ಎಂದು ಕೂಗಿ ದನು. ಮಧುಸೂದನಶರ್ಮನು ದೇಹಸ್ಮೃತಿಯಿಲ್ಲದೆ, ಹಾಗೆಯೇ ಎದ್ದು ನಿಂತನು. ಕಾಳಮುಖರೂ ಎದ್ದು ಮಧುಸೂದನಶರ್ಮನನ್ನು ಹಿಡಿದು ಕೊಂಡು, ಕಾವಲುಗಾರರೊಡನೆ ಲಲಿತಾದೇವಿಯಿದ್ದ ಸ್ಥಲಕ್ಕೆಂದು ಹೊರಟರು.

ಶ್ರೀ

# ಸಪ್ತಮ ಪರಿಚ್ಛೇದ.

"ಕಥಮಾರ್ಯಪುತ್ರ. ತದೇನಂ ಪ್ರೇಕ್ಷ್ಯ ಪುನರಪಿ ಮೇ ಜೀವಿತಾಶಾಸಂವೃತ್ತಾ"
(ರತ್ನಾವಳಿ.)

( ಸ್ತುತಿ, ಸಮ್ಮಿಲನ, ಶೋಕ, ವಿಚಾರಣೆ, ವಿಜಯಕೋಲಾಹಲ. )

ತಪಸ್ವಿನೀಯಾದ ಲಲಿತಾದೇವಿ ಕತ್ತಲೆಯ ಕಿರುಮನೆಯಲ್ಲಿ ಒಬ್ಬಳೇ ಕುಳಿತು, ನಾಕ್ಷಾನ್ನಾಗಕನ್ನಿಕೆಯಂತೆ ಮೃದುಕಂಠದಿಂದ ಭಗವತಿಯನ್ನು ಕುರಿತು ಸ್ತುತಿಗೀತೆಯನ್ನು ಮಾಡುತ್ತಿದ್ದಳು.

" ಜೀವೇಯದನ್ನಂ ಸತತಂ ದದಾಸಿ । ನಾಮ್ನಾನ್ನಪೂರ್ಣಾಶುಭದೇ ತತೋಽಸಿ ॥ ತೇನ್ಯವ ತನ್ನಾಮ ಸದಾಸ್ಮರಾಮಿ । ಯೋಗೇಶ್ವರಿ, ತ್ವಾಂ ತತ ಆಶ್ರಯಾಮಿ ॥ ಅಸಾರಸಂಸಾರಸಮುದ್ರಮಧ್ಯೇ । ಭ್ರಾಮ್ಯಂತಿ ಜೀವಾಃ ಕೃತಕಾರ್ಯಬಾಧ್ಯಾಃ ॥ ವೀಕ್ಷ್ಯೇತಿ ಮಾತಃ ಸತತಂ ಬಿಭೇಮಿ । ಯೋಗೇಶ್ವರಿ, ತ್ವಾಂ ತತ ಆಶ್ರಯಾಮಿ ॥ ತ್ವಂ ಭಕ್ತಯೋಗೀಶ್ವರ ಹೃತ್ಸುನಾಸಿ । ತತ್ ಸ್ಥೂಲ ಸೂಕ್ಷ್ಮಾಕೃತಿ ಮೇವಯಾಸಿ । ಶ್ರುತ್ವೇತಿ ತೇ ತತ್ವವಿದಾಂ ವದಾಮಿ । ಯೋಗೇಶ್ವರಿ, ತ್ವಾಂ ತತ ಆಶ್ರಯಾಮಿ " ॥

ಸ್ತುತಿಮಾಡುತ್ತ ಮಾಡುತ್ತ ಲಲಿತಾದೇವಿಯ ಕಂಠವು ಅತ್ಯುಚ್ಚ ಸ್ವರದಲ್ಲಿ ಖೇಚರವ್ಯಾಪಿಯಾಗಿ, ವಾಯುಮಂಡಲದಲ್ಲಿ ಸೇರಿ, ದಶ ದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಗುವಂತಾಯಿತು. ಭೀತಿ, ಚಿಂತಾ, ಕ್ಲೇಶ ಇತ್ಯಾದಿ ವಿಚಾರಗಳಿಂದ ತ್ರಸ್ತಳಾಗಿ ಜೀವಿತದಲ್ಲಿ ನಿರಾಶೆಹೊಂದಿದ್ದ ವಳಿಗೆ ಭವಾನಿಯ ಸಂದರ್ಶನ, ಸಂಭಾಷಣ–ಆಶ್ವಾಸನಾದಿಗಳು ಲಭಿಸಿ, ಪುನಃ ಆಶಾಂಕುರವಾಗಲು ಭಗವದ್ವಿಲಾಸವಿದೆಂದು ತಿಳಿದು ಭಗವಂತನನ್ನು ಧ್ಯಾನಿಸುತ್ತಿದ್ದಂತೆಯೇ ಲಲಿತಾದೇವಿ ಭಕ್ತಿಪಾರವಶ್ಯತೆಯಿಂದ ದೇಹಸ್ಮೃತಿ ಯಿಲ್ಲದೆ, ಕೇವಲ ದೈವೀಶಕ್ತಿಯಿಂದ ಆಕರ್ಷಿಸಲ್ಪಟ್ಟವಳಂತಾಗಿ ಉನ್ಮಾದಿನಿ ಯಂತೆ ಎದ್ದುನಿಂತು, ಕಿರುಮನೆಯ ಬಾಗಿಲ ಬಳಿಗೆ ಬಂದು–'ಬಾಬಾ, ಭಗವತಿ, ಭವಾನಿ, ಭಕ್ತಮಂದಾರಿಣಿ! ಬಾ. ಆಪತ್ತಿಗೆ ಗುರಿಯಾಗಿ

ಅರೆಬಾಯಿ ಬಿಡುತ್ತಿರುವವರ ಕೈಹಿಡಿದು ಕಾಪಿಡು. ಬೇಗಬಾ, ತಾಯಿ, ಮೈದೋರು ಬಾ! ಬಂದೆಯಾ? ಬಾ, ಹೋ-ಹೋ-ಬಂದೆ-ಬಂದೆ ವಿಜಯಕಾಳಿ! ಬಂದೇ ಬಂದೆಯಾ? ಬಾ, ಮುಂದೆ ಬಂದು ನಿಂತಿರುವೆನು. ಎಲ್ಲಿಗೆ ಕರೆದೊಯ್ಯುವೆ? ನಡೆ, ಬೇಗ ನಡೆ, ಹೊರಟುಹೋಗುವ'-ಹಾ! ಹಾ! ಇದೇನನರ್ಥ! ಬಾಗಿಲನ್ನು ಹಾಕಿರುವವರಾರು? ಯಾರೆಲಾ ಪಾಪಿಗಳು? ತೆಗೆಯಿರಿ, ತೆಗೆಯಲೊಲ್ಲಿರೋ? ಹಿಡಿಯಿರಿ, ಶಾಪವನ್ನು ಕೊಡಲೋ? ಭವಾನಿ, ಭವಾನಿ, ಎಲ್ಲಿಹೋದೆ? ಕೈಬಿಟ್ಟು ಹೋದೆಯೋ? ಏನು, ನನ್ನ ಸ್ವಾಮಿಯನ್ನು ಬರಮಾಡುವೆನೆಂದು ಕೊಟ್ಟ ಭರವಸೆ ಇದೇ ಅಹುದೋ? ನಿನಗೂ ಈ ಕೃಪಣತೆಯೋ? ಸಾಕು-ಸಾಕು! ಲಜ್ಜಾಸ್ಪದವಿಚಾರವಿದು! ನನಗೇ ತಲೆ ತಿರುಗುವಂತಿದೆ. ತಾಯಿ! ಹಾಗೆ ಮಾಡಬೇಡ, ಸರಿ-ಸರಿ! ... .. .... ”

ಲಲಿತಾದೇವಿ ಇನ್ನೂ ಹೀಗೆಯೇ ಮನಬಂದಂತೆ ಮಾತನಾಡುತ್ತಲಿರುವಷ್ಟರಲ್ಲಿಯೇ ಕಿರುಮನೆಯ ಬಾಗಿಲು ತೆರೆಯಲ್ಪಟ್ಟು, ಹೊರಗಿನಿಂದ ದೀಪದ ಬೆಳಕು ಕಿರುಮನೆಯೊಳಕ್ಕೆ ಬಿದ್ದಿತು. ಲಲಿತೆಗೆ ಬುದ್ಧಿಸ್ವಾಸ್ಥ್ಯವಿಲ್ಲದಂತಾಗಲು ಹಾಗೆಯೇ ಗೋಡೆಗೆ ಸೇರಿದಂತೆ ಬೀಗಿನಿಂತು ಬಿರಬಿರನೆ ನೋಡಿದಳು. ,

ಕಾರಾಗಾರದ ಕಾವಲುಗಾರನು, ಕೈಯಲ್ಲಿದ್ದ ದೀಪವನ್ನಲ್ಲಿಟ್ಟು, ಲಲಿತಾದೇವಿಯ ಆಗಿನ ನೋಟವನ್ನೂ ನಿಂತಿದ್ದ ರೀತಿಯನ್ನೂ ನೋಡಿ ಭಯಪಟ್ಟು “ಅಯ್ಯಯ್ಯೋ, ಅಮ್ಮಮ್ಮಾ, ಉರಿಮಾರಿ, ಹೆಮ್ಮಾರಿ, ಹೋದೆ-ಹೋದೆ-ಹೋದೆ” ಎಂದು ವಿಕಾರಸ್ವರದಿಂದ ಕೂಗುತ್ತ ಊರ್ಧ್ವಶ್ವಾಸದಿಂದ ಓಡಿಹೋದನು. ಮಧುಸೂದನ ಭಟ್ಟಾಚಾರ್ಯನನ್ನು ಹಿಡಿದು ಕರೆತಂದಿದ್ದ ಕಾಳಮುಖರು ಎಷ್ಟೋ ಕೂಗಿದರು, ಆದರೂ ಕಾವಲಗಾರನು ಅಲ್ಲಿ ನಿಲ್ಲಲಿಲ್ಲ.

ಭಟ್ಟಾಚಾರ್ಯನನ್ನು ಮುಂದುಮಾಡಿಕೊಂಡು, ಕಾಳಮುಖರು ಕಿರುಮನೆಯ ಒಳಹೊಕ್ಕು ಲಲಿತಾದೇವಿಯನ್ನು ಒಂದು ಸಾರಿ ನೋಡಿದರು. ಅವಳ ಆಗಿನ ರೌದ್ರಾವೇಶದ ಭೀಕರವೀಕ್ಷಣದಿಂದ ಇವರ ಎದೆಯಲ್ಲಿ ಡವಡವಗುಟ್ಟತೊಡಗಿತು. ಆದರೂ, ಸ್ವಲ್ಪ ಮಾತ್ರ ಒಂದೆರಡು ಹೆಜ್ಜೆಯಷ್ಟು

ಹಿಮ್ಮೆಟ್ಟಿ ಮೆಲ್ಲನೆ ಭಟ್ಟಾಚಾರ್ಯನನ್ನು ಕುರಿತು—"ಅಯ್ಯಾ, ಬ್ರಾಹ್ಮಣ! ಇಲ್ಲಿನೋಡು, ನಾವು ಹೇಳಿದ ಹೆಂಗಸು, ನಿನ್ನ ಹೆಂಡತಿ ಆಗಿದ್ದರೆ, ಮೊದಲು ಇವಳ ಆವೇಶವನ್ನು ಇಳಿಸಿ ಸಂತೈಸು" ಎಂದು ಹೇಳಿದರು.

ಭಟ್ಟಾಚಾರ್ಯನಿಗೆ ಇನ್ನು ಬುದ್ಧಿ ಸರಿಯಾದ ಸ್ಥಿತಿಗೆ ಬಂದಿರಲಿಲ್ಲ. ಅಲ್ಲದೆ, ಪತ್ನಿಯ ಈ ಯವಸ್ಥೆಯನ್ನು ಕಣ್ಣಾರೆ ನೋಡಿ, ಮರ್ಮಾಂತಿಕ ವೇದನೆಯನ್ನು ತಡೆಯಲಾರದ, ಆತನ ಎರಡು ಕಣ್ಣುಗಳಿಂದಲೂ, ಸಂತತ ಧಾರೆಯಾಗಿ ನೀರು ಸುರಿಯಲಾರಂಭಿಸಲು, ಗಂಟಲು ಕಟ್ಟಿಹೋದಂತಾಗಿ ಕಲ್ಲಿನಂತೆ ಕದಲದೆ ನಿಂತನು. ಲಲಿತಾದೇವಿ ನೋಡಿದಳು, ಕಾಳಮುಖ ರಾಡಿದುದನ್ನೂ ಚೆನ್ನಾಗಿ ಕೇಳಿದಳು. ಪತಿ ತನ್ನನ್ನು ನೋಡಿ ಮೈಮರೆದು ನಿಂತಿರುವನೆಂದೂ ತಿಳಿದಳು. ಕಂಪಿತಸ್ವರದಿಂದ–'ಜೀವನಸರ್ವಸ್ವ! ಮತ್ತೆ ಲಭಿಸಿತೇ ಪಾದಸೇವೆ?' ಎಂದಿಷ್ಟನ್ನು ಹೇಳಿ, ಹಾರಿಬಂದು ಪತಿಯ ಪಾದ ಗಳನ್ನು ಬಲವಾಗಿ ಹಿಡಿದು ತನ್ನ ತಲೆಯನ್ನಿರಿಸಿ, ಕಣ್ಣೀರಿಂದ ಚನ್ನಾಗಿ ನೆನೆಯಿಸಿದಳು.

ಕಾಳಮುಖರು, ಲಲಿತಾದೇವಿಯ ಈ ವ್ಯಾಪಾರವನ್ನು ನೋಡಿ, ಭ್ರಾಂತರಾಗಿ ನಿಂತರು. ಪತ್ನಿ ಆನತೆಯಾದ ಬಳಿಕ ಭಟ್ಟಾಚಾರ್ಯನಿಗೆ ಸ್ಮೃತಿ ಯುಂಟಾಯಿತು. ಕಾಲ್ಗಳನ್ನು ಹಿಡಿದಳುತ್ತಿದ್ದ ಪತ್ನಿಯನ್ನು ತನ್ನೆರಡು ಕೈಯ್ಗಳಿಂದಲೂ ಹಿಡಿದೆತ್ತಿ, ಭರದಿಂದ ಬಿಗಿದಪ್ಪಿ ಮೆಲ್ಲನೆ ಕುಳ್ಳಿರಿಸಿ, ತಾನೂ ಆಕೆಯ ಬಳಿಯಲ್ಲಿಯೇ ಕುಳಿತು, ಅನುಕಂಪಿತಸ್ವರದಿಂದ ಹೀಗೆ ಹೇಳಿದನು. "ಆರ್ಯೆ! ತಪಸ್ವಿನಿಯಾದ ನಿನಗೂ ಈಬಗೆಯ ವನವಾಸ ವಾದುದು ನನ್ನ ದುರ್ದೈವವು. ಸೌಭಾಗ್ಯನಿಧಿಯಾದ ನೀನು ನನ್ನನ್ನು ಬಿಟ್ಟು, ಎಂದು– ಯಾವದಿನ, ಎಂತಹ ದುರ್ಲಗ್ನದಲ್ಲಿ ಹೊರಟೆಯೋ, ಅದೇ ಆ ಗಳಿಗೆಯಿಂದಲೇ, ನಾನು ನಿರ್ಭಾಗ್ಯನಾದೆನು. ಸಂಸಾರಕ್ಕೆ ಸಾರರತ್ನ ವಾದ ನೀನು, ಅನಿರ್ವಾಹ ಪ್ರಸಂಗವೆಂದು ಮನೆಯನ್ನು ಬಿಟ್ಟುಬರಲು, ಮನೆಯ ಸಮಸ್ತರ ಅದೃಷ್ಟಲಿಪಿಗಳೂ ಅಳಿಸಿಹೋದಂತೆಯೇ ಆದುವು. ದೇವಿ! ನಿನ್ನ ವಿಯೋಗವಾದುದರಿಂದ ಇಲ್ಲಿಯವರೆಗೆ ಎಷ್ಟು ಅನರ್ಥ ಗಳುಂಟಾಗಿರುವುವೋ ಹೇಳಲಾರೆ. ಮೊದಲು ನಿಮ್ಮ ಮಾವನವರಿಗೆ–ನಮ್ಮ ಹಿರಿಯರಿಗೆ– ಪರಂಧಾಮ ಪ್ರಾಪ್ತಿಯಾಯಿತು, ಇಲ್ಲಿ ನಿನಗೀಗತಿ ಬಂತು,

ನಿನ್ನನ್ನೇ ಆಶ್ರಯಿಸಿರುವ ವಿದ್ಯಾರ್ಥಿಗಳನ್ನು ಕೇಳುವರೇ ಇಲ್ಲದಂತಾಯಿತು! ನನ್ನ ಸ್ಥಿತಿಯಂತೂ ಜೀವಚ್ಛವ—

ಪತಿಯ ಮುಖವನ್ನೇ ನೋಡುತ್ತ, ಆತನ ಬಾಯಿಂದ ಹೊರಡುತ್ತಿದ್ದ ಮಾತುಗಳನ್ನು ಕೇಳುತ್ತಿದ್ದವಳು, ಮುಂದೆ ತಡೆಯಲಾರದೆ ತನ್ನ ಬಲಗೈಯಿಂದ ಪತಿಯ ಬಾಯನ್ನು ಮುಚ್ಚಿ, ಹೇಳಿದಳು— "ಮುಂದೆ ವಿಷವಾಕ್ಯವೇನನ್ನೂ ಹೇಳಬೇಡಿ, ಈಗ ನನಗೆ ಕ್ಲೇಶವಾಗಲೀ, ಸಂತೋಷವಾಗಲೀ— ಏನೂ ಮನಸ್ಸಿಗೆ ಚೆನ್ನಾಗಿ ಬೋಧೆಯಾಗುವುದಿಲ್ಲ. ಈಗ ನಾನು ಏನಾಗಿರುವನೆಂಬುದೇ ಗೊತ್ತಿಲ್ಲ, ಆದರೂ ಶಾಂತತಾಪ್ರಿಯರಾದ ತಮ್ಮ ಬಳಿಯಲ್ಲಿರುವುದರಿಂದ ನನ್ನ ಇದುವರೆಗಣ ಹೃತ್ತಾಪವೆಲ್ಲವೂ ಶಾಂತಿಯಾಯ್ತೆಂದು ತಿಳಿದಿರುವೆನು. ಮುಂದಿನ ವಿಚಾರಕ್ಕೆ ಇನ್ನೂ—ಇನ್ನೂ—ಬುದ್ಧಿ ನೆಟ್ಟಗಿಲ್ಲ. ...

**ಮಧು** — ಮುಂದಿನ ವಿಚಾರವೇನು, ದೇವಿ! ನನ್ನ—ನಿನ್ನ ಪಾಡು ಹೀಗಾಯಿತು. ಇನ್ನು ನಿನ್ನ ತಂಗಿ, ಮತ್ತು ಮಗು. . ...... .

**ಲಲಿತಾ** — (ತಲೆಯೆತ್ತಿ ನೋಡುತ್ತ ಕೇಳಿದಳು.) ಅವರ ಗತಿಯೇನಾಗಿರುವದು? ಪ್ರದ್ಯುಮ್ನನ ಸ್ಥಿತಿ ಹೇಗಿದೆ?

**ಮಧು:**— (ನಿಟ್ಟುಸಿರುಬಿಟ್ಟು) 'ಅಯ್ಯೋ, ಅದನ್ನೇಕೆ ಹೇಳುವೆ? ನನ್ನನ್ನೇ ನಾನರಿಯದೆ ಹೋಗಿರುವ ವೇಳೆಯಲ್ಲಿ, ಮತ್ತೇನನ್ನು ಹೇಳಲಿ? ಈ ಕಾಳಮುಖರ ಕಬ್ಬಾಳದುರ್ಗದಲ್ಲಿ, ಕತ್ತಲೆಕೋಣೆಯಲ್ಲಿ, ಕೈಕಾಲುಗಳನ್ನಾಡಿಸಲಿಕ್ಕೂ ಅವಕಾಶವಿಲ್ಲದಂತೆ ಜಡನಾಗಿದ್ದ ನನಗೆ ಅವರ ವೃತ್ತಾಂತವೆಲ್ಲವನ್ನೂ ಹೇಳುವರಾರು?... ..... ......

ಇದುವರೆಗೂ ಇವರ ಮಾತುಗಳನ್ನು ಕೇಳುತ್ತ ಭ್ರಾಂತರಾಗಿ ನಿಂತು ನೋಡುತ್ತಿದ್ದ ಕಾಳಮುಖರು, ಮಧುಸೂದನನ ಮಾತಿಗೆ ಮುಳಿದೆದ್ದು— "ಹೂಂ, ಸಾಕಿನ್ನು, ಬ್ರಾಹ್ಮಣ! ನಿಮ್ಮ ಮಾತುಕಥೆಗಳೆಲ್ಲಾ ಆಮೇಲಾಗಲಿ. ಮೊದಲು ನಮ್ಮ ಮಾತನ್ನು ನಡಿಸಿಕೊಡು.

**ಲಲಿತಾ:**— (ಗಂಭೀರಭಾವದಿಂದ—) 'ಅದೇನನ್ನು ಹೇಳಿದಿರಪ್ಪ? ಏನು ಮಾಡಬೇಕು? ನಾವು ಮಾತನಾಡಿದುದು ನಿಮಗೇಕೆ ಸಹನವಾಗಲಿಲ್ಲ? ನಿಮಗೆ, ಪತ್ನೀಪುತ್ರರಾರೂ ಇಲ್ಲವೇ? ನೀವು ಸಂಸಾರಿಕರೇನೂ ಅಲ್ಲವೇ? ನೀವು ನಮಗೆ ಕೊಟ್ಟಿರುವ ಯಮಯಾತನೆಗಳನ್ನೇ—ನಿವಗು

ಮತ್ತ್ಯಾರಾದರೂ ಕೊಟ್ಟಿದ್ದು, ಜೀವದಾಶೆ ತೊರೆದು ಅಳುತ್ತಿದ್ದಾಗ ನಿಮ್ಮ ಹೆಂಡಿರು ಮಕ್ಕಳನ್ನು ಕಂಡರೆ ನೀವು ಏನು ಮಾಡುವಿರಿ. ಹೇಳಿರಿ ?'

**ಕಾಳ:—** ಅಮ್ಮ ಸುಮ್ಮನೆ ಬೈಯಬೇಡ. ನೀನು ನಾವು ಹೇಳಿದಂತೆ ಈ ಕಾಗದಗಳಿಗೆ ನಿನ್ನ ಗಂಡನ ರುಜು ಹಾಕಿಸಿಕೊಡು. ಆ ಬಳಿಕ ನಿಮ್ಮನ್ನು ಈ ಸೆರೆಮನೆಯಿಂದ ಬಿಟ್ಟು ಕಳಿಹಿಸಿಕೊಡುತ್ತೇವೆ. ಆಗ ಬೇಕಾದಲ್ಲಿ ನಿಮ್ಮ ಮನಸ್ಸು ಬಂದಂತೆ ಮಾತನಾಡುವಿರಂತೆ.

**ಲಲಿತಾ:—** 'ಅದಾವ ಕಾಗದಗಳಪ್ಪ ? ಕ್ರಯ ಮತ್ತು ಪ್ರಮಾಣ ಪತ್ರಗಳಲ್ಲವೇ ?

**ಮಧು:—** ಅದಾವುದೋ ಸಾಂಕೇತಿಕ ಚಿಹ್ನೆಗಳಿಂದ ಬರೆದ ಅದೃಷ್ಟಲಿಪಿ. ನನಗೆ ಅರ್ಥವಾಗುವುದಿಲ್ಲ. ಬರೆದವರ, ಬರೆಯಿಸಿಕೊಂಡವರ ಹೆಸರುಗಳಾಗಲೀ, ಊರು–ಕೇರಿ–ಮನೆತನಗಳ ಸೂಚನೆಗಳಾಗಲೀ ಒಂದೂ ಇಲ್ಲ. ಆದರೂ ಇದಕ್ಕೆ ನನ್ನ ಕೈಬರಹವಾಗಬೇಕೆಂದು ಇವರ ನಿರ್ಬಂಧ!

**ಲಲಿತಾ:—** "ಬೇಡವೇ ? ಇದರಿಂದ ಇವರ ಕೈತುಂಬುವಂತಾದರೆ, ಇವರು ಇದನ್ನು ಮಾಡಲು ಬಲಾತ್ಕರಿಸದಿರುವರೇ ?" (ಕಾಳಮುಖರನ್ನು ನೋಡಿ)–'ಅಯ್ಯಾ, ತಳವಾರ–ಕೊತ್ತವಾಲರೇ, ನಿಮ್ಮ ಉದ್ಯೋಗಕ್ಕೆ ಇದೇ ಸಾರ್ಥಕತೆ, ಇದೇ ನಿಮ್ಮ ಜೀವನನಿರ್ವಾಹಕ್ಕೆ ಮುಖ್ಯ ವೃತ್ತಿ! ಅಲ್ಲವೇನಯ್ಯ ? ಹೇಳಿರಿ, ಇದರಿಂದ ನಿಮಗೆ ಪ್ರತಿಫಲವೇನು ಬರುವುದು?

**ಕಾಳ:—** (ಕೌತುಕದಿಂದ ನೋಡುತ್ತ)– 'ಅಮ್ಮಾ, ಹೆಚ್ಚಾಗಿ ಮಾತನಾಡಲು ನಮಗೆ ಅವಕಾಶವಿಲ್ಲ ನೀನು ಯಾವ ಕಾರಣದಿಂದ, ಯಾರ ಹೇಳಿಕೆಯಿಂದ ಹೀಗೆ ಹೇಳುತ್ತಿರುವಿಯೋ ಗೊತ್ತಿಲ್ಲ. ಅಲ್ಲದೆ, ನಿನಗೆ ನಾವು ಇಂತಹರೆಂಬುದು ಹೇಗೆ ತಿಳಿದಿತೋ ಅದುಕೂಡ ಮಂದಟ್ಟಾಗಲಿಲ್ಲ.

**ಲಲಿತಾ:—** ಹೋಹೋ! ಮಂದಟ್ಟಾಗಲಿಲ್ಲ, ಹಾಗಲ್ಲವೇ ? ನಿಜ, ಹೇಗಾದೀತು ? ಮತ್ತೊಬ್ಬರ ಒಡವೆಗೆ ಆಸೆಪಟ್ಟರೆ, ತನ್ನದೇ ಹೋಗುವುದೆಂದು ತಿಳಿದವರಾಗಿದ್ದರೆ, ಉಳಿದ ವಿಚಾರವು ಗೊತ್ತಾಗುತ್ತಿದ್ದಿತು ? ಇರಲಿ, ಈಗಲೂ ಏನೂ ಮುಳುಗಿಹೋಗಲಿಲ್ಲ; ನಾನೇ ಹೇಳುವೆನು. ಕೇಳಿರಪ್ಪಾ–ಚೆನ್ನಾಗಿ ಕೇಳಿ, ತಿಳಿದುಕೊಳ್ಳಿರಿ! ನನ್ನನ್ನು

ಹೆಂಗಸೆಂದು, ಕಾಸಿಗೂ ಕಡೆಯಾದ ಹಳ್ಳಿಗಾಡಿನ ಹೆಂಗಸೆಂದು, ತಿಳಿಯುದಿರಿ ! ನಾನು ಭವಾನಿಯ ಪ್ರಸಾದಕ್ಕೆ ಪಾತ್ರಳಾದವಳು. ನನಗೆ ದೇವೀ ಭವಾನಿ, ಪ್ರಸನ್ನೆಯಾಗಿರುವಳು. ನಿಮ್ಮ ಅಭಿಸಂಧಿಯೆಲ್ಲವನ್ನೂ ನನಗೆ ಅವಳೇ ಹೇಳಿದಳು. ಅದೇನೆಂಬುದನ್ನೂ ಹೇಳಿಯೇ ಬಿಡಲೋ ?

( ಕಾಳಮುಖರು ಏನನ್ನೂ ಹೇಳಲಾರದೆ ವಿಸ್ಮಯ ಕೌತುಕಗಳಿಂದ ಲಲಿತಾದೇವಿಯ ಮುಖವನ್ನೇ ನೋಡತೊಡಗಿದರು.)

**ಮಧು:—** ಭ್ರಾಂತನಾಗಿ– 'ದೇವಿ ! ಸ್ವಾಭಾವಿಕವಾಗಿರುವಿಯಷ್ಟೆ ? ಹೇಳು, ಅಪ್ರಕೃತವಾಗಿ ಒಂದು ಶಬ್ದವನ್ನಾದರೂ ಹೇಳದಿದ್ದ ನೀನು, ಈಗಾಡುತ್ತಿರುವ ಮಾತುಗಳನ್ನು ಕೇಳಿ ಭೀತನಾಗಿರುವೆನು. ದೇಹಸ್ಥಿತಿಯೂ ಬುದ್ಧಿಸ್ಥಿತಿಯೂ ಸರಿಯಾಗಿದೆಯೋ ? ಏನಾದರೂ ವ್ಯತ್ಯಾಸವಾಗಿದೆಯೋ ? ಬೇಗ ಹೇಳು.

**ಲಲಿತಾ —** ( ನಸುನಗೆಯಿಂದ–) 'ಭಯಪಡುವ ಕಾರಣವಿಲ್ಲ, ನಾನು ಸರಿಯಾಗಿಯೇ ಇರುವೆನು. ಆದರೆ ಭವಾನೀದೇವಿಯ ಸಂದರ್ಶನ, ಅಭಯಪ್ರದಾನ, ಆಜ್ಞೆ– ಇವೆಲ್ಲವೂ ಯಥಾರ್ಥವು. ಅದರಿಂದಲೇ ಹೋಗಿದ್ದ ಜೀವಿತಾಶೆ ಪುನರುಜ್ಜೀವಿತವಾಗಿ ನೂತನವಾದ ಶಕ್ತಿಯೊಂದು ತೋರಿ ಧೈರ್ಯವಾಗಿ ಮಾತನಾಡುವಂತೆ ಕುಣಿಸುತ್ತಿರುವುದು. ಇವರ ಒಳಸಂಚೆಲ್ಲವೂ ತಿಳಿದುಬಂದುದರಿಂದ ಆನಂದದಿಂದ ಒಂದೆರಡು ಹೆಚ್ಚಿನ ಮಾತುಗಳು ಹೊರಟವು. ಅಷ್ಟೇಹೊರತು ಭಯಪಡುವಂತಹ ಪ್ರಮಾದವೇನೂ ಆಗಿಲ್ಲ.

**ಮಧು:—** ( ಕುತೂಹಲದಿಂದ–) 'ಭವಾನೀದೇವಿಯನ್ನು ನೀನು ಯಾವಾಗ, ಎಲ್ಲಿ, ಹೇಗೆ, ನೋಡಿದ್ದೆ ?

**ಲಲಿತಾ:—** (ಉತ್ತೇಜಿತ ಸ್ವರದಿಂದ) 'ಈಗ ಎರಡುಗಳಿಗೆಗೆ ಮೊದಲು, ತನ್ನ ಆಪ್ತನೊಡನೆ ಇಲ್ಲಿಗೆ ಈ ಕಿರುಮನೆಯೊಳಗೇ ಬಂದು ನಿಶ್ಚೇತನೆಯಾಗಿ ಒರಗಿದ್ದ ನನ್ನನ್ನು ಎತ್ತಿ ಹಿಡಿದು, ತನ್ನ ದಯಾಮೃತದಿಂದ ನನಗೆ ನವಶಕ್ತಿಯುಂಟಾಗುವಂತೆ ಮಾಡಿ, ತಾನಿಲ್ಲಿಯೇ ಇರುವುದಾಗಿಯೂ, ಈ ರಾತ್ರಿಯೇ ನಮ್ಮನ್ನು ಬಿಡುಗಡೆ ಮಾಡುವುದಾಗಿಯೂ ಹೇಳಿ ಹೋದಳಲ್ಲದೆ, ಮತ್ತೆ ಈಗ ನೀವು ಇಲ್ಲಿಗೆ ಬರಲು ಸ್ವಲ್ಪ ಮುಂಚೆ ತನ್ನ ಸೇವಕ

ಗಣದೊಡನೆ ಬಂದು, ನನ್ನನ್ನು ಎಚ್ಚರಿಸಿ, ಸಂಗತಿಯೆಲ್ಲವನ್ನೂ ಹೇಳಿ, 'ಧೈರ್ಯದಿಂದ ಎದ್ದುನಿಲ್ಲು, ನಿನ್ನ ಪತಿ ನಿನ್ನ ಬಳಿಗೆ ಬರುವರು' ಎಂದು ಹೇಳಿ ಹೊರಟುಹೋದಳು. ಬೇಕೆಂದರೆ ನೀವೂ ನೋಡಬಹುದು.

**ಮಧು:—** ಇದು ಸ್ವಪ್ನವೇ ಅಹುದಷ್ಟೆ?

**ಲಲಿತಾ:—** ಅಲ್ಲಅಲ್ಲ, ಖಂಡಿತವಾಗಿಯೂ ಸ್ವಪ್ನವಲ್ಲ! ಪ್ರತ್ಯಕ್ಷವಾಗಿ ದೇವಿ ಬಂದಿದ್ದಳು. ನಮ್ಮ ಈ ದುಸ್ಥಿತಿಗೆ ಕಾರಣರೂ, ಪ್ರೇರಕರೂ ಕರ್ತೃಗಳೂ ಇಂತಿಂತಹರೆಂದು ಕೂಡ ಹೇಳಿರುವಳು.

**ಕಾಳ.—** (ಅಷ್ಟಕ್ಕೇ ತಡೆದು ಆಗ್ರಹದಿಂದ–) 'ಸಾಕು ಸಾಕು, ಏನು ಹೇಳುವೆ–ಬರಿಯ ಸುಳ್ಳುಸುದ್ದಿ! ಎಲ್ಲವೂ ಅಬದ್ಧದಕಂತೆ! ಅಯ್ಯಾ ಬ್ರಾಹ್ಮಣ! ಇವಳಿಗೆ ಹುಚ್ಚು ಹಿಡಿದಿದೆ! ಹುಚ್ಚಿಯ ಮಾತನ್ನು ನಂಬಿ, ನೀನೂ ಹುಚ್ಚನಾಗಬೇಡ. ಎಚ್ಚರಿಕೆ! ಬೇಗ ಬರೆದುಕೊಡು, ನಾವು ಹೋಗಬೇಕು.

**ಲಲಿತಾ·—** ಇವರಿಗೆ ಆತುರವುಂಟಾಗಿದೆ. ಪಾಪ! ಬೇಗ ಬರೆದು ಕೊಟ್ಟು ಬಿಡಬಹುದಲ್ಲ? ಇದರಿಂದ ನಮಗೇನೂ ನಷ್ಟವಾಗಿ ಹೋಗುವುದಿಲ್ಲ. ನಮ್ಮ ಸ್ವತ್ತು ನಮ್ಮವರನ್ನೇ ಸೇರುವುದೆಂದು ನಾನು ಬಲ್ಲೆ .......

**ಮಧು —** ಅದೇನದು? ಅಷ್ಟಕ್ಕೇ ತಡೆಯೇಕೆ, ಹೇಳಬಾರದೇ? ಒಗಟೆಯನ್ನೇ ಹೇಳುತ್ತಿರುವೆಯಲ್ಲಾ?

**ಲಲಿತಾ:—** ಇಲ್ಲ. ಮುಂದಿನ ವಿಚಾರವನ್ನು ಈ ಪಶುಗಳ ಮುಂದೆ ಹೇಳಬಾರದು. ಅದನ್ನು ಪತ್ರಮುಖದಿಂದ ನಿಮ್ಮ ಜ್ಞಾತಿಬಂಧುವಿಗೆ, ಆ ನಿಮ್ಮ ತೊಡೆಯ ಮೇಲೆ ಬಳೆದ ಕುಮಾರಶೇಖರನಿಗೇ ಬರೆದುಕೊಳ್ಳಬೇಕು. ಇದೇನೂ ಒಗಟೆಯಲ್ಲ, ಅಕ್ಷರಸ್ಥಳಲ್ಲದ ಹೆಂಗಸು ಹೇಳುವುದೇ ಹೀಗೆ, ಹಿಂದು ಮುಂದು. ಹೇಗೂ ವಾಕ್ಯವೇನೋ ಪೂರ್ಣ. ಇನ್ನೂ ಗೊತ್ತಾಗಲಿಲ್ಲವೋ? ಇವರಿಗೆ ಬರೆದು ಕೊಟ್ಟುಬಿಟ್ಟರೆ ಇವರು ಇದನ್ನು ಕೊಂಡುಹೋಗಿ ತಮ್ಮನಿಗೆ ಕೊಟ್ಟು ತೃಪ್ತಿಪಡಿಸಿ, ತಾವೂ ಸನ್ಮಾನ ಹೊಂದಿ ಬರಲಿ!

**ಕಾಳ —** (ವಿಕಾರಸ್ವರದಿಂದ–) 'ಏನು ಹೇಳುವೆ? ಹುಚ್ಚೇನಾದರೂ ಉಂಟಾಯಿತೋ? ಬಾಯಿಗೆ ಬಂದಂತೆಲ್ಲಾ ಕೂಗುತ್ತಿರುವೆ?

ಹೆಂಗಸೆಂದಿದ್ದುದಕ್ಕೆ ಇಷ್ಟು ಹಾರಾಟವೋ? ಜೋಕೆ! ಪ್ರಾಣಾಪಾಯ ವಾದೀತು. (ಎಂದು ಮುಂದಕ್ಕೆ ಅಡಿಯಿಡಹೋದರು.)

**ಲಲಿತಾ.—** (ಕೈಮೇಲಕ್ಕೆತ್ತಿ–) 'ತಾಯಿ, ಭವಾನೀ! ದುರ್ಗಾ, ಲಲಿತಾ, ಅಂಬಾ! ಬಾರಮ್ಮಾ, ಬಾ! ಬರಿಯ ಸುಳ್ಳಂತೆ! ಬಾರೇ, ತಾಯಿ! ಮೇಲೆ ಬೀಳಬರುತ್ತಿರುವರು. ಬಾ, ಬಂದು ನಿಜವನ್ನು ತೋರು.' ಎಂದು ಕೂಗಿದಳು.

ಕಿರುಮನೆಯ ಹೊರಗಡೆಯಿಂದ ಉತ್ತರವು ಹೊರಟಿತು– 'ಇದೋ ಬಂದೆನು.' (ಎಲ್ಲರೂ ತಿರುಗಿ ನೋಡಿದರು. ಭವಾನೀದೇವಿ ತ್ರಿಶೂಲ ಪಾಣಿಯಾಗಿ ಮಂದಹಾಸದಿಂದ ಬಾಗಿಲಮುಂದೆ ನಿಂತಿದ್ದಳು. ಭವಾನಿಯ ಬಳಿಯಲ್ಲಿ ಧನ್ವಂತರಿಯೂ, ಸುತ್ತುಮುತ್ತಲೂ ಕಾರಾಗಾರದಲ್ಲಿ ಸೆರೆ ಯಾಗಿದ್ದ ಹತ್ತಿಪ್ಪತ್ತು ಮಂದಿಗಳೂ ಕಾಣಬಂದರು)

(ಲಲಿತಾದೇವಿ ಸಂಭ್ರಮದಿಂದ ಪತಿಯ ಕೈಹಿಡಿದು) 'ಬಂದಿರುವ ಳಿದೋ ಇಲ್ಲಿಯೇ ಭವಾನಿ! ನಮ್ಮ ಭವಾನಿ! ಈಗಲಾದರೂ ನನ್ನ ಮಾತು ದಿಟವಾಯಿತೇ? ಭವಾನೀದೇವಿ ಪ್ರತ್ಯಕ್ಷವಾಗಿರುವುದನ್ನು ಪ್ರಮಾ ಣಿಸಬಹುದಲ್ಲ!' ಎಂದು ದಿಗ್ಭ್ರಾಂತಿಯಿಂದ ತಾನು ಎಳದಂತೆ ಬರು ವಂತಿದ್ದ ಪತಿಯನ್ನು ಕರೆತಂದು ಭವಾನಿಯ ಮುಂದೆ ನಿಲ್ಲಿಸಿ, ಸಡಗರ ದಿಂದ ಹೀಗೆ ಹೇಳಿದಳು– "ಗುರ್ತಿಸಿ ಹೇಳಲಾದೀತೆ? ಇವಳಾರೆಂದು ಚೆನ್ನಾಗಿನೋಡಿ ಹೇಳಬೇಕು."

**ಮಧು —** ಎಚ್ಚರವಾದಂತಾಗಿ ಕೌತುಕದಿಂದ ಭವಾನಿಯನ್ನು ಒಂದೆರಡು ನಿಮೇಷದವರೆಗೆ ದೃಷ್ಟಿಸಿನೋಡಿ ತಲೆಯೆತ್ತಿ ಮೆಲ್ಲನೆ– 'ಇದೇನು? ನಮ್ಮ ಭವಾನಿಯಲ್ಲವೇ? ವಿಕ್ರಮಕುಮಾರನ...........'

ಭವಾನಿ ನಗುನಗುತ್ತ ಬಂದು–'ಅಹುದು, ಅಣ್ಣಯ್ಯ, ನಾನೇ ಆ ನಿಮ್ಮ ತಂಗಿ ಭವಾನಿ. ಇದೋ ಆಶೀರ್ವಾದ ಮಾಡಿರಿ. ನಮಸ್ಕರಿಸು ವೆನು.' ಎಂದು ಹೇಳುತ್ತ ಮಧುಸೂದನ ಭಟ್ಟಾಚಾರ್ಯನ ಕಾಲ್ಗಳನ್ನು ಹಿಡಿದು ವಂದಿಸಿದಳು.

**ಮಧು:—** (ಭವಾನಿಯ ತಲೆಯನ್ನು ಹಿಡಿದೆತ್ತಿ ಕಂಪಿತಸ್ವರ ದಿಂದ–) 'ತಾಯೀ! ನಾನು ಎಚ್ಚರದಲ್ಲಿರುವೆನೋ–ಹೇಗೆ? ಇದು

ನನಗೆ ಸ್ವಪ್ನದೃಶ್ಯವಲ್ಲವಷ್ಟೆ? ಹೇಳು ತಾಯಿ! ನೀನು ಹೇಗೆ ಬಂದೆ? ಇವರಾರು? ನಿನ್ನಲ್ಲಿ ಇಷ್ಟು ಅದ್ಭುತಶಕ್ತಿಯುಂಟಾದುದು ಹೇಗೆ? ಹೇಳು; ಭ್ರಾಂತನಾಗಿ ಹೋಗಿರುವೆನು.' ಎಂದನು.

**ಭವಾನಿ** — "ಎಲ್ಲವೂ ನಿಜವಾಗಿಯೇ ನಡೆದಿರುವುದು, ಅಣ್ಣಯ್ಯ, ಇವರೆಲ್ಲರೂ ನಿಮ್ಮಂತೆಯೇ ಈ ಕಾಳಮುಖರ ಕೈಸೆರೆಯಾಳುಗಳಾಗಿ, ಬಿದ್ದು ನರಳುತ್ತಿದ್ದವರು, ಮತ್ತು ಮೊದಲು ನಿಮ್ಮ ಮನೆಯಲ್ಲಿ ಸೇರಿ ಕೊಂಡು ಜೀವಿಸುತ್ತಿದ್ದವರು. ನೀವು ಈಗ ಗುರ್ತಿಸಲಾರಿರಿ, ಇರಲಿ. ಕೇಳಿರಿ, ಅಣ್ಣಯ್ಯ, ನಾನು ಸ್ವತಂತ್ರೆಯಲ್ಲ. ಇದುವರೆಗೆ ನನ್ನಿಂದ ಮಾಡಲ್ಪಟ್ಟ ಕಾರ್ಯಗಳಲ್ಲಿ ನನ್ನ ಸ್ವಶಕ್ತಿಯೊಂದಾದರೂ ಇಲ್ಲ. ಎಲ್ಲವೂ ನನ್ನ ಸ್ವಾಮಿಯ ಆಜ್ಞಾಬಲದಿಂದ, ಅವರ ಪ್ರೋತ್ಸಾಹಬಲದಿಂದ, ಗುರುಹಿರಿಯರಾದ ನಿಮ್ಮಗಳ ಆಶೀರ್ವಾದದಿಂದ, ಭಗವತಿಯ ವರಪ್ರಸಾದ ದಿಂದ–ಆದುದು. ನಾನೇನು, ಸೂತ್ರಧಾರರಾಗಿರುವ ಅವರು ಆಡಿಸಿದಂತೆ ಕುಣಿದಾಡುವ ಬೊಂಬೆಯಂತಿರುವಳು ಮಾತ್ರ." ಎಂದು ಹೇಳುತ್ತಿದ್ದಂತೆಯೇ ಒಂದುಬಾರಿ ಬಾಗಿಲ ಕಡೆಗೆ ನೋಟವನ್ನು ತಿರುಗಿಸಿ, ತನ್ನನ್ನೂ ತನ್ನ ಅದ್ಭುತವಾದ ತೇಜಸ್ಸು–ಪರಾಕ್ರಮ–ಸಾಹಸಾದಿಗಳನ್ನೂ ನೋಡಿ ಇದಿರಿಗೆ ನಿಲ್ಲಲಾರದೆ ಬಾಗಿಲ ಮರೆಯಲ್ಲಿ ನಿಂತು ಗಡಗಡನೆ ನಡುಗುತ್ತ, ಕಳೆಗುಂದಿ, ದೈನ್ಯದಿಂದ ನೋಡುತ್ತಿದ್ದ ಕಾಳಮುಖರನ್ನು ಕಂಡಳು, ಧನ್ವಂತರಿಯ ಕಡೆಗೆ ತಿರುಗಿ– 'ಅಪ್ಪ, ಅದೋ ಅಲ್ಲಿ ನೋಡು, ಆ ಬಾಗಿಲ ಮರೆಯಲ್ಲಿ ದಿಕ್ಕೆಟ್ಟ ಪಶುಗಳು ಪಾಪ, ಅಡಗಿ ನೋಡುತ್ತಿರುವುವು. ಹಿಡಿದು ಚಪ್ಪರಿಸಬೇಕಲ್ಲವೇ? ಎಂದಳು.

ಧನ್ವಂತರಿ ನಸುನಗುತ್ತ ಬಂದು ಕಾಳಮುಖರಿಬ್ಬರನ್ನೂ ತನ್ನೆರಡು ಕೈಯ್ಯಗಳಿಂದ ಹಿಡಿದು– 'ಬನ್ನಿರಪ್ಪಾ ಬನ್ನಿರಿ! ನಿಮಗೇನೂ ಪ್ರಾಣಭಯವಿಲ್ಲ; ನಡೆಯಿರಿ. ಇದುವರೆಗೂ ಕಾಡಿನಲ್ಲಿ ಅಲೆದಲೆದು, ಕಳ್ಳತನದಿಂದ ಹೊಟ್ಟೆಯನ್ನು ತುಂಬಿಕೊಳ್ಳುತ್ತಿದ್ದಿರಿ; ಇನ್ನು ಮುಂದೆ ಪಟ್ಟಣದಲ್ಲಿ, ಧೈರ್ಯದಿಂದ ತಿರುಗುತ್ತ ಸುಖದಿಂದಿರುವಿರಿ; ನಡೆಯಿರಿ, ಪಶುಗಳಾದ ನಿಮ್ಮನ್ನು ಕಾಯಲು ಪಶುನಾಯಕನಾದ ಪ್ರಭು ಇಷ್ಟರಲ್ಲಿಯೇ ಬರುವನು; ಬನ್ನಿರಿ, ತಂಟೆಮಾಡಿದರೆ ಫಲವಿಲ್ಲ. ಸದ್ದಿಲ್ಲದೆ, ಸಾಹಸವನ್ನು ತೋರದೆ

ಸುಮ್ಮನೆ ನಿಲ್ಲಿರಿ." ಎಂದು ಹೇಳಿ ಮೂದಲಿಸುತ್ತಿದ್ದನು. ಪಾಪ, ಕಾಳ ಮುಖರಿಗೆ ಅನಿರೀಕ್ಷಿತವಾಗಿ ಬಂದೊದಗಿದ ವಿಪತ್ತನ್ನು ಕಂಡು ಮೊದಲೇ ಭ್ರಾಂತಿ, ಅಸಹಾಯರಾಗಿ ಸಿಕ್ಕುಬಿದ್ದುದುಬೇರೆ, ಮೇಲಾಗಿ ಧನ್ವಂತರಿಯ ವ್ಯಂಗ್ಯೋಕ್ತಿ, ಏನು ಮಾಡುವರು ? ಕದಲದೆ, ಕೆಮ್ಮದೆ, ತಲೆಯೆತ್ತದೆ, ನಿಂತುಬಿಟ್ಟರು

**ಮಧು** — (ಧನ್ವಂತರಿಯನ್ನು ನೋಡಿ, ಸಂತೋಷಾತಿಶಯದಿಂದ ಹಾರಿ ಬಂದು ಆತನ ಕೊರಳಮೇಲೆ ತನ್ನೆಡದ ತೋಳನ್ನಿರಿಸಿ, ಬಲದ ಕೈಯನ್ನು ತನ್ನ ಬಲಗೈಯಿಂದಹಿಡಿದು) ಧನ್ವಂತರಿ, ನನ್ನ-ಪ್ರಾಣಾಧಿಕ ನಾದ ಧನ್ವಂತರಿ, ಸಾರ್ಥಕನಾಮನಾದ-ಮಿತ್ರಮಣಿ ಧನ್ವಂತರಿ, ಈವೇಳೆ ಯಲ್ಲಿ, ಈ ಬೆಂಗಾಡಲ್ಲಿ, ನಿಮ್ಮನ್ನು ಇಲ್ಲಿ ಕಾಣುವೆನೆಂದು ನಾನು ಕನಸಿನ ಲ್ಲಿಯೂ ತಿಳಿದಿರಲಿಲ್ಲ,' ಎಂದನು.

**ಧನ್ವಂತರಿ:** — ( ನಗುತ್ತ ) ' ಮಿತ್ರ, ಮಧುಸೂದನ, ಮನಸ್ಸನ್ನು ಸ್ವಲ್ಪ ತಡೆಗಟ್ಟಿರು. ಥಟ್ಟನೆ ಸಡಿಲಮಾಡಿಬಿಟ್ಟರೆ, ಪ್ರಮಾದವಾದರೂ ಆಗ ಬಹುದು. ಮನಸ್ಸನ್ನು ಅತಿಯಾದ ಸಂತೋಷಕ್ಕೆ ಹೋಗಲು ಬಿಡಬೇಡ. ಇನ್ನೂ ಇದಕ್ಕೂ ಹೆಚ್ಚಾದ ವಿದ್ಯಮಾನಗಳನ್ನು ಇಷ್ಟರಲ್ಲಿ ನೋಡುವೆ ಅದೋ ನೋಡಲ್ಲಿ- ಓಡಿಬರುತ್ತಿರುವನನ್ನು. ' ( ಎಂದು ದೂರದಲ್ಲಿ ಬರು ತ್ತಿದ್ದವನ ಕಡೆಗೆ ಕೈತೋರಿಸಿದನು. ) ಅಷ್ಟರಲ್ಲಿ ದೂರದಿಂದ ಓಡಿಬಂದ ಮರಿಯನು ಸಂಭ್ರಮದಿಂದ ಬಂದು ಭವಾನಿ-ಧನ್ವಂತರಿಯರಿಗೆ ಕೈ ಮುಗಿದು- ' ವಿಜಯವಾಯಿತು. ದುರ್ಗಾದೇವಿಗೆ ಜಯವಾಯಿತು. ನಮ್ಮ ಪ್ರಭು ವಿಕ್ರಮಸೇನ ಮಹಾರಾಜರಿಗೆ ದಿಗ್ವಿಜಯವಾಯಿತು ! ಶುಭ ವರ್ತಮಾನವನ್ನು ತಂದಿರುವೆನು ' ಎಂದನು.

**ಭವಾನಿ** — ಏನು ಸಮಾಚಾರವದು, ಮರಿಯ ?

**ಮರಿಯ:** — ಕಳ್ಳರ ದುರ್ಗದ ಸುತ್ತಮುತ್ತಲ ಪ್ರದೇಶವೂ, ಗುಹೆಯೂ ಬರಿದಾಯಿತು. ಅಲ್ಲಲ್ಲಿ ಅಡಗಿದ್ದವರನ್ನೂ ಹೂತಿಡಲ್ಪಟ್ಟಿದ್ದು ವನ್ನೂ ಕೈವಶಪಡಿಸಿಕೊಂಡರು. ಕಳ್ಳರ ಹೆಂಡಿರು ಮಕ್ಕಳು ಮೊದಲಾಗಿ, ಗುಡಿಸಲುಗಳಲ್ಲಿದ್ದವರೆಲ್ಲರಿಗೂ ಅಭಯಪ್ರದಾನಮಾಡಿ, ಎಲ್ಲರನ್ನೂ ಕರೆ ತರುತ್ತಿರುವರು. ಇಲ್ಲಿಯ ವರ್ತಮಾನವನ್ನು ಕಾವಲುಗಾರನಿಂದ ಈಗಲೇ

ಕೇಳಿದುದರಿಂದ ಮತ್ತೂ ಸಂತೋಷಪಟ್ಟು ನನ್ನನ್ನು ತಮ್ಮಲ್ಲಿಗೆ ಕಳಿಹಿದರು.' ಎಂದು ಹೇಳಿ ದೂರದಲ್ಲಿ ಉಂಟಾದ ಬೆಳಕನ್ನು ತೋರಿಸುತ್ತ ಕೆಲವು ಹೊತ್ತು ಕಿವಿಕೊಟ್ಟು ಕೇಳುತ್ತಿದ್ದು ಸಂಭ್ರಮದಿಂದ ಕೈಮೇಲ ಕ್ಕೆತ್ತಿ–' ಅದೋ-ಕೇಳಿರಿ, ನೋಡಿರಿ-ನೋಡಿರಿ ಅದೇ ಜಯಘೋಷ, ಮತ್ತು ವಿಜಯವಾದ್ಯಗಳು. ಅದೇ-ಅದೇ ನೋಡಿರಿ. ನೂರಾರು ದೀವಟಿಗೆಗಳು. ಬಂದರು, ಬಂದರು, ಪ್ರಭುಗಳು ಬಂದರು!' ಎಂದು ಕುಣಿಯುತ್ತ ಹೇಳಿದನು.

ಎಲ್ಲರೂ ಕೌತುಕದಿಂದ ನೋಡುತ್ತಿದ್ದರು. ಸದ್ದಿಲ್ಲದೆ ಕಾಲನಡೆಯಿಂದಲೇ ನಡೆತಂದ ತ್ರಿಮೂರ್ತಿಗಳು ಇವರ ಮುಂದೆ ನಿಂತರು. ಮರಿಯನು ಕೈಮೇಲಕ್ಕೆತ್ತಿ ' ವಿಕ್ರಮಸೇನಮಹಾರಾಜರಿಗೆ ವಿಜಯವು!' ಎಂದನು. ವಿಕ್ರಮನ ಬಲಗಡೆಯಲ್ಲಿ ನಿಂತಿದ್ದ ದುರ್ಗಾಪ್ರಸಾದನು ಎಡಗಡೆಯಲ್ಲಿದ್ದ ಕಮಲಾಕಾಂತನನ್ನು ಕುರಿತು ' ಭೈರವಮೂರ್ತಿ! ಭವಾನೀದೇವಿಗೆ ವಾತ್ಸಲ್ಯವೆಷ್ಟಿದೆ ನೋಡಿದೆಯಾ? ನೋಡು, ಅಪರಾಧಿಗಳನ್ನು ಕೂಡ, ಹೆತ್ತ ಮಕ್ಕಳಂತೆ ಆದರಿಸುತ್ತಿರುವಳು! ಇನ್ನು ಆಶ್ರಯವನ್ನು ಬೇಡುವ ಭಕ್ತರ ವಿಷಯದಲ್ಲಿ ಕೇಳಬೇಕೇ?' ಎಂದು ಭವಾನಿಯನ್ನು ಕುರಿತು ' ತಾಯಿ, ಹಿಂದೆ ನಾನು ಹೇಳಿದುದಕ್ಕೆ ಹೊಸತಾದ ಮರ್‍ಯಾದೆಯೆಂದೆಯಲ್ಲವೇ? ಈಗಲೋ? ಈಗಲೂ ನನ್ನನ್ನು ಹೊಗಳುವ ಭಟ್ಟನೆಂದಾಗಲೀ, ವಂದಿಮಾಗಧರ ಗುಂಪಿಗೆ ಸೇರತಕ್ಕವನೆಂದಾಗಲೀ ಹೇಳುವೆಯೋ? ಆದರೆ ನೋಡು, ನಿನ್ನನ್ನು ಹೊಗಳುತ್ತಿರುವರು ನಾನೊಬ್ಬನಲ್ಲ, ಹಲವರಿರುವರು.' ಎಂದನು.

**ಭವಾನಿ:**—( ಗಂಭೀರವಾಗಿ ) ' ನಮ್ಮವರೇ ನಮ್ಮನ್ನು ಇಷ್ಟು ಮುಖಸ್ತುತಿ ಮಾಡುತ್ತಿರುವುದಾದರೆ, ಉಳಿದವರಿಗೆ ಹೇಳುವುದೇನು? ಹೆಂಗಸರು ಹೇಗೂ ಪತ್ಯಾಜ್ಞಾನುವರ್ತಿನಿಯರು. ಅವರನ್ನು ಹೊಗಳುವುದಾಗಲೀ, ದೂಷಿಸುವುದಾಗಲೀ, ಅವರ ಅಭಿಮಾನ–ದ್ವೇಷಗಳನ್ನೇ ಅವಲಂಬಿಸಿರುವುದು. ( ವಿಕ್ರಮನ ಕಡೆಗೆ ತಿರುಗಿ ) ಇದು ಚಿತ್ತಕ್ಕೆ ಬಂದೇ ಇರುವುದಲ್ಲವೇ?'

**ವಿಕ್ರಮ:**—( ನಗುತ್ತ ) ' ಮಹಾಮಹೋಪಾಧ್ಯಾಯರೇ, ಶಿಷ್ಯ

ನಾದ ವಾಮನಗೋಸ್ವಾಮಿ ಬ್ರಹ್ಮಚಾರಿ ಇದೋ ಅಭಿವಂದಿಸುವನು.' ಎಂದು ಹೇಳಿ ನಮಸ್ಕರಿಸಿದನು. ಮಧುಸೂದನನು ಮರುಮಾತಿಲ್ಲದೆ ವಿಕ್ರಮನನ್ನು ಅಪ್ಪಿಕೊಂಡು, ಆನಂದಬಾಷ್ಪವನ್ನು ಸುರಿಸಿದನು. ಅದೇ ವೇಳೆಯಲ್ಲಿಯೇ ಜಯಘೋಷದಿಂದಲೂ, ಹಲವು ದೀವಟಿಗೆಗಳಿಂದಲೂ ವಿಜಯಕೋಲಾಹಲ ಮಾಡುತ್ತ ಬಂದ ವಿಕ್ರಮಸೇನನ ಆಜ್ಞಾಧಾರಕರು ಅಲ್ಲಿಗೆ ಬಂದು ಕೈಮುಗಿದು ಮೊರೆದರು.

ಇತಿ ದ್ವಿತೀಯ ಭಾಗವು.

ಶ್ರೀ:

# ತೃತೀಯ ಭಾಗ

## ಪ್ರಥಮ ಪರಿಚ್ಛೇದ.

---

'ಭರ್ತಾರಂ ನನು ಮೋಹಾದ್ಯ ಹಸ್ತುಮರ್ಹಸಿ ಮಾನದ,
..... . .. . .. .. .. .. .. .. . . ..
ಸತ್ಯವಾಗ್ಭವ ರಾಜೇಂದ್ರ ಮಾಮವೇಕ್ಷಸ್ವ ಯಾಚತೀಮ್ ।
ತ್ವಯ್ಯಾಽಪ್ಯುಕ್ತಂ ಮಹಾರಾಜ ನಭೇತವ್ಯ ಮಿತಿಸ್ವಯಮ್॥'
(ಉತ್ತರ ರಾಮಾಯಣ)

(ಪರಿತಾಪ, ಪ್ರಣಯಭಿಕ್ಷೆ, ನಮ್ರಪ್ರಾರ್ಥನೆ ಇತ್ಯಾದಿ)

"ಅಯ್ಯೋ, ಅಪ್ಪಾ-ತಡೆಯಲಾರೆನೊ, ದೇವರೇ! ಪಾರುಮಾಡು, ಪಾಪಿಯನ್ನು ಈ ನರಕದಿಂದ ಪಾರುಮಾಡು. ಹಾ, ಹಾ, ತಪ್ಪಿದೆನು; ಎಚ್ಚರಿಕೆಯಿಂದಿರದೆ ಬುದ್ಧಿ ತಪ್ಪಿದೆನು, ಪಾಪಿಯಾದೆನು. ಕರ್ತವ್ಯದಕ್ಷತೆಯನ್ನು ವಹಿಸದೆ, ಪ್ರಾಣಾಪತ್ತಿಗೆ, ಅಯ್ಯೋ, ನನ್ನ ಪ್ರಾಣ ಹೋಗಿದ್ದರೆ, ಎಷ್ಟೋ ಚೆನ್ನಾಗುತ್ತಿತ್ತು. ಅದರಿಂದ ನನಗೆ ಸುಖವೂ ಆಗುತ್ತಿದ್ದಿತು. ಇಲ್ಲ, ನನ್ನ ಪ್ರಾಣಹೋಗಲಿಲ್ಲ. ಹಾ, ಹಾ, ಹಾ, ನನ್ನ ಹೊಟ್ಟೆಯೇ, ಹಾಳು ಹೊಟ್ಟೆಯೇ, ದುರ್ಗುಣದ ಮೊಟ್ಟೆಯಾದೆಯಾ? ಮಿಾಸಲೆತ್ತಿ ಪಡೆದ ಮಗುವನ್ನು ಅಯ್ಯೋ— ಚಿನ್ನದಂತಿದ್ದ ಮಗುವನ್ನು ಕಳೆದುಕೊಂಡು, ಇನ್ನೂ ನಾನಿರಬೇಕೇ? ಇನ್ನಾವ ಸುಖಕ್ಕಾಗಿ ನಾನೀ ಭೂಮಿಯಲ್ಲಿ ವಾಸಮಾಡಬೇಕು? ಮೊದಲೇ ಪತಿಯ ಉದಾಸೀನಕ್ಕೆ ಕಾರಣಳಾಗಿದ್ದೆ; ಪತಿಸುಖದಿಂದ ವಂಚಿತೆಯಾಗಿದ್ದೆ-ಅಯ್ಯೋ-ತಪ್ಪಿದೆ, ಪಾಪಿ, ನಾನೇ-ನನ್ನ ದುರ್ಬುದ್ಧಿಯಿಂದಲೇ, ದುರಭಿಮಾನದ ಕೇಣತನದಿಂದಲೇ ಆ ಸುಖಕ್ಕೆ ಹೊರಗಾಗಿದ್ದೆನು. ಅವರನ್ನು, ಆ ಸ್ವಾಮಿಯನ್ನು, ದೇವರಿಗೆ ಸಮಾನರಾದ ಅವರನ್ನು ನಾನು-ನಾನು ಮನಸ್ಸಿಂದಾದರೂ ದೂರಬಹುದೇ? ಅಯ್ಯೋ, ನನಗೆಂತಹ ನರಕಯಾತನೆ, ನನಗೆ ಮತ್ತಾವ ನರಕನಿರ್ಮಾಣವಾಗಬೇಕು!

ದೇವರೇ? ಪಶ್ಚಾತ್ತಾಪದಿಂದ ಉರಿದುಹೋಗುತ್ತಿರುವ ನನ್ನನ್ನು, ಈ ದೀನ-ಹೀನ ಪಾತಕಿಯನ್ನು ಉದ್ಧರಿಸು- ಪಾರು ಮಾಡು. ದಯಾಮಯ! ಪತಿತಪಾವನನಲ್ಲವೇ ನೀನು? ಪತಿದ್ರೋಹಿಣಿಯಾದ, ಪುತ್ರಘಾತಕಿಯಾದ, ಕಠಿನಹೃದಯೆಯಾದ ನನ್ನನ್ನು ಇನ್ನಾದರೂ ನಿನ್ನಲ್ಲಿಗೆ ಸೇರಿಸಿಕೊಳ್ಳಲಾರೆಯಾ? ಇಲ್ಲ-ಇಲ್ಲ-ಇಲ್ಲ! ನೀನು ಸೇರಿಸಿಕೊಳ್ಳಲಾರೆ! ನಿನಗೆ ದ್ವೇಷ್ಯನಾಗಲೀ ಪ್ರಿಯನಾಗಲೀ ಇಲ್ಲ. ನೀನು ಕೇವಲ ಸಾಕ್ಷೀಭೂತ ನೆನ್ನುವರು. ನಮ್ಮ ಕರ್ಮವೇ ನಮ್ಮನ್ನು ತಿನ್ನುವಂತೆ ಮಾಡಿರುವೆ. ಅಜ್ಞಾನ-ಅವಿವೇಕಾಂಧತೆಯ ಜಡರೋಗಿಯೆಂದು ನನ್ನನ್ನು ನೀನು ಮನ್ನಿಸಲಾರೆ! ಆದರೆ, ಅಯ್ಯೋ! ದೇವರೇ, ನಾನೇನು ಮಾಡಲಿ? ವಿದ್ಯಾವಿನಯಾದಿಗಳೆಲ್ಲವನ್ನೂ ನನ್ನ ತಾಯಿ ತಂದೆಗಳು ನನಗೆ ಕಲಿಸಿದ್ದರು. ಆದರೂ, ಮನಸ್ಥೈರ್ಯವನ್ನೂ ಸಾರಾಸಾರ ವಿಮರ್ಶನಾದಕ್ಷತೆಯನ್ನೂ ನನಗುಂಟುಮಾಡುವಷ್ಟರ ಜಿತಬುದ್ಧಿಯನ್ನು ಮಾತ್ರ ಕೃಪೆಮಾಡಿಕೊಡಲಿಲ್ಲ. ಹಾಗೆ ಅವರು ನನಗೆ ಅದನ್ನು ಉಂಟುಮಾಡಿಕೊಟ್ಟಿದ್ದರೆ, ನಾನಾಗಲೇ ಎಚ್ಚತ್ತು ನನ್ನ ಅಂತಸ್ತಿಗೆ ತಕ್ಕಷ್ಟು ಕೆಲಸಗಳನ್ನು ಮಾಡಿಯೇ ನಿಲ್ಲುತ್ತಿದ್ದೆನು. ಹಾಗಾಗಲಿಲ್ಲ. ಈಗ ಬುದ್ಧಿಹೊಳೆಯುತ್ತಿದೆ! ಏಕೆ? ಸತ್ತಬಳಿಕ, ಸುಖಭೋಗ ಸಂಪದದ-ಜೀವನಸರ್ವಸ್ವದ-ಆಶೆ ತೀರಿದ ಬಳಿಕ, ಇನ್ನು ಅದು ಬಂದರೇನು-ಬಿಟ್ಟರೇನು? ಹಾಹಾ, ಹೋದೆನು. ಅಯ್ಯೋ, ಪ್ರದ್ಯುಮ್ನ— ನನ್ನ ಮುದ್ದಿನ ಪ್ರದ್ಯುಮ್ನ, ಎಲ್ಲಿರುವೆಯಪ್ಪಾ? ದೊರೆ, ನನ್ನ ಚಿನ್ನ, ನೀನೆಲ್ಲಿರುವೆ? ತಂದೆಯ ಬಳಿಗಾದರೂ ಹೋಗಿರುವೆಯಾ? ಅಯ್ಯೋ, ಅಯ್ಯೋ ಅವರೇನಾದರೋ- ಎಲ್ಲಿ ಹೋದರೋ ಹೇಳುವವರಾರು?"

ಕಲ್ಯಾಣನಗರದ ಊರಹೊರಗಿನ ದೊಡ್ಡದೊಂದು ಬಂಗಲೆಯ ನಡುವಣಂಗಳದ ಕಿರುಮನೆಯೊಂದರಿಂದ ಮೇಲೆ ಹೇಳಿದಂತೆ ಹಂಬಲಿಕೆಯು ಕೇಳಬರುತ್ತಿದ್ದಿತು. "ಒಳಗೆ ಅಳುತ್ತಿದ್ದವರಾರು? ಅದಾರ ಮನೆ? ಯಾರಿರುವರು? ಬೀದಿಯಲ್ಲಿ ಇಬ್ಬರು ಪೋಲೀಸರಲ್ಲದೆ ಮತ್ತಾರೂ ಇಲ್ಲ. ಮನೆಬಾಗಲಿಗೆ ಹೊರಗಡೆ ಬೀಗವನ್ನು ಹಾಕಿರುವುದು. ಮನೆಯೊಳಗಿನ ಕಿರುಮನೆಯಲ್ಲಿ, ಚಾಪೆಯ ಮೇಲೆ, ಒಬ್ಬಳೇ ಕುಳಿತು,

ಹೀಗೆ ವಿಕಾರಸ್ವರದಿಂದ ಭಯಂಕರವಾಗಿ ಅಳುತ್ತಿರುವ ಈ ಕೃಶಾಂಗಿ ಯಾದರೂ ಯಾರು ? ಧೂಳೀಧೂಸರಿತಗಾತ್ರೆಯು, ಈ ಮಾಸಿದ-ಜಡೆ ಕಟ್ಟಿದ ಕೇಶರಾಶಿ, ಹೀಗೆ ಸಂಸ್ಕಾರವಿಲ್ಲದೆ, ತಪಸ್ವಿನಿಯರ-ಪತಿಯೋಗಿನಿ ಯರ-ಮುಡಿಯಂತೆ ಮುಡಿಕಟ್ಟಿರುವ ಕಾರಣವೇನು ? ಇವಳೇಕೆ, ಹೀಗೆ, ಇಲ್ಲಿ ಅಳುತ್ತಿರುವಳು ? " ಎಂಬ ವಿಚಾರಗಳು ನಮ್ಮ ಪಾಠಕರ ಹೃದಯದಲ್ಲಿ ಉಂಟಾಗಿರಬಹುದು. ಇವಳೇ ನಮ್ಮ ಭಟ್ಟಾಚಾರ್ಯರ ದ್ವಿತೀಯಪತ್ನಿ-ಪ್ರಮದಾದೇವಿ. " ಇವಳ ಈ ದುಸ್ಸ್ಥಿತಿಗೆ ಕಾರಣರಾರು ? ಇಲ್ಲಿಗೆ ತಾನಾಗಿ ಬಂದಳೋ ? ಹೇಗೆ ? " ಸುಮ್ಮನೆ ತಳಮಳಿಸಲೇಕೆ ? ಒಂದೆರಡುಗಳಿಗೆ ನಿಲ್ಲಿರಿ, 'ಹೋ, ಇದೇನು ? ಕದವನ್ನು ತೆಗೆದವರಾರು? ಅದಾರು-ಒಳಗೆ ಬಂದಪುರುಷವ್ಯಕ್ತಿ ?' ಸರಿಸರಿ ! ಈಗ ತಿಳಿದೆವು. ಇವನೇ ಮಧುಕರನು.

" ಏಕೆ, ಇಲ್ಲಿಗೆ, ಇಷ್ಟು ಹೊತ್ತಿನಲ್ಲಿ, ಇಷ್ಟು ಸಲಿಗೆಯಿಂದ ಬಂದನು ? ಏನು ಮಾಡಬೇಕೆಂದು ಬಂದನು ? " ಯಾರಿಗೆ ಗೊತ್ತು ? " ಪ್ರಮದಾ ! ಪ್ರಮದಾದೇವಿ ! ಎಚ್ಚತ್ತಿರು ! ಕರ್ತವ್ಯದಲ್ಲಿ ಎಚ್ಚತ್ತಿರು. ಜಾಗ್ರದವಸ್ಥೆಯಿಂದ ವಿಷಮಾವಸ್ಥೆಯನ್ನು ಬಿಟ್ಟು, ಅಭ್ಯುದಯವನ್ನು ಹೊಂದಲು ಮೇಲಕ್ಕೇಳು. " ಎಂದು ನಾವಾದರೂ ಪ್ರಮದೆಯನ್ನು ಎಚ್ಚರಿಸಬೇಕಲ್ಲವೇ ? ಪಾಠಕರೇ ! ಇದೇನು ? ಪ್ರಮದೆ, ಇನ್ನೂ ನೆಲದ ಮೇಲೆ ಮಲಗಿಯೇ ಇರುವಳು ? ಮೈಮೇಲೆ ಎಚ್ಚರದಪ್ಪಿರು ವಳೇ ? ಆಹಾ ! ಅಡ್ಡಿಯಿಲ್ಲದೆ ಹಾಗೆಯೇ ಸರಿ. ಇರಲಿ.

ಮಧುಕರನು ಕಿರುಮನೆಯೊಳಹೊಕ್ಕು ಕೆಳಗೆ ಬಿದ್ದಿದ್ದ ಪ್ರಮದೆ ಯನ್ನು ನೋಡಿ, ಹತ್ತಿರಕ್ಕೆ ಬಂದು ಕುಳಿತು ಅವಳ ಕೈಹಿಡಿದುಕೊಂಡನು;- ಪ್ರೀತಿವ್ಯಂಜಕ ಸ್ವರದಿಂದ-' ಪ್ರಮದಾ ಪ್ರಮದಾ, ಏಳು, ಮೇಲಕ್ಕೇಳು, ಹೀಗೇಕೆ ?' ಎಂದು ಕೇಳಿದನು. ಮಧುಕರನ ಹಸ್ತಸ್ಪರ್ಶದಿಂದ, ಪ್ರಮದೆಗೆ ಎಚ್ಚರವಾಯಿತು; ಕಾಲಕುಳಿತದಿಂದ ಕೆರಳುವ ಕೃಷ್ಣಸರ್ಪ ದಂತೆ ಮಧುಕರನನ್ನು ಬಿರುಗಣ್ಣಿಂದ ನೋಡಿ, ಕೈಯನ್ನೆಳೆದುಕೊಂಡು ದೂರದಲ್ಲಿ ಕುಳಿತಳು.

ಮಧುಕರನು ಹುಚ್ಚನಂತೆ ಮೊಣಕಾಲೂರಿ, ಕೈನೀಡಿ,- 'ಪ್ರಮದಾ!

ಇನ್ನೂ ಹರವನ್ನು ಬಿಡಲಿಲ್ಲವೇ? ಇಷ್ಟುದಿನವಾದರೂ ನನ್ನ ಮೇಲೆ ಕಟಾಕ್ಷವನ್ನು ಬೀರಲೊಲ್ಲೆಯಾ? ನಿನ್ನ ಪೂರ್ವದ ಸ್ನೇಹ, ಬಾಂಧವ್ಯ, ಆ ಸಲಿಗೆ ಅವೆಲ್ಲವೂ ಎಲ್ಲಿ ಹೋದುವು? ಈಗಲಾದರೂ ಹೇಳು.' ಎಂದನು.

**ಪ್ರಮದೆ** — (ನಿಟ್ಟುಸಿರುಬಿಟ್ಟು-) 'ಹೇಳು, ಹೆಚ್ಚುಮಾತನ್ನು ಕೇಳಲಾರೆನು. ನಾನಾವಿಧದ ಶೋಕತಾಪಗಳಿಂದ ದಗ್ಧಹೃದಯೆಯಾಗಿರುವೆನು. ನನ್ನ ಮಾಂಗಲ್ಯಭಾಗ್ಯವೇನಾದರೂ ಉಳಿದಿರುವುದೋ ಅಳಿಸಿ ಹೋಯಿತೋ? ಅಷ್ಟು ಮಾತ್ರವನ್ನು ಹೇಳಿ, ಹೊರಟು ಹೋಗು-

**ಮಧುಕರ.** — (ಕೌತುಕದಿಂದ-) 'ಏಕೆ-ಪ್ರಮದೆ? ನಿನ್ನೆಯವರೆಗೆ ನನ್ನನ್ನು ಕಂಡಾಗಲೆಲ್ಲಾ ನಿನ್ನ ಮಗನ ವಿಚಾರವಾಗಿಯೂ ಕೇಳುತ್ತಿದ್ದೆ, ಒಂದುಬಾರಿಯಾದರೂ ಇಷ್ಟು ವೈರಾಗ್ಯದಿಂದ, ಕೇವಲ ಪತಿಯ ಮಾತನ್ನು ಮಾತ್ರವೇ ತೆಗೆದು ಹೀಗೆ ಕುಳಿತಿರಲಿಲ್ಲ. ಇಂದೇಕೆ ಹೀಗೆ? ಯಾರ ಬೋಧನೆಯಾದರೂ ಆಯಿತೇನು? ಹೇಳು, ನನ್ನಲ್ಲಿ ಇಷ್ಟು ಆಗ್ರಹಕ್ಕೆ ....

**ಪ್ರಮದೆ** — "ಮಧುಕರ! ನಾನು ಈಗ ಏನನ್ನೂ ಹೇಳಲಾರೆನು. ನಿನ್ನನ್ನು ತಿರಸ್ಕರಿಸುವದಕ್ಕಾಗಲೀ, ಆಗ್ರಹಿಸುವುದಕ್ಕಾಗಲೀ ನನಗೆ ಅಧಿಕಾರವಿಲ್ಲ. ಈಗ ನನ್ನನ್ನು ನಾನೇ ತಿರಸ್ಕರಿಸುತ್ತಿರುವೆನು. ಮಧುಕರ, ಕೈಮುಗಿದು ಕೇಳಿಕೊಳ್ಳುವೆನು; ಹೇಳು,-ನನ್ನ ಸ್ವಾಮಿ, (ಕ್ಲೇಶಾಧಿಕ್ಯದಿಂದಲೂ ಪಶ್ಚಾತ್ತಾಪದಿಂದಲೂ ಕಣ್ಣೀರು ತುಂಬಿ, ಗದ್ಗದಸ್ವರದಿಂದ) ಅವಿಶ್ವಾಸಿನಿಯಾದ ನಾನು ಸ್ವಾಮಿಯೆಂದು ಹೇಳಿಕೊಳ್ಳುವುದಕ್ಕೂ ಅರ್ಹಳಾಗಿರಲಿಲ್ಲ,-ಅವರೇ ನನಗೆ ಸ್ವಾಮಿ-ಗುರು, ದೇವರು, ಸರ್ವಸ್ವವು-ಎಂದು ಈಗ ತಿಳಿದುಕೊಂಡಿರುವುದರಿಂದ, ಆ ನನ್ನ ಸ್ವಾಮಿಯ ವಿಚಾರವೊಂದನ್ನು ಮಾತ್ರ ನನಗೆ ಕೇಳಲಪೇಕ್ಷೆಯುಂಟಾಗಿದೆ. ಹೇಳು, ಮಧುಕರ, ದಯೆಯಿಟ್ಟು ಹೇಳು. ಅವರನ್ನೇನು ಮಾಡಿರುವೆ? ಉಳಿಸಿರುವೆಯೋ-ಇಲ್ಲವೋ? ಸ್ತ್ರೀವ್ಯಾಮೋಹವೆಂಬುದೇ ಪಾಪಿ, ಅದರ ಆವೇಶದಿಂದ ನೀನೂ ಕೊಲೆಗೇಡಿಯಾಗಿ ಬಂದಿರುತ್ತೀಯೆಂದು ಶಂಕಿಸುತ್ತಿದ್ದೇನೆ. ಹೇಳು, ಅಪ್ಪ, ಅಷ್ಟುಮಾತ್ರವನ್ನು ಮಾಡು. ಈಗ ನನಗೆ ಮಗನು

ಬೇಡ, ತಾಯಿತಂದೆಗಳ–ಅಯ್ಯೋ, ಅವರ ನಿರ್ದಯೆ–ಆಶಾಪರತೆಗಳ ಫಲವೂ, ಅವರ–ಅನೀತಿ ಶಿಕ್ಷಣವೂ ನನ್ನನ್ನು ಈ ದೆಸೆಗೆ ತಂದೊಡ್ಡಿರುವುದ ರಿಂದ ಅವರು ಎಷ್ಟೇ ಪೂಜ್ಯರಾಗಿದ್ದರೂ ನನಗೆ ಈಗ ಅವರು ಶತ್ರುಗಳೇ ಸರಿ. ಇನ್ನು ಅಂತಹರ ವಿಚಾರವಾದರೂ ನನಗೇಕೆ ? (ನಿಟ್ಟುಸಿರುಬಿಟ್ಟು) ಅಯ್ಯೋ, ಮಧುಕರ, ಆಕೆ, ಆ ನನ್ನ ಅಕ್ಕ ಲಲಿತಾದೇವಿಯನ್ನೆಂತೂ ನೀವೆಲ್ಲರೂ ಸೇರಿ ಕಡಿದೇಹಾಕಿರುವಿರಿ, ಬಲ್ಲೆ, ಆ ತಾಯಿ ಉಳಿದಿದ್ದರೆ, ನನ್ನ ಈ ದುರವಸ್ಥೆ ಆಗಲೇ ಪರಿಹಾರವಾಗುತ್ತಿದ್ದಿತು. ಇಲ್ಲ. ಎಲ್ಲಕ್ಕೂ, ನನ್ನ ಸುಖವೆಲ್ಲಕ್ಕೂ ನೀನೇ ಅಂಗಾರಕನಾಗಿ ಬಂದೆಯಲ್ಲವೆ ? ಮಧುಕರ, ನಿನಗೆ ನಾನೇನು ದ್ರೋಹವನ್ನು ಮಾಡಿದೆನು ? ನಿನ್ನನ್ನು ನನ್ನ ಕಣ್ಣು–ಕೈಕಾಲುಗಳಿಗೂ ಹೆಚ್ಚಾಗಿ ವಿಶ್ವಾಸಿಸುತ್ತಿದ್ದುದೇ ನನ್ನ ತಪ್ಪಾಯಿತೇ ? ಅಪ್ಪ ! ಇದಕ್ಕಲ್ಲವೇ–ನನಗೀಪ್ರತೀಕಾರ? ಪರಮಹಿತೈಷಿಣಿಯೂ ಗುರುವೂ ಆಗಿದ್ದ ಆ ಲಲಿತಾ ದೇವಿಯನ್ನು ಕಾಡುಪಾಲು ಮಾಡಿಸಿದೆ ! ಆ ಪರಮಾತ್ಮ ಸ್ವರೂಪನಾದ ಪತಿಯನ್ನು, ಅದೆಲ್ಲಿ–ಆವ ಕ್ರೂರಮೃಗದ ಬಾಯಿಗೋ ಗುರಿಮಾಡಿದೆ. ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಕಡಿಸಿಹಾಕಿದೆ. ಇಷ್ಟು ಸಾಲದೆ ನನ್ನನ್ನು ಇಲ್ಲಿ, ಈ ಕಾಡಿನಲ್ಲಿ ಸೆರೆಯಿಟ್ಟು ಗೋಳಿಡಿಸುತ್ತಿರುವೆ ? ಇದೇಕೆ ನಿನಗೀ ನಿಷ್ಕರತೆ ? ಅಪ್ಪ, ಬೇಡ, ಮಧುಕರ, ಇನ್ನು ಕಠಿನತೆ ಬೇಡ...............

ಮಧುಕರನು ತಲೆಯೆತ್ತಿ ನೋಡಿದನು, ಪ್ರಮದೆಯ ಭಯಂಕರ ವಾದ ಮಿಶ್ರವರ್ಣಯುಕ್ತವಾದ ಮುಖವನ್ನೂ ಕೆಂಪಾಗಿರುವ ಮುಖದ ಆ ಕಣ್ಣುಗಳ ನೋಟವನ್ನೂ, ಕುಳಿತಿರುವ ಸ್ಥಿತಿಯನ್ನೂ ಕಂಡು ನಡು ಗಿದನು; ಮೆಲ್ಲನೆ ಹೇಳಿದನು. 'ಪ್ರಮದೆ ! ಸುಮ್ಮನೆ ಕೆರಳಬೇಡ. ನಿನ್ನ ಈ ಸ್ಥಿತಿಗೆ ನಾನೇ ಕಾರಣನೆಂದಿದ್ದರೆ, ಆ ನಿನ್ನ ಊಹೆ ತಪ್ಪಾಗುವುದು. ಇವಕ್ಕೆ ನಾನೊಬ್ಬನೇ ಕಾರಣನಲ್ಲ. ನೋಡು; ಪ್ರಮದೆ ! ಮೊದಲು ನಿನ್ನ ತಾಯಿತಂದೆಗಳು,–ತಾಯಿತಂದೆಗಳಿಲ್ಲದೆ ಅನಾಥನಾಗಿದ್ದ ನನ್ನನ್ನು ಅಕ್ಕರೆಯಿಂದ ಕಾಪಾಡಿದರು; ಅವರು ನಮ್ಮಿಬ್ಬರನ್ನೂ ಆಡುಪಾಡುವು ದಕ್ಕೂ, ಓದುಬರೆಹಗಳ ಅಭ್ಯಾಸಕ್ಕೂ, ತಿಂದು ತೇಗಿಕೂಗಿ ತಿರುತಿರುಗಿ ನಲಿದಾಡುವುದಕ್ಕೂ ಒಂದೇ ಕಡೆಯಲ್ಲಿ ಇರಿಸಿಕೊಂಡಿದ್ದರು. ಅದೇನೂ

ಅಷ್ಟು ಭಾಧಕವಾಗುತ್ತಿರಲಿಲ್ಲವೆಂದರೂ, ಅವರು ಬುದ್ಧಿತಿಳಿದ ನಮ್ಮನ್ನು ಮೊದಲಿನಿಂದಲೂ ನೀವೇ ಗಂಡಹೆಂಡಿರೆಂದೂ, ಒಬ್ಬರನ್ನೊಬ್ಬರು ಚೆನ್ನಾಗಿ ಹೊಂದಿಕೊಂಡು ಸಂಸಾರವನ್ನು ಮಾಡುತ್ತಿರಬೇಕೆಂದೂ, ಇನ್ನೂ ಹಲವು ಬಗೆಯಾಗಿ ಹೇಳಿ, ನಮ್ಮಿಬ್ಬರಲ್ಲಿ ಪರಸ್ಪರ ಪ್ರೀತಿಯನ್ನು ಹೆಚ್ಚಿಸುವಂತೆ ಮಾಡಿದುದೇ ಇಷ್ಟಕ್ಕೂ ಮೂಲಕಾರಣವು. ಅದರಮೇಲೆ ನೀನು ಮದುವೆ ಯಾಗಿ, ಇಲ್ಲಿಗೆ ಬಂದ ಬಳಿಕ ನನ್ನ ಕಾಗದಕ್ಕೆ ಉತ್ತರವಾಗಿ ಬರೆದ ಕಾಗ ದದಲ್ಲಿ, ಆ ನಿನ್ನ ಅಂದಿನ ಮನೋಭಾವವು ನನ್ನಲ್ಲಿ ಹೇಗೆ ಭದ್ರವಾಗಿ ತ್ತೆಂಬುದನ್ನು ನಾನು ಮನಗಂಡೆನೋ, ಅದೇ ಈ ನನ್ನ ಕಾರ್ಯಕ್ಕೆ ಉತ್ತೇ ಜನಕಾರಿಯಾಗಿ ತಿರುಗಿತು. ಹೀಗೆ ನನ್ನ ಮನಸ್ತಾಪಕ್ಕೂ, ನಿನ್ನ ಇಂದಿನ ಪರಿತಾಪಕ್ಕೂ ನೀವೇ ಮೂಲಕಾರಣರಾಗಿದ್ದೀರಿ. ಪ್ರಮದೆ, ಮತ್ತೂ ಹೇಳುವೆನು ಕೇಳು. ನಾನು ನಿನ್ನಲ್ಲಿ ಸ್ವಲ್ಪವೂ ಕಾಠಿಣ್ಯವನ್ನು ತೋರಿಲ್ಲ. ನಿನ್ನ ಪ್ರೀತಿಯೊಂದನ್ನು ಪಡೆವುದಕ್ಕಾಗಿ, ನಾನು ನನ್ನ ಇತರ ಸಮಸ್ತ ಸುಖ ಸಾಧನಗಳನ್ನೂ ತೊರೆದು ಇಲ್ಲಿಗೆ ಬಂದನು. ಅದಕ್ಕಾಗಿಯೇ ನಿನ್ನ ಮಗ ನನ್ನು ಅಪಮೃತ್ಯುವಿನ ಬಾಯಿಗೆ ತುತ್ತಾಗದಂತೆ ಕಾಪಿಟ್ಟುಕೊಂಡು ಬಂದಿರುವೆನು. ಇನ್ನೂ ಹೇಳುವೆನು ಕೇಳು, ನಿನ್ನ ಪತಿ ಮತ್ತು ಸವತಿ ಯರನ್ನು ಕೂಡ ಪ್ರಾಣದಿಂದುಳಿಹಿರುವೆನು. ಅದಕ್ಕೆ ಪ್ರತಿಯಾಗಿ ನಾನು ನಿನ್ನ ಪ್ರಣಯಭಿಕ್ಷೆಯನ್ನು ಮಾತ್ರವೇ ಕೇಳಿಕೊಳ್ಳುತ್ತಿರುವೆನು. ನೀನು ಸಮ್ಮತಿಸುವುದಾದರೆ, ಈ ಕ್ಷಣದಲ್ಲಿ, ನಿನ್ನ ಗಂಡನನ್ನೂ ಕರೆಯಿಸುವೆನು. ನೀನು ನಮ್ಮಿಬ್ಬರಲ್ಲಿಯೂ,................

ಪ್ರಮದೆ ಎದ್ದುನಿಂತು ದೈನ್ಯದಿಂದ ಕೈಮುಗಿದು—'ಅಪ್ಪ, ಸಾಕು ಮಾಡು. ನನ್ನ ಆತ್ಮಸಮಾಧಾನಕ್ಕೆ ನಾನೇ—ನನ್ನ ಬುದ್ಧಿಯೇ ಕಂಟಕ ವಾಯಿತಲ್ಲದೆ ಆ ನನ್ನ ಬಾಲ್ಯಚಾಪಲ್ಯವೇ ನಿನ್ನ ಸುಖಕ್ಕೂ ಮೃತ್ಯು ವಾಗಿ ತಿರುಗಿತೆಂದು ಬಲ್ಲೆನು. ಅದಕ್ಕಾಗಿಯೇ ಈಗ ನಾನು, ನಿನ್ನಿಂದ ಈ ದೆಸೆಗೆ ತರಲ್ಪಟ್ಟಿದ್ದರೂ, ನಿನ್ನನ್ನು ಬಯ್ಯುವುದಿಲ್ಲ. ನೀನು ನನಗೆ ಎಷ್ಟೋ ವೇಳೆಗಳಲ್ಲಿ, ಆ ನನ್ನ ಬಾಲ್ಯದ ಹಲವು ಗಂಡಾಂತರಗಳಿಂದ ನನ್ನನ್ನು ಕಾಪಾಡಿರುವುದನ್ನು ನಾನು ಮರೆತಿಲ್ಲ. ಆದರೆ ಇಷ್ಟನ್ನು ಕೇಳಿ ಕೊಳ್ಳುವೆನು.

ಮಧುಕರ! ಕ್ಷಮಿಸು; ನಾನೂ ನಿನ್ನ ಒಡಹುಟ್ಟಿದವಳಾಗಿದ್ದರೆ, ನಿನ್ನೊಡನೆ ಬಾಲ್ಯದಲ್ಲಿ ಆಡುತ್ತಿರಲಿಲ್ಲವೇ? ಹಾಗೆಂದೇ ತಿಳಿದು, ಈಗ ನನ್ನನ್ನು ಕ್ಷಮಿಸು. ನಡೆದುದು ನಡೆದೇ ಹೋಯಿತು. ಇನ್ನು ನಾನು ಈ ಪಶ್ಚಾತ್ತಾಪಾಗ್ನಿಯಲ್ಲಿ ಹೆಚ್ಚುಕಾಲವಿರಲಾರೆನು. ಒಂದು ಸಾರಿ, ನನ್ನ ಅಂತ್ಯಕಾಲಕ್ಕಾದರೂ ನನಗೆ ಆ ಪ್ರಭುದರ್ಶನವನ್ನು ನೀನು ಮಾಡಿಸಿಕೊಟ್ಟಿಯಾದರೆ, ಅವರ ಪಾದದಲ್ಲಿ ಬಿದ್ದು ನನ್ನ ಮನಃಕಷಾಯವನ್ನೆಲ್ಲಾ ವಿವರಿಸಿ, ಅವರ ಕ್ಷಮೆಯನ್ನೂ ಬೇಡಿ, ಸುಖವಾಗಿ ಪ್ರಾಣಬಿಡುವೆನು. ಇನ್ನಿದರ ಮೇಲೆ ನಾನೇನು ಹೇಳಲಿ? ಮಧುಕರ, ಆ ನನ್ನ ಪ್ರದ್ಯುಮ್ನನು ಜೀವಿಸಿದ್ದರೆ, ಅವನನ್ನು ಅವನ ತಂದೆಯ ಕಾಲಮೇಲೊಪ್ಪಿಸಲಾದರೆ............

ಪ್ರಮದೆಗೆ ಮುಂದೆ ಮಾತನಾಡಲು ಆಗಲಿಲ್ಲ. ಸುಮ್ಮನೆ ಗೋಡೆಗೆ ಮುಖವಿಟ್ಟು ಅಳುತ್ತ ನಿಂತಳು. ಮಧುಕರನೂ ಅನುಕಂಪದಿಂದ ನಡುಗುತ್ತ ಕಣ್ಣೀರನ್ನು ಸುರಿಸತೊಡಗಿದನು. ಆವೇಳೆಯಲ್ಲಿ ಇಬ್ಬರೂ ಮಾತನಾಡಲಾರದಿದ್ದರು.

ಅದೇ ಸಮಯದಲ್ಲಿ ಮೇಲಿಂದ ಚಾವಣಿಯ ಮೇಲಿನ ಸಂದಿಯಿಂದ ಮಡಿಸಿದ ಕಾಗದವು ಪ್ರಮದೆಯ ತಲೆಯಮೇಲೆ ಬಿದ್ದಿತು. ಪ್ರಮದೆ ಯೆಚ್ಚತ್ತು ಕಾಗದವನ್ನು ಕೈಕೊಂಡು ಬಿಚ್ಚಿ ಓದಿದಳು. ಅದರಲ್ಲಿ ಹೀಗೆ ಬರೆದಿದ್ದಿತು.—

"ಅತ್ತಿಗೆ, ಅಳಬೇಕಾಗಿಲ್ಲ; ನಗುವಕಾಲವಿದು! ನಿನ್ನ ತಾಯಿ ತಂದೆಗಳು ಮಧುಕರನ ಪತ್ನಿಯೊಡನೆ ಇಷ್ಟರಲ್ಲಿ ಬರುವರು. ನಿನ್ನ ಮಗನು ಚಿರಾಯುವೆಂದು ತಿಳಿ. ನಿನ್ನ ಸ್ವಾಮಿ ಸತ್ಯಸಂಧನಾದುದರಿಂದ ಪರಿಭವದ ಭೀತಿಗೆ ಕಾರಣವಿಲ್ಲ. ಮಧುಕರನನ್ನು ಈಗ ಕ್ಷಮಿಸಿ ಕಳಿಹು, ಶುಭವಾಗುವುದು."

ಪ್ರಮದೆ ಭ್ರಾಂತಿಯಿಂದ ಕಾಗದವನ್ನು ಮಧುಕರನ ಮುಂದೆ ಎಸೆದು— "ಅಪ್ಪ, ಅದೇನೆಂದು ಓದಿ—ತಿಳಿದುಕೊಂಡು ನನ್ನನ್ನು ಬಿಟ್ಟುಹೋಗು. ಇನ್ನು ಸಾಕು. ಮಧುಕರ, ನಾನಿನ್ನು ಅರ್ಧನಿಮಿಷವಾದರೂ ನಿಲ್ಲಲಾರೆನು" ಎಂದಳು.

ಮಧುಕರನು ಕಾಗದವನ್ನು ಕೈಗೆ ತೆಗೆದುಕೊಂಡು ಓದಿ ನೋಡಿ,

ಭೀತನಾದನು. "ಏನು ಸಮಾಚಾರ? ಬರೆದವರಾರು? ಹೇಳಿದವರಾರು?" ಎಂದು ಹೇಳುತ್ತ ಪ್ರಮದೆಯನ್ನು ನುಡಿಯಿಸದೆಯೇ ಅಲ್ಲಿಂದೆದ್ದು ಹೊರಗೆ ಬಂದು ಬಾಗಲಿಗೆ ಬೀಗವನ್ನು ಹಾಕಿ, ಸುತ್ತಲೂ ನೋಡಿದನು. ಯಾರೂ ಇರಲಿಲ್ಲ. ವಿಚಾರಿಸಿದನು—ತಿಳಿಯಲಿಲ್ಲ. ಮುಂದೋರದೆ, ಮಾತಿಲ್ಲದೆ, ಹುಚ್ಚನಂತೆ ಅದೆಲ್ಲಿಗೋ, ಆರನ್ನೋ ಹುಡುಕಲು ಹೊರಟುಹೋದನು.

———

ಶ್ರೀ:

# ದ್ವಿತೀಯ ಪರಿಚ್ಛೇದ.

" ರಾಮೇಣಯದಿತೇಪಾಪೇ ಕಿಂಚಿತ್ಕೃತಮಶೋಭನಮ್ ||
ಅಪರಾಧಃಕ ಇಹ ತೇ ವೈದೇಹ್ಯಾದರ್ಶಿತೋ ऽಧಮೇ||
(ರಾಮಾಯಣ)

( ದುರಾಶೆ—ಆಗ್ರಹ—ವಿವೇಕಬೋಧೆ—ಪಶ್ಚಾತ್ತಾಪ—ಕೊಲೆ—ಆತ್ಮಘಾತ ಇತ್ಯಾದಿ. )

"ಅದೇಕೆ, ವಿಶಾಲಾಕ್ಷಿ, ಈ ಮಗುವನ್ನು ಕಂಡರೆ, ಹೀಗೆ ಉರಿದುರಿದು ಬೀಳುವೆ? ಪಾಪ, ನಿನಗೆ ಇದೇನು ತಪ್ಪುಮಾಡಿತು? ನಿನ್ನ ಮಕ್ಕಳು ಇದಕ್ಕೂ ಹೆಚ್ಚಿನ ಗುಣವಂತರೋ?"

"ಸಾಕು, ನಿಮ್ಮ ಈ ತರ್ಕವನ್ನು ನಾನು ಕೇಳಲಿಲ್ಲ ಹಾಳು ಕೂಸು. ಶನಿಕಾಟದ ಕೂಸು, ಇನ್ನೂ ಇದಕ್ಕೆ ವೇಳೆಬಂದಿಲ್ಲ ಇದನ್ನು ಕಟ್ಟಿಕೊಂಡು ಹಗಲೂ ಇರುಳೂ ಅಳುತ್ತಿರಬೇಕು. ಹೊಟ್ಟೆಯಲ್ಲಿ ಹುಟ್ಟಿದುದಕ್ಕೂ ಇದೇ ಹೆಚ್ಚು—ಅಲ್ಲವೇ? ಜೊತೆಯಲ್ಲಿ ಕುಳ್ಳಿರಿಸಿಕೊಂಡು ಉಣಿಸಿ, ಜೊತೆಯಲ್ಲಿಯೇ ಮಲಗಿಸಿಕೊಳ್ಳಬೇಕು. ಹೊರಗೆ ಹೊರಟರೆ ಅದೂ ಜೊತೆಯಲ್ಲಿಯೇ ಬರಬೇಕು............"

"ಸಾಕು ಸಾಕು. ಸುಮ್ಮನೇ ಹಾರಾಡಬೇಡ. ಈ ಕೂಸು

ನಿನಗೆ ಶನಿಯುಂಟಾಯ್ತಲ್ಲವೇ ? ನಿಜ. ನಿನಗೆ ಇದರಲ್ಲಿ ಇಷ್ಟು ಪ್ರೀತಿಯಿರುವದೆಂದರಿತುದರಿಂದಲೇ ನಾನು ನಿನ್ನನ್ನು ನಂಬಿ ಇದನ್ನು ನಿನ್ನ ವಶಕ್ಕೆ ಬಿಟ್ಟೆಲ್ಲ, ಕೇಳಿದೆಯೋ ? ಇದರ ಸ್ವತ್ತಿನಿಂದಲೇ ನೀನೂ, ನಿನ್ನ ಮಕ್ಕಳೂ, ನಿನ್ನ ಒಡಹುಟ್ಟಿದವರು, ಹೆತ್ತವರು, ನಂಟರು, ಇಷ್ಟರು, ಮೊದಲಾಗಿ ನಿನ್ನ ಕಡೆಯವರೆಲ್ಲರೂ ತಿಂದು ತೇಗಿ ಕೊಂಡುಹೋಗುತ್ತಿರುವುದಿಲ್ಲವೇ ? ಇಷ್ಟೆಲ್ಲಕ್ಕೂ ಕಾರಣವಾದ ಇದರಲ್ಲಿ ನೀನು ಹೀಗೆ ದ್ರೋಹವನ್ನೇ ಚಿಂತಿಸುತ್ತಿರುವುದು ಸರಿಯೇ ? ದೊಡ್ಡವರಲ್ಲಿ ದ್ವೇಷ ಮಾಡುವುದಕ್ಕೂ, ಒಂದಿಲ್ಲ–ಒಂದು ಕಾರಣವೆಂದು ಹೇಳಬಹುದು. ಆದರೆ, ಈ ಕೂಸು–ಪಾಪ, ಈ ಹಾಲುಕಂದನೇನು ಮಾಡೀತು ?

"ಸಾಕು ಸಾಕು, ಕೇಳಲಾರೆನು. ಹೊಟ್ಟೆಯುರಿದು ಹೋಗುತ್ತಿದೆ. ಮೊದಮೊದಲು ಇದರ ದೊಡ್ಡವರು ಶತ್ರುಗಳಾಗಿದ್ದರು, ಈಗ ಇದೊಂದು ಮೊಳಕೆಯಾಯಿತು. ಇದನ್ನು ಇನ್ನಾವಾಗ ಪರಿಹಾರ ಮಾಡುವನೋ ಕಾಣೆನು. ಹಾಳಾಗಲಿ, ಶನಿ, ಇದಕ್ಕಿನ್ನು ಮುಂದೆ ಒಂದು ತುತ್ತು ಅನ್ನವನ್ನಾದರೂ ನಾನು ಹಾಕುವಳಲ್ಲ."

ಈ ಬಗೆಯ ಉತ್ತರಪ್ರತ್ಯುತ್ತರಗಳು ಕಲ್ಯಾಣನಗರದ ಸಾಹುಕಾರ ಬೀದಿಯ ಮಧ್ಯದ ಮಾಳಿಗೆ ಮನೆಯ ಅಡಿಗೆಯುಮನೆಯಲ್ಲಿ, ಗಂಡಹೆಂಡಿರ ಮಾತುಗಳಾಗಿದ್ದವು. ಪುರುಷನು ನಮ್ಮ ಮಧುಸೂದನಭಟ್ಟಾಚಾರ್ಯನನ್ನೇ ಹೋಲುವ ರೂಪವುಳ್ಳವನಾಗಿದ್ದನು. ಅಲ್ಲದೆ, ನಿದ್ರಿಸುತ್ತಿದ್ದ ಪ್ರಮದೆಯ ಮಗನನ್ನು (ಪ್ರದ್ಯುಮ್ನಕುಮಾರನನ್ನು) ಹೆಗಲಮೇಲೊರಗಿಸಿ ಕೊಂಡಿದ್ದನು. ಈ ಕಾರಣಗಳಿಂದ ಈತನೇ ಹಿಂದೆ ಹೇಳಲ್ಪಟ್ಟಿದ್ದ ಕುಮಾರಶೇಖರನೆಂದೂ ಈತನ ಹೆಂಡತಿ ಈ ತ್ರಿಪುರಸುಂದರಿಯೇ 'ವಿಶಾಲಾಕ್ಷಿ' ಯೆಂಬುವಳೆಂದೂ ನಿರ್ಧರವಾಗಿ ಹೇಳುವಂತಿದ್ದಿತು. ಇವಳಿಗೆ ಮದುವೆಗೊದಗಿರುವ ಹೆಣ್ಣು, ಅದರ ಹಿಂದಿನದೊಂದು ಗಂಡು–ಈ ಎರಡು ಮಕ್ಕಳಲ್ಲದೆ ಉಳಿದುವು ಸತ್ತುಹೋಗಿದ್ದುವು. ಇವರ ಸಂಭಾಷಣೆಯ ಕಾಲದಲ್ಲಿ ಹುಡುಗಿಯೂ ಹುಡಗನೂ ಅಂಗಳದಲ್ಲಿ ಓದುತ್ತಿದ್ದರು. ಇವಳ ಗುಣಸ್ವಭಾವಗಳನ್ನು ವಿವರಿಸಬೇಕಾದರೆ, ಮೇಲಿನ ಮಾತೇ ಸಾಕಾಗಿರುವುದು. ಇರಲಿ, ವಿಶಾಲಾಕ್ಷಿ ಒಲೆಯ ಮುಂದೆ ಕುಳಿತು ಕೈಯಿಂದ

ಸೌಟನ್ನು ತಿರುಗಿಸುತ್ತ, ಗಂಡನ ಹೆಗಲಮೇಲಿದ್ದ ಪ್ರದ್ಯುಮ್ನನ ಕಡೆಗೆ ಅಡಿಗಡಿಗೂ ತನ್ನ ಕ್ರೂರದೃಷ್ಟಿಯನ್ನು, ಬೀರುತ್ತಿದ್ದಳು. ಪಾಪ! ಅದನ್ನೇನು ಮಾಡಬೇಕೆಂದು ಹಾಗೆ ನೋಡುತ್ತಿದ್ದಳೋ ಗೊತ್ತಿಲ್ಲ.

ಕುಮಾರಶೇಖರನು ಮತ್ತೆ ಹೀಗೆ ಕೇಳಿದನು–'ಹೇಳು, ನಿನ್ನ ಮಕ್ಕಳಲ್ಲಿ ಇದೂ ಒಂದೆಂದು ತಿಳಿದು ಅಕ್ಕರೆಯಿಂದ ಉಣಲಿಕ್ಕುವೆಯೋ, ಇಲ್ಲವೋ? ಕೂಸಿಗೆ ಪಾಪ! ಅದೇನು ಕಾರಣವೋ ಜ್ವರವು ಬಂದಿದೆ....'

**ವಿಶಾ:—** ಹೋಗಲಿ, ಬೇಗ ಹಾಳಾಗಿ ಹೋದರೆ, ಸುಖಿಯಾದೇನು? ಯಾವಾಗಲೂ ಅದನ್ನು ಕಟ್ಟಿಕೊಂಡು ಅಳುತ್ತಿರುವ ನಿಮ್ಮ ಪಾಡನ್ನು ನೋಡಲಾರೆನು. ಅದನ್ನು ಎಲ್ಲಿಯಾದರೂ ಎಸೆದುಬಂದರಾಗದೋ? "ಕೂಸು, ಕೂಸು, ಕೂಸು! ಯಾವಾಗ ನೋಡಿದರೂ ಹಾಳು ಕೂಸಿನ ಹಂಬಲೇ ಹಂಬಲು!"

**ಕುಮಾರ:—** (ಉಕ್ಕಿಬರುತ್ತಿದ್ದ ಕೋಪವನ್ನು ತಡೆದು) "ಹಾಗೂ ಆಗಲಿ, ಎಸೆದು–ಇಲ್ಲವೆ ಮತ್ತೇನನ್ನಾದರೂ ಮಾಡಿ ಬಂದೆನೆಂದೇ ಭಾವಿಸು; ಅದರಿಂದ ನಿನಗೇನು ಲಾಭವಾಯ್ತೆಂದು ತಿಳಿವೆ?" ಎಂದನು.

**ವಿಶಾ** — ಲಾಭವೇನು, ಅಲ್ಪಸ್ವಲ್ಪವೆಂದು ತಿಳಿದಿರೋ? ಇದರ ಹೆಸರಿಲ್ಲದಂತಾಗಿ ಹೋದರೆ, ಇದರ ತಂದೆಯ ಅಪಾರವಾದ ಆಸ್ತಿಗೆಲ್ಲಾ ಒಡೆಯರಾರು? ನೀವಲ್ಲವೋ? ನೀವೇ ಆದ ಬಳಿಕ, ನಿಮ್ಮ ಮಕ್ಕಳಿಗೂ ಮಿಕ್ಕವರಿಗೂ.... .. ....'

**ಕುಮಾರ:—** ಆಗಲಿ, ನಾನೇ ಒಡೆಯನಾಗುವೆನೆಂದೂ ಭಾವಿಸಿಕೋ, ಅಷ್ಟಕ್ಕೇ ನಿಮಗೇನು? ನನ್ನ ಸಂಪತ್ತಿಗೆ ನೀವೇ ಭಾಗಿಗಳೋ?

**ವಿಶಾ** — 'ನಾವಲ್ಲದೆ ಮತ್ತಿನ್ನಾರು? ಎಲ್ಲಕ್ಕೂ ನಾವೇ ಸರಿ.'

**ಕುಮಾರ.—** ನಾನೇ ನಿಮಗೆ ಕೊಡದೆ ಬೇರೆ ಮಾರ್ಗದಲ್ಲಿ ವಿನಿಯೋಗಿಸಿದರೋ?

**ವಿಶಾ:—** ಹಾಗಾದರೂ ನಮಗೆ ಹೋಗುವುದಿಲ್ಲ; ಚೆನ್ನಾಗಿ ತಿಳಿದಿರಲಿ! ಒಂದುವೇಳೆ, ನೀವು ಅದನ್ನು ಮನಬಂದಂತೆ ವೆಚ್ಚಮಾಡಿದಿರೆಂದರೆ ನಾನದನ್ನು ನಿಮ್ಮಿಂದ ತಪ್ಪಿಸಿ.... . ......

**ಕುಮಾರ:—** ಓಹೋ! ಈಗಲೇ ಅಷ್ಟುದೂರ ಹಾರಬೇಡ.

ಇನ್ನೂ ಅದರ ಕರ್ತರು ಸತ್ತುಹೋಗಿಲ್ಲ. ಎಲ್ಲರೂ ಜೀವಿಸಿದ್ದಾರೆ.

**ವಿಶಾ —** ( ಸೌಟನ್ನು ಕೆಳಗೆಸೆದು ತಲೆಯೆತ್ತಿ–) " ಏನು ? ಏನೆಂದಿರಿ ? ಇನ್ನೂ ಇದ್ದಾರೆಯೇ ? ಇನ್ನೂ ಅವರನ್ನು ಉಳಿಸಿರುವಿರೇ ? ಸಾಕು, ಸಾಕು, ಕೇಳಲಾರೆನು. ನಿಮ್ಮ ಬುದ್ಧಿಯನ್ನು ಕೇಳಲಾರೆನು; ಇನ್ನು ಸಂಪತ್ತಿನ ಆಸೆ ತೊಲಗಿದಂತೆಯೇ ಸರಿ " ಎಂದಳು.

**ಕುಮಾರ:—** ಇದ್ದಾರೆ, ಸತ್ತಿಲ್ಲ. ಅವರ ಆಸ್ತಿಯನ್ನು ಮಾತ್ರವೇ ನೀನು ಕೋರಿದೆ, ಅದಕ್ಕಾಗಿ ನನ್ನನ್ನು ಇಲ್ಲಿಯವರೆಗೂ ಕಪಿಯಂತೆ ಕುಣಿಸಿದೆ, ನಾನೂ ನಿನಗಾಗಿ ಆ ಅಪಾರವಾದ ಆಸ್ತಿಗಳಿಗೆ ಗುರಿಯಿಟ್ಟು ಅವರ ಪ್ರಾಣವನ್ನು ತೆಗೆಯಿಸಲಾರದೆ ಹೆಣಗಾಡುತ್ತಿರುವೆನು.

**ವಿಶಾ:—** " ನಿಮಗೇಕೆ, ಈ ವಿಪರೀತಬುದ್ಧಿಯುಂಟಾಯಿತು ? ಈ ದಯೆಯೇಕೆ ? ನಿಮ್ಮ ಪಾಲಿನದನ್ನೂ ತಾವೇ ತಿಂದು ಹಾಕಿದುದಕ್ಕಾಗಿ ಅವರಿಗೆ ಈ ದಯೆಯೋ ? ಮಧುಕರನು ನಿಮಗೆ ಬೋಧಿಸಿರುವುದೂ ಇದನ್ನೇನೋ ? ಸಾಕು; ಷಂಡರಾದ ನಿಮ್ಮನ್ನು ಕೈಹಿಡಿದ ನನ್ನ ದೌರ್ಭಾಗ್ಯವು ಇಷ್ಟಕ್ಕೇ ಸಾಕು. ಹೊರಟುಹೋಗಿರಿ, ನನ್ನ ಮುಂದೆ ನಿಲ್ಲಬೇಡಿರಿ. ಅವರನ್ನೇ ಕೇಳಿ ತಿರಿದು ಜೀವಿಸಿರಿ." ಎಂದು ಎದ್ದು ನಿಂತು ಅಬ್ಬರಿಸಿದಳು.

**ಕುಮಾರ —** ಉರಿಮಾರಿ ! ಬಾಯಿಮುಚ್ಚು, ನಾನಾಗಲೀ ಮಧುಕರನಾಗಲೀ ಅವರ ಪ್ರಾಣಗಳನ್ನು ತೆಗೆಯಬೇಕೆಂದಿಲ್ಲ. ನನ್ನ ಗುರಿ ಅವರ ಆಸ್ತಿಯ ಮೇಲೆ; ಮಧುಕರನ ಗುರಿ, ಅವನು ಪ್ರೀತಿಸಿದ್ದ ಅವರ ಹೆಂಡತಿಯ ಮೇಲೆ. ನಮ್ಮ ಉದ್ದೇಶಗಳು ಉಪಾಯದಿಂದ ಫಲಿಸುವುವೆಂದರೆ ಅವರನ್ನು ಯಾವ ಅಪಾಯಕ್ಕೂ ತಾರದೆ ಕರೆತಂದು ಬಿಡುವೆವು. ಇದೇ ನಮ್ಮ ಸಿದ್ಧಾಂತವು. ಆದರೆ ಕೇಳು, ಹೆಮ್ಮಾರಿಯಂತೆ ಆರ್ಭಟಿಸಿದೆಯಾದರೆ, ಇದುವರೆಗೂ ಬಿಟ್ಟಂತೆ ಬೇರೆ ಬಿಡುಗೊಡಲಾರೆನು..........."

ಕುಮಾರನ ಮಾತು ಮುಗಿವುದಕ್ಕೆ ಮೊದಲೇ ಮರಿಯನು ಅಂಗಳದ ಬಳಿಯಲ್ಲಿ ಬಂದುನಿಂತು— " ಮಹಾಸ್ವಾಮಿ ! ಬೇಗ ಬರಬೇಕು. ಬೇಗಬರಬೇಕು. " ಎಂದು ಕೂಗಿದನು.

ಕುಮಾರನು ಹಾಗೆಯೇ ಬಂದು ಏನೆಂದು ಕೇಳಲು, ಮರಿಯನು–

" ಸ್ವಾಮೀ, ಕೊತ್ತವಾಲರು ಭವಾನೀದೇವಿಯು ಅಗ್ರಹಕ್ಕೆ ಬಲಿಬಿದ್ದರು. ಭಟ್ಟಾಚಾರ್ಯರ ಹೆಂಡತಿಯೂ ಭಟ್ಟಾಚಾರ್ಯರೂ ಕೂಡ, ಅಶಕ್ತರಾಗಿರುವರಲ್ಲದೆ, ಈ ಕಾಗದವನ್ನು ತಮಗೆ ಕಳಿಹಿಕೊಟ್ಟಿರುವರು. ಮತ್ತು ಅನುಕೂಲಿಸಿದರೆ, ಒಂದು ಬಾರಿ ದರ್ಶನವನ್ನು ಕೊಡಬೇಕೆಂದು ಕೇಳಿದೆವೆಂದೂ ತಿಳಿಸಿರುವರು. " ಎಂದು ಅಂಟಿಸಿದ್ದ ಕಾಗದವನ್ನು ಕೈಗಿತ್ತನು.

( ಕುಮಾರಶೇಖರನು, ತ್ವರೆಯಿಂದ ಕಾಗದವನ್ನು ತೆಗೆದುಕೊಂಡು ಒಡೆದು ಓದಿದನು. ಓದುತ್ತ ಹಾಗೆಯೇ ಅವನ ಸ್ಥಿತಿ ಬೇರೆಯಾಗುತ್ತ ಬರುತ್ತಿದ್ದಿತು. ಕಣ್ಣುಗಳಿಂದ ನೀರು ಧಾರೆಯಾಗಿ ಸುರಿಯುತ್ತಿದ್ದಿತು. ಒಂದು ಬಾರಿ ಓದಿ ಮುಗಿಯಿಸಿದನು. ಪತ್ರಾಭಿಪ್ರಾಯವು ಮನಸ್ಸಿಗೆ ಹಿಡಿಯಲಿಲ್ಲ, ಮತ್ತೊಮ್ಮೆ ಗಟ್ಟಿಯಾಗಿ ಓದಿದನು. ಪತ್ರದ ಒಕ್ಕಣೆ ಹೀಗಿದ್ದಿತು. )–

" ಆಯುಷ್ಮಂತನಾದ ಕುಮಾರಶೇಖರ !

ಭಗವಂತನೂ ಮತ್ತು ನಮ್ಮ ಪಿತೃದೇವತೆಗಳೂ ನಿನಗೆ ಅನುಗ್ರಹ ಮಾಡಲಿ ! ಅವರ ಆಶೀರ್ವಾದಬಲದಿಂದ, ನೀನು ಕುಲಕ್ಕೆ ಅಂಗಾರಕನಾಗದೆ ಅಭಿವರ್ಧಕನೆನ್ನಿಸಿ, ಕೀರ್ತಿಯಿಂದ ನಮ್ಮ ಪವಿತ್ರವಾದ ಕುಲವನ್ನೂ, ಧರ್ಮವನ್ನೂ ರಂಜನಮಾಡು.

" ಮಗುವೆ, ನನ್ನ ತೊಡೆಯಲ್ಲಿ ಬಳೆದ ನನ್ನ ಮುದ್ದಿನ ಮಗುವೆ ! ನನಗೆ ನೀನು ಬೇರೆ, ಪ್ರದ್ಯುಮ್ನನು ಬೇರೆಯೆಂದು ಇದುವರೆಗೂ ತೋರಿದುದಿಲ್ಲ; ಮುಂದೆಯೂ ತೋರುವುದಿಲ್ಲ. ಇದುವರೆಗೂ ನಾನು ನಿನ್ನನ್ನು ಹೇಗೆ ನನ್ನ ಹಿರಿಯ ಮಗನೆಂದೇ ತಿಳಿದು, ಅದರಂತೆಯೇ ನಿನ್ನ ಮುಂದಿನ ಏಳಿಗೆಗಾಗಿ ವಂಚನೆಯಿಲ್ಲದೆ ಅಣಿಮಾಡಿಕೊಡುತ್ತ ಬಂದೆನೋ, ಮುಂದೆಯೂ ಹಾಗೆಯೇ, ಅದೇ ಪುತ್ರವಾತ್ಸಲ್ಯದಿಂದಲೇ, ನಿನ್ನನ್ನು ಮುಂದೆ ನನ್ನ ಮನೆಯ ಆಡಳಿತಗಳಿಗೆ ಸರ್ವಾಧಿಕಾರಿಯಾಗಿ ಮಾಡಬೇಕೆಂದುಕೂಡ ಸಂಕಲ್ಪಿಸಿದ್ದೆನು. ಇದನ್ನು ನಿನ್ನಲ್ಲಿ ಸ್ಪಷ್ಟಪಡಿಸಲು ಇದುವರೆಗೆ ಕಾಲವು ಸರಿಯಾಗಿ ಕಂಡುಬಂದಿರಲಿಲ್ಲವಾದುದರಿಂದ ನನ್ನ ಮನಸ್ಸಿನಲ್ಲಿಯೇ ಇಟ್ಟಿದ್ದೆನು. ಆದರೂ, ಈ ನನ್ನ ಅಭಿಪ್ರಾಯವು ನಿನಗೆ ಅನೇಕವೇಳೆ, ನನ್ನ ಕಾರ್ಯಗಳಿಂದ ತಿಳಿದೇ ಇರಬಹುದು. ಅದಿರಲಿ, ಕುಮಾರ ! ನನ್ನದೊಂದ

ಮಾತನ್ನು ನೀನು ಗಣನೆಮಾಡುವೆಯಾ? ನಿನ್ನಿಂದ ಸಾಧ್ಯವೇ? ಹೇಳು; ಕುಮಾರಶೇಖರ! ಕೇಳು, ನೀನು ನನ್ನ ಪಿತ್ರವ್ಯನ ಏಕಮಾತ್ರಪುತ್ರನು. ನಿನ್ನನ್ನು ನಿನ್ನ ತಾಯಿ ಶೈಶವದಲ್ಲಿಯೇ ಬಿಟ್ಟುಹೋದಳು. ನಿನ್ನ ತಂದೆ ಮಾತೃವಿಹೀನನಾದ ನಿನ್ನನ್ನು ನನ್ನ ಉಡಿಯಲ್ಲಿಟ್ಟು ಇದನ್ನು ನಿನ್ನದೆಂದು ಸಾಕಿ, ಮುಂದಕ್ಕೆ ತರಬೇಕೆಂದು ಹೇಳಿದರಲ್ಲದೆ, ಈ ಶಿಶು ಮುಂದೆ ಈ ನಮ್ಮ ಕುಲದ ಗೌರವಕ್ಕೆ ಕುಂದುತಾರದಂತೆಯೂ, ಜನರಲ್ಲಿ ಗಣ್ಯನಾಗಿ ಮನೆತನದ ಹೆಸರನ್ನು ಮೇಲ್ಮೆಗೆ ತರುವಂತೆಯೂ ಸರಿಯಾದ ಶಿಕ್ಷಣ ವನ್ನಿತ್ತು ನೋಡಿಕೊಂಡು ಬರಬೇಕೆಂದೂ ಹೇಳಿ, ನನ್ನಲ್ಲಿ ಸಂಪೂರ್ಣ ಭರ ವಸೆಯನ್ನಿಟ್ಟು ಕಾಲವಾದರು.

ಕುಮಾರ! ಹೀಗೆ ತಾಯ್ತಂದೆಗಳನ್ನು ಕಳೆದುಕೊಂಡು ಅನಾಥ ನಾಗಿ ಒಪ್ಪಿಸಲ್ಪಟ್ಟ ನಿನ್ನ ವಿಷಯದಲ್ಲಿ ನಮ್ಮ ತಂದೆ ತೋರಿಸುತ್ತಿದ್ದ ಪ್ರೀತಿ ಎಷ್ಟಿತ್ತೆಂದು ನೆನೆಯಿಸಿಕೊ. ನಿನ್ನ ಆಟಪಾಟಗಳಲ್ಲಿಯೂ ಮತ್ತು ನಿನ್ನ ರೋಗ, ಸಂಕಟಗಳಲ್ಲಿಯೂ ನಿನ್ನನ್ನು ನಿಮ್ಮ ಅತ್ತಿಗೆ ಅದೆಷ್ಟು ವಾತ್ಸಲ್ಯದಿಂದ ಪೋಷಿಸುತ್ತ ಬಂದಳೆಂಬುದನ್ನೂ, ಅವಳು ನಿನ್ನ ಅಭ್ಯು ದಯಕ್ಕಾಗಿ ಪಟ್ಟ ಶ್ರಮಗಳೆಷ್ಟೆಂಬುದನ್ನೂ ಸ್ವಲ್ಪಮಟ್ಟಿಗಾದರೂ ಜ್ಞಾಪಿ ಸಿಕೋ. ವತ್ಸ! ಈ ನಿನ್ನ ಹಿರಿಯತ್ತಿಗೆ—ನಿನ್ನ ಸಾಕುತಾಯಿ, ಈಗ ನಿನಗಾಗಿ ಹೀಗೆ ಹೇಳಬೇಕೆಂದು ಹೇಳಿರುವಳು.

"ಮಗುವೇ! ನನ್ನ ಕಾಲವು ಮುಗಿದುಹೋಯಿತು, ನಾನಿದೊ, ಹೊರಟುಹೋಗುತ್ತಿರುವೆನು. ನಿನ್ನ ಅಣ್ಣಂದಿರುಕೂಡ, ಇನ್ನು ಹೆಚ್ಚು ಕಾಲ, ಈ ದುರವಸ್ಥೆಯಲ್ಲಿ ಈ ಬಂಧನಕ್ಲೇಶದಲ್ಲಿ ಉಳಿದಿರಲಾರರು, ಹೋಗುತ್ತೇವೆ. ಆದರೆ, ಗುರುಜನವಿಧೇಯನಾದ ನಿನಗೆ ಇದೋ ಒಂದೆರಡು ಮಾತು ಹೇಳಿ ಹೋಗಬೇಕೆಂಬ ಆಶೆ, ಏಕೆನ್ನುವೆ? ಸಾಕಿದ ಮಮತೆಯೆಂದಲ್ಲದೆ ಮತ್ತೊಂದನ್ನೂ ಈಗ ಹೇಳಲಾರೆನು."

"ಮಗುವೆ! ನೀನು ನಮ್ಮ ಸ್ವತ್ತುಗಳಿಗಾಗಿ ಇಷ್ಟು ದೂರ ಅಭಿಸಂಧಿ ಯನ್ನು ಮಾಡಬೇಕಾಗಿರಲಿಲ್ಲ. ನನ್ನಲ್ಲಿ ಒಂದುಬಾರಿ—ಒಂದೇ ಬಾರಿ, ಉಸಿರಿದ್ದರೂ ಸಾಕು. ನಾನು ನಿನಗೆ ಕೊಡಿಸುತ್ತಿದ್ದೆನು. ನಡೆದುದು ನಡೆದೇಹೋಯಿತು. ಇನ್ನದಕ್ಕಾಗಿ ಚಿಂತಿಸಿ, ಏನನ್ನೂ ಮಾಡಲಾರೆ!

ಆದರೆ, ಕುಮಾರ, ನಮ್ಮಲ್ಲಿ ನೀನು ಇಷ್ಟು ಕಠಿನವೃತ್ತಿಯಿಂದ ಈ ಗುಪ್ತ ತಂತ್ರದಲ್ಲಿ ಕ್ರೂರನಾಗಿ ನಡೆದುಕೊಂಡರೂ ನಿನ್ನಲ್ಲಿ ನಾವು ಆಗ್ರಹಮಾಡುವು ದಿಲ್ಲ. ಏಕೆನ್ನುವೆ? ಇದು, ನೀನು ಸ್ವಾಭಾವಿಕವಾಗಿ ಮಾಡಿದ ಕೆಲಸವಲ್ಲ ವೆಂದು ನನಗೆ ಗೊತ್ತಿದೆ. ಇದಕ್ಕೆ ಕಡೆಯಲ್ಲಿ ನಿನಗೆ ಪಶ್ಚಾತ್ತಾಪವಾಗ ಬಹುದೆಂಬ ನಂಬುಗೆಯೂ ನನಗಿದೆ. ಆದರೆ ನೋಡು, ತಿಳಿವುಬಂದಾಗ ಮಾತ್ರ ನೀನು, ಈ ದುಷ್ಕಾರ್ಯಪ್ರೇರಕರಲ್ಲಿ ರಾಕ್ಷಸಕೃತ್ಯವನ್ನು ಮಾಡ ಬೇಡ. ಭಗವಂತನಲ್ಲಿ ಕ್ಷಮೆಯನ್ನು ಬೇಡಿ, ಶಾಂತನಾಗು. ಕುಮಾರ, ಇನ್ನು ಸಾಕು, ಹೆಚ್ಚು ಹೇಳಲಾರೆನು. ಇದೋ ನಿಮ್ಮ ಅಣ್ಣಂದಿರು, ತಮ್ಮ ಅಪಾರವಾದ ಆಸ್ತಿಗೆಲ್ಲಕ್ಕೂ ನಿನ್ನನ್ನೇ ಮುಖ್ಯಾಧಿಕಾರಿಯಾಗಿ ನೇಮಿಸಿದ ಶಾಸನಪತ್ರವನ್ನು ಕಳಿಹಿರುತ್ತಾರೆ, ತೆಗೆದುಕೊ. ದುರ್ವ್ಯಯ ದಲ್ಲಿ ಮಾತ್ರ ಅದನ್ನು ವಿನಿಯೋಗಿಸಬೇಡ. ಸತ್ಕಾರ್ಯದಲ್ಲಿ, ಶಾಶ್ವತವಾಗಿ ನಡೆದುಬರುವ ಕಾರ್ಯದಲ್ಲಿ, ಇದನ್ನು ಕಾಲವರಿತು ಉಪಯೋಗಿಸುವ ವಿಷ ಯದಲ್ಲಿ ನಿನಗೆ ಅಧಿಕಾರವಿದೆ. ಮಗುವೆ! ಸ್ವಲ್ಪ ವಿಚಾರಮಾಡಿ ನೋಡು— ನಾವೆಂತೂ ಹೊರಟುಹೋಗುತ್ತೇವೆ. ನನ್ನ ತಂಗಿ, ನಿನ್ನ ಕಿರಿಯತ್ತಿಗೆ— ಪ್ರಮದಾದೇವಿ ಇನ್ನೂ ಚಿಕ್ಕವಳು. ಅವಳಿಗಿನ್ನೂ ಪ್ರಾಪಂಚಿಕಸ್ಥಿತಿಗತಿ ಗಳಾಗಲೀ, ಆತ್ಮಾವಲಂಬನದ ಉಪಾಯವಾಗಲೀ ತಿಳಿದಿಲ್ಲ. ಆದುದರಿಂದ ನಮ್ಮ ಕುಲಕ್ಕೆ ಹೇಗೆ ವರ್ತಿಸಿದರೆ ಗೌರವವೂ, ಖ್ಯಾತಿಯೂ, ತಪ್ಪದೆ ಹೆಚ್ಚುತ್ತಬರುವುದೋ, ಅಂತಹ ನೀತಿಮಾರ್ಗದಲ್ಲಿ ಅವಳನ್ನು ನೆಲೆಗೊಳಿಸಿ ಕೊಂಡು, ಧರ್ಮದೃಷ್ಟಿಯಿಂದ ಸಲಹುತ್ತ ಬರಬೇಕಲ್ಲದೆ, ಅವಳನ್ನು ನಿನ್ನ ಕಡೆಯವರ ಮತ್ತು ಇತರರ ಕಲುಷದೃಷ್ಟಿಗಳಿಗಾಗಲೀ, ನಿಷ್ಠುರತೆಗಳಿ ಗಾಗಲೀ ಗುರಿಮಾಡಬೇಡ, ತಿಳಿದಿಯಾ? ಸಾರಿಸಾರಿ ಹೇಳಿರುವೆನು. ಕುಮಾರ! ಇನ್ನು ಪ್ರದ್ಯುಮ್ನನ ವಿಚಾರವೊಂದೇ ಇರುವುದು. ನಿನ್ನ ಮಗಳು—ಅನ್ನಪೂರ್ಣಾ, ಮತ್ತು ನಿನ್ನ ಮಗ ಕೃಪಾದೇವ—ಇವರಿಬ್ಬ ರೊಡನೆ, ಇವನೂ ಮೂರನೆಯವನೆಂದು ತಿಳಿದು, ಅವರನ್ನು ಪೋಷಿಸು ವಂತೆ ಇವನನ್ನು ಪೋಷಿಸುತ್ತಾ ಬಂದರೆ ಸಾಕು. ಹೆಚ್ಚಾಗಿ ಕೇಳುವು ದಿಲ್ಲ. ಮುಂದೆ ಆತನ ಅದೃಷ್ಟದಲ್ಲಿದ್ದಂತೆ ಕಷ್ಟಪಟ್ಟು ಜೀವಿಸಿಕೊಳ್ಳಲಿ. ಇನ್ನು ಹೇಳಲಾರೆ, ದೇವರು ನಿನ್ನನ್ನು ಕ್ಷಮಿಸಲಿ. ನೀನು ಪ್ರಮದೆ

ಯನ್ನು ಮಾತ್ರ ಆಪತ್ತಿನಿಂದ ಪಾರುಮಾಡಿ ಕೀರ್ತಿಹೊಂದು. ಅಪ್ಪ! ಇಷ್ಟು ಹೇಳಿದೆ, ಇದೋ ನಿನ್ನ ಪತ್ನಿಗೆ ನನ್ನ ಕಡೆಯ ಆಶೀರ್ವಾದವು– ' ತಂಗಿ, ನಿನ್ನ ಸೌಭಾಗ್ಯಸಂಪತ್ತಿ, ಪತಿಭಾಗ್ಯವು, ನಿನಗೆ ಸ್ಥಿರವಾಗಿರಲಿ."

ಕುಮಾರ! ಇಷ್ಟು ಹೇಳಿ ನಿನ್ನ ಅತ್ತಿಗೆ ಸುಮ್ಮನಾಗಿರುವಳು. ನನ್ನ ಅವಸ್ಥೆಯೂ ಅಷ್ಟೇ ಆಗುವುದು. ಆದರೆ, ನನ್ನ ಕುಲಕ್ಕೆ ಕಲಂಕ ವುಂಟಾಗದಂತೆ ನೋಡಿಕೊಳ್ಳುವೆನೆಂದು ನೀನು ಭರವಸೆಯನ್ನು ಕೊಟ್ಟಿ ಯಾದರೆ, ನನ್ನ ಅಂತರಾತ್ಮಕ್ಕೆ ಶಾಂತಿಸುಖವು ದೊರೆವುದು. ಅಷ್ಟುಮಾತ್ರ ಮಾಡುವಿಯೆಂದು ಆಶಿಸುತ್ತಿರುವ ನಿನ್ನ ಅಣ್ಣ,

ಧರ್ಮಬಾಹಿರರ ನಿರ್ಬಂಧಕ್ಕೆ ಸಿಕ್ಕಿ ಜೀವನ್ಮೃತನಾಗಿರುವ,
ಮಧುಸೂದನಶರ್ಮ."

ಕಾಗದವನ್ನು ಓದಿ, ಕುಮಾರಶೇಖರನು ಹೇಗಾದನೆಂಬುದನ್ನು ವಿವ ರಿಸಲು ಅಳವಲ್ಲ. ಅವನು ಅನುತಪ್ತಹೃದಯನಾಗಿ ಉದ್ರೇಕವನ್ನು ತಡೆಯಲಾರದೆ ಹುಚ್ಚನಂತೆ, ತನ್ನ ಕೈಯಿಂದ ತನ್ನ ತಲೆಯನ್ನು ಚಚ್ಚಿ ಕೊಂಡು– ' ಪಾಪಿ–ಪಾಪಿ–ಪಂಚಮಹಾಪಾತಕಿ! ಹೋಗು ಹೋಗು, ಹಾಳಾಗಿಹೋಗು.' ಎಂದು ಹೇಳುತ್ತ ಕಣ್ಣೀರುತುಂಬಿ ನೆಲವನ್ನು ನೋಡಿ–" ತಾಯಿ ವಸುಂಧರೆ! ಈ ನಿನ್ನ ದುಷ್ಪುತ್ರನನ್ನು ಇನ್ನೂ ಹೇಗೆ ಹೊತ್ತಿರುವೆಯಮ್ಮಾ? ಇನ್ನೂ ಈ ಪಾಪಿಯನ್ನು ಭಾರವಾಗಿರಿಸಿ, ಎಷ್ಟುಕಾಲ ಈ ಅನರ್ಥವನ್ನುಂಟುಮಾಡಿಸುವೆ ತಾಯಿ! ಈಕ್ಷಣವೇ, ನಿನ್ನ ಗರ್ಭದಲ್ಲಿ ಇವನಿಗೆ–ಈ ನಿರ್ಭಾಗ್ಯನಿಗೆ–ಎಡೆಮಾಡಿಕೊಡು. ಈ ಪಿತೃ ಘಾತಕನಿಗೆ–ಈ ಕೃತಘ್ನನಿಗೆ, ಈ ಅಧಮ್ನಿಗೆ–ಈಗಲೇ ಮೃತ್ಯುವನ್ನು ದಯೆ ಪಾಲಿಸು; ತಾಯೇ– ದಯೆಪಾಲಿಸು" ಎಂದು ವಿಲಪಿಸುತ್ತಿದ್ದನು. ವಿಶಾಲಾಕ್ಷಿ ಎಲ್ಲವನ್ನೂ ಕೇಳಿದಳು, ಉರಿದುರಿದು ಎಡಹುವದನ್ನೂ ಕಾಣದೆ ಓಡಿಬಂದು, ಕುಮಾರನ ಹೆಗಲಮೇಲೆ ಮೈಮರೆತು ಮಲಗಿದ್ದ ಪ್ರದ್ಯುಮ್ನ ನನ್ನು ಎಳೆದು ನೆಲದಮೇಲೆಸೆದು–'ಹಾಳಾಗಿಹೋಗು; ಕೆಟ್ಟ ಶನಿ.' ಎಂದು ಹೇಳುತ್ತ ಸ್ಮೃತಿತಪ್ಪಿನಿಂತಿದ್ದ ಗಂಡನ ಮುಖವನ್ನು ಮೇಲಕ್ಕೆತ್ತಿ–"ಏನಿದು ಅವತಾರ! ಬುದ್ಧಿಯೆಲ್ಲಿಹೋಯಿತು? ಚೆನ್ನಾಗಿರುವುದು. ನಿಮ್ಮ ಗಂಡಸು ತನಕ್ಕೆ ಅಳಬೇಕು!" ಎಂದು ದಟ್ಟಿಸಿ ಹೇಳಿದಳು.

ಕುಮಾರನು ಎಚ್ಚತ್ತು ನೋಡಿದನು. ತೆಗಲಮೇಲಿದ್ದ ಮಗು ನೆಲದ ಮೇಲೆ ಬಿದ್ದು ಅಳಲಾರದೆ ಬುಸುಗುಟ್ಟುತ್ತಿದ್ದುದನ್ನೂ, ಅದರ ಬಾಯಿ ಮೂಗುಗಳಿಂದ ರಕ್ತಸುರಿಯುತ್ತಿದ್ದುದನ್ನೂ ಬಾಗಿಲಲ್ಲಿ ಅಡ್ಡಲಾಗಿ ನಿಂತು ಮರಿಯನು ಕೂಗಿಡುತ್ತಿದ್ದುದನ್ನೂ ನೋಡಿದನು. ಏನನ್ನೂ ಹೇಳದೆ, ಪ್ರದ್ಯುಮ್ನನನ್ನೆತ್ತಿ ತನ್ನ ವಸ್ತ್ರದಿಂದ ರಕ್ತವನ್ನು ಒರಿಸಿ, ಎದೆಗೆ ಅಪ್ಪಿಕೊಂಡು ಬಂದು, ಮರಿಯನ ಕೈಗಿತ್ತು—'ಅಣ್ಣ ಮರಿಯ ! ಹೋಗು, ನೀನೀಗಲೇ ಹೋಗಿ, ಈ ಶಿಶುವನ್ನು ನಮ್ಮ ಪೋಲೀಸ ಸೂಪರಿಂಟೆಂಡೆಂಟರ ವಶಕ್ಕೆ ಒಪ್ಪಿಸು. ನಾನು ಇಷ್ಟರಲ್ಲಿಯೇ ಬರುವೆನು, ನಡೆ. ಇಲ್ಲಿ ನಿಲ್ಲಬೇಡ, ಹೊರಟುಹೋಗು.' ಎಂದು ಹೇಳಿ ಮರಿಯುನನ್ನು ಕಳಿಹಿದನು.

ವಿಶಾಲಾಕ್ಷಿ ನೋಡಿದಳು, ಗಂಡನೊಡನೆ ಮುಂದೆ ಮಾತನಾಡಲೊಲ್ಲದೆ ಸಿಡಿಮಿಡಿಯಿಂದ ಓಡಿಬಂದು— ಓದುತ್ತಿದ್ದ ಮಕ್ಕಳ ಕೈಹಿಡಿದು ನಡೆಯಿರಿ, ಹೋಗೋಣ ! ಈ ಹಾಳುಮನೆಯಲ್ಲಿರುವುದಕ್ಕಿಂತಲೂ ಅಡವಿಯೇ ನಮಗೆ ಮೇಲು.' ಎಂದು ಅವುಗಳನ್ನೂ ಎಳೆದೊಯ್ಯಲನುವಾದಳು.

ಕುಮಾರಶೇಖರನು ನೋಡಿದನು. ಮರುಮಾತಿಲ್ಲದೆ, ತನ್ನ ಕಿರುಮನೆಗೆ ಹೋಗಿ ಕೈಯಲ್ಲಿ ಪಿಸ್ತೂಲನ್ನು ಹಿಡಿದುಕೊಂಡು ಬಂದು, ಬಾಗಿಲಿಗೆ ಅಡ್ಡವಾಗಿ ನಿಂತು, ಹೆಂಡಿತಿಯನ್ನು ಗೋಡೆಗೆ ತಳ್ಳಿ, ಮಕ್ಕಳನ್ನು ಕರೆದು ಮುತ್ತಿಟ್ಟು—' ಮಗು, ಅನ್ನಪೂರ್ಣೆ, ಕೃಪಾದೇವ, ನಿಮಗೆ ದೇವರೇ ತಂದೆ, ತಾಯಿ—ಸರ್ವವೂ, ಇನ್ನು ನಮ್ಮ ಆಸೆಯನ್ನು ಬಿಟ್ಟು ಹೋಗಿರಿ,—ಮಕ್ಕಳೇ, ಅಳದೆ ಹೊರಟುಹೋಗಿರಿ. ದಯಾನಾಥ ಠಾಕೂರರ ಮನೆಗೆ ಹೋಗಿ ಮಲಗಿರಿ' ಎಂದು ಅಳುತ್ತಿದ್ದ ಹುಡುಗರನ್ನು ಬಾಗಿಲ ಹೊರಗೆ ಬಿಟ್ಟು ಬಾಗಿಲನ್ನು ಮುಚ್ಚಿ ಅಗ್ಗಳಿಯನ್ನು ಹಾಕಿ, ಅಡ್ಡಲಾಗಿ ನಿಂತನು.

ವಿಶಾಲಾಕ್ಷಿ ಮತ್ತೆ ಮುಂದೆ ಬಂದು ಗಂಡನ ಕೈಹಿಡಿದು ಆಗ್ರಹದಿಂದ—' ಪಾಪಿಗಳೇ, ಕಟುಕರೇ, ನನ್ನನ್ನೇಕೆ ಹೀಗೆ ಹುರಿದು ಮುಕ್ಕುತ್ತಿರುವಿರಿ ? ನನ್ನ ಮಕ್ಕಳನ್ನೇಕೆ ಕೊಲ್ಲುವಿರಿ? ನಿಮಗಾಗದಿದ್ದರೆ........ ಎನ್ನುತ್ತಿದ್ದಳು.

ಅಷ್ಟರಲ್ಲಿ ಕುಮಾರನು–“ ಚಾಂಡಾಲಿ! ಹೆಚ್ಚು ಮಾತಾಡಬೇಡ. ನಾನು ಪಾಪಿ, ಅಹುದು, ಪಾಪಿಯಾದುದರಿಂದಲೇ, ಸಾಕಿದವರನ್ನೂ ಸುಹೃದರನ್ನೂ ಕೊಲ್ಲಿಸಿ, ನರಕಭಾಜನನಾದೆನು. ದುರಾಶಾಪಿಶಾಚಗ್ರಸ್ತೆಯಾದ ನಿನ್ನ ಸಂಗದಿಂದ ನಾನು ಮೂರ್ಖನಾಗಿ ಇದುವರೆಗೆ ನಿನ್ನ ಈ ಸುಟ್ಟ ಮೋರೆಯಮೇಲಿನ ಮೋಹದಿಂದ, ಎಷ್ಟೆಷ್ಟೋ ಕೆಟ್ಟ ಕೆಲಸಗಳನ್ನೂ ಮಾಡಿಬಿಟ್ಟೆನು. ಕುಲಕ್ಕೆ ಮೃತ್ಯುವಾದೆನು, ಕೀರ್ತಿಗೆ ಕಲಂಕಪ್ರಾಯವಾಗಿ ತಿರುಗಿದೆನು. ಹೆಚ್ಚೇಕೆ, ಪಾಪಿಷ್ಟೆ! ನೀನು, ನಿನ್ನ ಶೃಂಗಾರ, ವೈಯ್ಯಾರ, ಅಲಂಕಾರ, ಆಡಂಬರ, ಊಟ, ನೋಟ–ಮೊದಲಾದ ನಿನ್ನ ಮತ್ತು ನಿನ್ನ ಕಡೆಯವರ ದುಂದುವೆಚ್ಚಕ್ಕಾಗಿ ನನ್ನನ್ನು ಕಾಡಿಕಾಡಿ, ಕಪಿಯಂತೆ ಮಾಡಿ ಕುಣಿಸಿ, ಈ ಸ್ಥಿತಿಗೆ ತಂದೆ. ಕಡೆಗೆ ಈಗ ಅಯ್ಯೋ, ಪಂಚಮಹಾಪಾತಕಿ, ನನ್ನನ್ನೇ ಕಟುಕನೆಂದು ಹೇಳುವೆಯಾ? ನಮ್ಮ ದೊಡ್ಡಪ್ಪನಿಗೆ ನಿನ್ನ ಕಡೆಯವನಿಂದ ವಿಷವನ್ನು ಕುಡಿಸಿ ಕೊಲ್ಲಿಸಿದವಳಾರೆಂದು ತಿಳಿದು ಹೇಳು? ನಿನ್ನ ಪಾತಕಕ್ಕೆ– ಈ ನಿನ್ನ ದೌಷ್ಟ್ಯಕ್ಕೆ– ನಿನ್ನನ್ನು ತುಂಡುತುಂಡಾಗಿ ಮಾಡಿ, ಕಂಡ ಕಂಡ ಹದ್ದು ಕಾಗೆಗಳ ಬಾಯ್ಗೆ ಕೊಟ್ಟರೂ ಸಾಲದು. ಈಗ ನೀನು ನನ್ನನ್ನು ಕಟುಕನೆಂದೆಯಲ್ಲವೆ? ಇದೋ ನೋಡು! ನಾನು ಕಟುಕನೇ ಅಹುದು, ಆದರೆ, ನಾನು ನಿನಗೂ ಮತ್ತು ನನ್ನ ಪ್ರಾಣಕ್ಕೂ ಕಟುಕನಲ್ಲದೆ ಈ ಮಕ್ಕಳಿಗೆ ಕಟುಕನಲ್ಲ ಯಾವ ಕೆಟ್ಟ ಮನಸ್ಸಿನಿಂದ ನೀನು, ಇದುವರೆಗೂ, ಈ ನಾರೀರೂಪದ ಹೆಮ್ಮಾರಿಯಾಗಿ ನನ್ನ ಮನೆಯಲ್ಲಿದ್ದು ಸರ್ವನಾಶಮಾಡಿದೆಯೋ ಆ ಪಾಷಾಣಹೃದಯವನ್ನು, ಇಂದು ನನ್ನ ಮನಸ್ತೃಪ್ತಿಯಾಗುವಂತೆ ಸುಟ್ಟು ಶಾಂತನಾಗುವೆನು. ನೋಡು–ನೋಡು.”

ಎಂದು ಹೇಳುತ್ತಿದ್ದಂತೆಯೇ ತುಬಾಕಿಯನ್ನು (*Pistol*) ವಿಶಾಲಾಕ್ಷಿಯ ಎದೆಗೆ ಗುರಿಕಟ್ಟಿ ಹಾರಿಸಿದನು. ವಿಶಾಲಾಕ್ಷಿ ವಿಕಾರಸ್ವರದೊಡನೆ ಗಂಡನ ಕಾಲಕೆಳಗೆ ಬಿದ್ದು, ಪ್ರಾಣಬಿಟ್ಟಳು.

ಅದನ್ನು ನೋಡಿ ಕುಮಾರಶೇಖರನು.– “ ಆಗಲಿ, ಭೂಮಿಗೆ ಒಂದು ದೊಡ್ಡ ಹೊರೆತಪ್ಪಿಹೋಯಿತು. ಇನ್ನು ಉಳಿದಿರುವುದನ್ನೂ ಇಳಿಹಬೇಕು.’ ಹೀಗೆ ಹೇಳುತ್ತ ಮುಂದಕ್ಕಡಿಯಿಟ್ಟನು. ಅಷ್ಟರಲ್ಲಿ ಬಾಗಿಲನ್ನು

ತಟ್ಟಿ, ಹೊರಗೆ ಯಾರೋ ಕೂಗಿದಂತೆ ಶಬ್ದವಾಯಿತು; ಕುಮಾರನು ನಗುತ್ತ—“ಇಲ್ಲ–ಇಲ್ಲ–ಈಗ ನೀವು, ಬರಲಾಗುವುದಿಲ್ಲ; ತೆಗೆಯಲಾರೆ. ದುರ್ಗಾಪ್ರಸಾದ! ಹೋಗು, ಮೊದಲು, ಪ್ರಮದೆಯನ್ನು ಬಿಡಿಸು; ಮಧುಕರನ ಬಂಗಲೆಯ ಕಡೆಗೆ ಹೋಗು. ಇಲ್ಲಿ ನಿಲ್ಲಬೇಡ.” ಎಂದು ಹೇಳುಹೇಳುತ್ತ ಕಿರುಮನೆಯ ಒಳಹೊಕ್ಕು, ಬಾಗಿಲನ್ನು ಮುಚ್ಚಿ, ಅಗಳಿಯನ್ನು ತಗಲಿಸಿಕೊಂಡನು.

ಕುಮಾರನು ಕಿರುಮನೆಯೊಳಹೊಕ್ಕ ಉತ್ತರಕ್ಷಣದಲ್ಲಿಯೇ ಬೀದಿಯ ಬಾಗಿಲು ಹೊರಗಡೆಯಿಂದ ಎತ್ತಿ ತೆರೆಯಲ್ಪಟ್ಟಿತು. ಒಡನೆಯೇ ದುರ್ಗಾಪ್ರಸಾದ, ಕಮಲಾಕಾಂತ, ಭವಾನೀ, ಧನ್ವಂತರಿಗಳೊಡನೆ ವಿಕ್ರಮಸೇನನು ಒಳಹೊಕ್ಕು ನೋಡಿದನು; ಕುಮಾರನು ಇರಲಿಲ್ಲ. ವಿಶಾಲಾಕ್ಷಿ ಸತ್ತು ಬಿದ್ದಿದ್ದಳು. ಅವಳ ಹೃದಯದಿಂದ ರಕ್ತವು ಸುರಿದು ಅಲ್ಲಿ ಗುಂಡಿಯಾಗಿ ನಿಂತಿದ್ದಿತು. ಎಲ್ಲರೂ ನೋಡಿ ನಡುಗಿದರು. ಮತ್ತೆ ಕಿರುಮನೆಯ ಕಡೆಗೆ ಬಂದು, ಕದದ ಕಂಡಿಯಿಂದ ಇಣಿಕಿ ನೋಡಿದರು. ಕುಮಾರನು ಕುಳಿತು ಕಣ್ಣೀರು ಸುರಿಸುತ್ತ ಬರೆಯುತ್ತಿದ್ದನು.

**ವಿಕ್ರಮ:—** “ಕುಮಾರಶೇಖರ, ಬಾಗಿಲನ್ನು ತೆಗೆ, ನಾವೆಲ್ಲರೂ ಬಂದಿರುವೆವು., ವಿಚಾರಿಸಬೇಕು.” ಎಂದನು.

**ಕುಮಾರ:—** “ನನ್ನನ್ನು ನೀವು ವಿಚಾರಿಸಬೇಕಾದುದಿಲ್ಲ. ನನ್ನ ಮನಸ್ಸೇ, ಆತ್ಮನೇ–ವಿಚಾರಿಸಿ, ಇತ್ಯರ್ಥವನ್ನೂ ಹೇಳಿರುವುದು. ಆಯಾಸ ಪಡಬೇಡಿರಿ, ನಡೆಯಿರಿ.” ಎಂದು ಕುಳಿತಂತೆಯೇ ಹೇಳಿದನು.

**ವಿಕ್ರಮ:—** ಕುಮಾರ! ವಿಪರೀತಕ್ಕೆ ಕೈಹಚ್ಚಬೇಡ. ಇಲ್ಲಿಯವರೆಗೆ ಮಾಡಿದ ಅಕಾರ್ಯವೇ–ಈ ರಾಕ್ಷಸಕೃತ್ಯವೇ ಸಾಕು. ಇನ್ನು ವಿವೇಕಹೊಂದು! ಹೊರಗೆ ಬಾ.

**ಕುಮಾರ:—** ಇಲ್ಲ, ಬರಲಾಗುವುದಿಲ್ಲ. ಇಂದಿನವರೆಗೆ ಮಾಡಿದುದಕ್ಕೆ ಪ್ರಾಯಶ್ಚಿತ್ತವಾಗಬೇಕು. ಒಂದಾಯಿತು, ಇನ್ನೊಂದಾಗುತ್ತಿದೆ. ಆದಬಳಿಕ ಬರುವಿರಂತೆ!

**ಭವಾನಿ:—** ಅಣ್ಣಾ! ಸಾಕೇಳು, ಇನ್ನು ಕಠಿನವೃತ್ತಿಯನ್ನು ಹಿಡಿಯಕೂಡದು. ನಿನ್ನ ಅಣ್ಣಂದಿರನ್ನೂ ಅವರ ಹಿರಿಯ ಹೆಂಡತಿಯನ್ನೂ

ಕರೆದುತಂದಿರುವೆವು. ನಿನ್ನ ಕಿರಿಯತ್ತಿಗೆಯನ್ನೂ ಬಿಡಿಸಿರುವೆವು. ನೀನಿನ್ನು ಧೈರ್ಯವಾಗಿ ಬಾ.

**ಕುಮಾರ** — ಇಲ್ಲವೇ ತಾಯಿ, ಬರಲಾಗುವುದಿಲ್ಲ. ಕೊಲೆಗೇಡಿಯನ್ನು, ನರಾಧಮನನ್ನು ಅಣ್ಣನೆಂದೇಕೆ ಕೂಗುವೆ? ನರಾಧಮ-ಪಾಪಿ-ಮಾನವಪಶುವೆಂದು ಕರೆ. ತಾಯಿ! ಅವರು ಬಂದಿದ್ದರೆ, ಮಕ್ಕಳನ್ನು ಅವರ ಆಸ್ತಿಯೊಡನೆ ಅವರ ಕಾಲಕೆಳಗೆ ಹಾಕಿ, ಅಪ್ಪಣೆ ಕೇಳಿದೆನೆಂದು ಹೇಳು. ಇನ್ನು ನಡೆ ತಾಯಿ!

**ದು. ಪ್ರ** — ಚೀ! ಚೀ! ಎಷ್ಟು ಹೊತ್ತು ಕೂಗಿಸಿಕೊಳ್ಳುವೆ? ಬಾಗಿಲನ್ನು ತೆರೆ, ಈಚೆಗೆ ಹೊರಟು ಬಾ. ಪ್ರಾಣಭಯದಿಂದ ಅಡಗಿರುವೆಯೋ?

ಕುಮಾರನು ನಗುತ್ತ ಬರೆಯುತ್ತಿದ್ದ ಕಾಗದವನ್ನು ಮಡಿಸಿ ಕಿಟಕಿಯಿಂದ ಹೊರಗೆ ಹಾಕಿ-"ಅಯ್ಯಾ! ಇನ್ನು ಸ್ವಲ್ಪ ತಾಳಿರಿ, ಬಾಗಿಲನ್ನು ತೆಗೆವೆನು. ಪ್ರಾಣಕ್ಕೆ ಹೆದರಿಲ್ಲ, ಹಿಡಿಯಿರಿ, ನನ್ನ ವಾಜ್ಮೂಲವೆಲ್ಲವೂ ಇದರಲ್ಲಿ ಅಡಕವಾಗಿದೆ-ತೆಗೆದುಕೊಳ್ಳಿರಿ. ಮತ್ತಾರ ವಿಚಾರಣೆಯೂ ಬೇಕಾಗುವುದಿಲ್ಲ...... ......"

**ಕಮಲಾಕಾಂತ:**— "ಅಯ್ಯ, ಕುಮಾರಶೇಖರ! ಸುಮ್ಮನೆ ಹುಚ್ಚನಂತೆ ಕೆಲಸವನ್ನು ಮಾಡಬೇಡ; ಬಾಗಿಲನ್ನು ತೆರೆ!" ಎಂದು ಹೇಳುತ್ತ ಬಾಗಿಲನ್ನು ತಟ್ಟಿದನು. ಬಾಗಿಲ ಅಗಳಿ ಸಡಿಲಿಸಲ್ಪಟ್ಟಿತು. ಎಲ್ಲರೂ ಒಳಕ್ಕೆ ನುಗ್ಗಿದರು. ಆದರೇನು? ಅಷ್ಟರಲ್ಲಿ- "ಭವಾನಿ! ದುರ್ಗೆ! ತಾಯೀ ಕರೆದುಕೋ" ಎಂದು ಹೇಳುತ್ತ ಕುಮಾರಶೇಖರನು 'ಪಿಸ್ತೂಲ'ನ್ನು ತನ್ನೆದೆಗೆ ಗುರಿಯಿಟ್ಟು ಹಾರಿಸಿಕೊಂಡನು. ಆ ಗುರಿ ಸ್ವಲ್ಪದರಲ್ಲಿ ತಪ್ಪಿ, ಆತನ ಎಡತೋಳಿನ ಕೀಲಿಗೆ ತಗಲಿತು; ಕೆಳಗೆ ಬಿದ್ದು ನಿಶ್ಚೇಷ್ಟಿತನಾದನು.

ಎಲ್ಲರೂ— 'ಪ್ರಮಾದ! ಪ್ರಮಾದ!!' ವೆಂದು ಕೂಗಿದರು. ಎಲ್ಲರ ಕಣ್ಣುಗಳಲ್ಲಿಯೂ ನೀರು ತುಂಬಿತು.

**ಭವಾನಿ:**— (ಹತ್ತಿರಕ್ಕೆ ಬಂದು ಕುಮಾರಶೇಖರನ ತಲೆಯ ಕಡೆ ಕುಳಿತು, ಧನ್ವಂತರಿಯನ್ನು ನೋಡಿ-) "ಅಪ್ಪ! ನೋಡು-ನೋಡು!

ಬೇಗನೋಡು ! ಪ್ರಾಣಾಪಾಯುವಾಗಿದೆಯೋ ? ಏನಾದರೂ ಆಶೆಯುಂಟೋ ? ”

ಧನ್ವಂತರಿ ನೋಡಿ– “ ಭಗವಂತನ ಸಂಕಲ್ಪದಿಂದ ಪ್ರಾಣಭಯವೇನೂ ಇಲ್ಲ. ಆದರೆ ಈ ಭುಜದಿಂದ ಇನ್ನುಮುಂದೆ ಕೆಲಸವೇನೂ ನಡೆಯುದು. ” ಎಂದನು.

**ಭವಾನಿ** — ಅಪ್ಪ ! ಕೆಲಸವಾಗದಿದ್ದರೆ ಹಾಳಾಗಲಿ. ಈತನಿಗೆ ಪ್ರಾಣದಾನ ಮಾಡು. ಪಶ್ಚಾತ್ತಾಪದಿಂದ ಈತನ ಮನಸ್ಸು ಪರಿಶುದ್ಧವಾಗಿರುವುದು. ಪಾಪ ! ಆ ಮಕ್ಕಳನ್ನು ಅನಾಥರನ್ನಾಗಿ ಮಾಡಬೇಡ.

ಎಲ್ಲರೂ ಅದನ್ನು ಅನುಮೋದಿಸಿದರು. ಧನ್ವಂತರಿ ಚಿಕಿತ್ಸೆಯನ್ನು ಮಾಡಲು ಮೊದಲು ಮಾಡಿದನು. ಕಮಲಾಕಾಂತನೂ, ಭವಾನಿಯೂ ಶುಶ್ರೂಷೆಗೆ ನಿಂತರು. ದುರ್ಗಾಪ್ರಸಾದನು ಸತ್ತುಬಿದ್ದಿದ್ದ ವಿಶಾಲಾಕ್ಷಿಯ ಹೆಣವನ್ನು ನಾಗಿಸಿಕೊಂಡು ಹೊರಟುಹೋದನು. ವಿಕ್ರಮಕುಮಾರನು ಪತ್ನಿಗೂ, ಉಳಿದವರಿಗೂ ಎಚ್ಚರಿಸಿ, ಹೊರಟುಹೋದನು.

ಇಷ್ಟಾಗುವ ವೇಳೆಗೆ ಕುಮಾರಶೇಖರನು ಎಚ್ಚತ್ತು, ಕಣ್ಣುಬಿಟ್ಟು ನೋಡಿದನು. ತಲೆಯ ಕಡೆಯಲ್ಲಿ ಮತ್ತು ಮಗ್ಗಲಲ್ಲಿ ಕುಳಿತಿದ್ದವರನ್ನು ಕಂಡು, ಕೇಳಿದನು–“ ತಾಯಿ, ಭವಾನಿ, ಏಕೆ ನನ್ನನ್ನು ಉಳಿಸಿದೆ ? ಕೊಲೆಗೇಡಿಯಾದ ನನ್ನನ್ನು ಸರಕಾರದವರು ಕಡಿದುಹಾಕುವುದಕ್ಕೆ ಮೊದಲು, ನಾನೇ ಹೋಗುತ್ತಿದ್ದೆನು. ನನ್ನನ್ನೇಕೆ ಉಳಿಸಿದೆ ? ”

**ಭವಾನಿ** — ಅಣ್ಣ ! ನನ್ನ ಮನಸ್ಸು ಮರುಗಿತು. ಏಕೆನ್ನುವೆ ? ನಿನ್ನ ಮಕ್ಕಳಿಗಾಗಿ, ನೀನು ನಿನ್ನ ಹಿರಿಯ ಅತ್ತಿಗೆಯ ಪ್ರಾಣರಕ್ಷಣೆಗೆ ತೋರಿಸಿದ್ದ ಉದಾರಬುದ್ಧಿಗಾಗಿ, ಮತ್ತು ಮಗುವಿನ ಪ್ರಾಣವನ್ನು ನೀನು ರಕ್ಷಿಸಲು ಪಟ್ಟ ಶ್ರಮಕ್ಕಾಗಿ, ನಾನು ನಿನ್ನನ್ನು ಗೌರವಿಸುವೆನು. ಯಾವ ಪಾಪಬಲದಿಂದಲೋ ನಿನಗೆ ಈ ದುಷ್ಕಾರ್ಯಪ್ರವರ್ತನೆಯಾಯಿತಾದರೂ ಪಶ್ಚಾತ್ತಾಪದಿಂದ ನೀನು ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಬಿಟ್ಟೆ. ಇನ್ನು ನಿನಗ ಮುಂದೆ ಏನೂ ಶಿಕ್ಷೆಯಿಲ್ಲ. ನೀನು ಇನ್ನಾವ ಚಿಂತೆಗೂ ಮನಸ್ಸನ್ನು ಕೊಡಬೇಡ.

**ಕುಮಾರ:**— ಮುಂದಿನ ಉಪಾಯವೇನು ? ಭವಾನಿ, ಅಣ್ಣಯ್ಯ

ನನ್ನು ನೋಡಬೇಕಲ್ಲಾ ?

**ಭವಾನಿ** — ನೋಡುವೆ, ಸಿಧಾನಿಸು. ನಿನ್ನ ಅಣ್ಣಂದಿರು, ನಿನ್ನ ಮಗನ ಹೆಸರಿನಲ್ಲಿ ನಿನ್ನಪತ್ನಿಯ ದಹನಸಂಸ್ಕಾರಕ್ಕಾಗಿ ಹೋಗಿರುವರು. ಬಂದ ಬಳಿಕ ನೋಡುವೆ.

**ಕುಮಾರ** — (ಉಚ್ಚಸ್ವರದಿಂದ-)"ತಾಯೀ, ಏನೆಂದೆ? ಅಣ್ಣಂದಿರೇ ಹೋಗಿರುವರೇ? ಹಾಗಾದರೆ ತಾಯೀ, ಕೈಮುಗಿದು ಕೇಳುವೆನು. ನಾನಿಲ್ಲಿರಲಾರೆನು. ನನ್ನನ್ನು ಆನನ್ನ ಸಾಕುತಾಯಿಯ ಕಾಲಕೆಳಗೆ ಕೆಡಹು ಅಪ್ಪುಮಾಡು ! ಈಗಲೇ ..

(ಭವಾನಿಯೂ ಒಪ್ಪಿದಳು. ಧನ್ವಂತರಿ ಮತ್ತು ಕಮಲಾಕಾಂತರೂ ಸಮ್ಮತಿಸಿದರು. ಒಡನೆ ಗಾಡಿಯನ್ನು ತರಿಸಿ, ಕುಮಾರಶೇಖರನನ್ನು ಗಾಡಿಯಲ್ಲಿ ಮಲಗಿಸಿಕೊಂಡು ಭವಾನಿಯೂ ಧನ್ವಂತರಿಯೂ ಕುಳಿತು ಮೆಲ್ಲಹೆಯಲ್ಲಿ ಹೊರಟರು. ಕಮಲಾಕಾಂತನೂ ಬಾಗಿಲಿಗೆ ಬೀಗವನ್ನು ಹಾಕಿ, ಭದ್ರಪಡಿಸಿ ಹೊರಟುಹೋದನು.)

---

ಶ್ರೀ

# ತೃತೀಯ ಪರಿಚ್ಛೇದ.

(ಪರಸ್ಪರ ಸಂಭಾಷಣೆ, ಆಗಮನ, ಕ್ಲೇಶ, ಸಮಾಧಾನ ಇತ್ಯಾದಿ)

ಇಂದು ಲಕ್ಷ್ಮೀ ಸರಸ್ವತೀ ಪಾರ್ವತೀ ದೇವಿಯರು ಕಲೆತಂತೆ ದಯಾನಾಥಠಾಕೂರನ ಮನೆಯ ಮಹಡಿಯ ಮೇಲ್ಗಡೆಯಲ್ಲಿ ನಮ್ಮ ಪರಮಾದರ್ಶನಾರೀಮಣಿಯಾದ ಭವಾನೀದೇವಿಯೂ ಗೃಹಿಣೀಮಣಿಯಾದ ಹೇಮಲತಾದೇವಿಯೂ ಕ್ಷಮಾ ಔದಾರ್ಯಾದಿ ಗುಣಾಲಂಕೃತೆಯಾಗಿ ತೇಜಸ್ವಿನಿಯಾಗಿದ್ದ-ದಯಾನಾಥಠಾಕೂರನ ಪತ್ನಿ ಕಮಲಾದೇವಿಯೂ ಕಲೆತು, ವಿಚಾರವಿಮರ್ಶನದಲ್ಲಿ ತತ್ಪರರಾಗಿ ಕುಳಿತಿದ್ದರು. ಮೂವರೂ ಒಂದೆಡೆ ಕಲೆತು ಮಾಡುತ್ತಿದ್ದ ಸಂಭಾಷಣವು ಬಹು ಮುಖ್ಯವಾದುದರಿಂದ ಇಲ್ಲಿ ವಿವರಿಸುವೆವು.

**ಕಮಲಾ** — ಅಬ್ಬ! ಏನಮ್ಮಾ–ಹೇಮಲತಾ? "ಸ್ತ್ರೀಬುದ್ಧಿಃ ಪ್ರಳಯಂಕರೀ" ಎಂದಾಡುವುದು ನಿಜವೇ ಆಯಿತಲ್ಲವೇ?

**ಹೇಮ** — ನನಗದು ಚೆನ್ನಾಗಿ ಮಂದಟ್ಟಾಗಲಿಲ್ಲ.

**ಕಮಲಾ.**— ನೀನೂ ಹೇಳಲಾರೆಯೇನು, ಭವಾನಿ?

**ಭವಾನಿ:**— 'ನೀನೂ' ಎಂದರೆ, ನನ್ನ ತಲೆಯಮೇಲೇನು-ಕಿರೀಟವಿದೆಯೇ?

**ಕಮಲಾ:**— ನಸುನಗುತ್ತ–"ಇಲ್ಲ ಇಲ್ಲ, ಈಗಲೇನೂ ಕಿರೀಟವಿಲ್ಲ, ಆದಿನ ರಾತ್ರಿ, ಆ ಒಂದೇ ರಾತ್ರಿಯಲ್ಲಿ ಸುವಾಸನಾಮಯವಾದ ಪುಷ್ಪಕಿರೀಟವು ನಿನ್ನ ತಲೆಯ ಮೇಲಿದ್ದಿತು, ಅಂದು ನೀನು ಸಾಕ್ಷಾತ್ ಮಹಿಷಮರ್ದಿನಿಯಾದ ದುರ್ಗಾಭವಾನೀದೇವಿಯೇ ಆಗಿದ್ದೆ! ಆದುದರಿಂದಲೇ ಕಿರೀಟವೂ ಬಂದಿತು. ಇಂದೇನು, ನೀನೂ ನಮ್ಮಂತೆ ಒಬ್ಬಳು ಸಾಮಾನ್ಯ ಸ್ತ್ರೀ! ಈಗ ನಿನಗೆಲ್ಲಿಯ ಕಿರೀಟವು?

**ಭವಾನಿ:**— "ಏನನ್ನಾದರೂ ಹೇಳಿಕೊಳ್ಳಿರಿ, ಎಷ್ಟಾದರೂ ನೀವು ಅತ್ತೆ, ನಾವು ಸೊಸೆಯರು. ನೀವು ಹೇಳಿದಂತೆ ನಾವು ಕೇಳುವುದಷ್ಟೇ ನಮ್ಮ ಕೆಲಸವು.

**ಕಮಲಾ** — ಏನಮ್ಮಾ? ಮೆಲ್ಲನೆ, ಒಳ್ಳೆ ಮಾತಿನಿಂದಲೇ ನನ್ನನ್ನು, ಈ ಕಾಲದ ಅತ್ತೆಯೆಂದು ಹೇಳಿಬಿಟ್ಟೆ? ನನ್ನ ಕೈಕೆಳಗೆ ಸೊಸೆತನ ಮಾಡಿ ನೀವೆಂದೆಂದು, ಎಷ್ಟೆಷ್ಟು ಪಾಡುಪಟ್ಟಿರುವಿರಮ್ಮಾ? ಹೇಳಿರಿ–ನಾನೆಂದು ನಿಮ್ಮನ್ನು ಹುರಿದು ಮುಕ್ಕಿರುವುದು? ಎಂದೆಂದು, ನಿಮ್ಮ ಗಂಡಂದಿರಲ್ಲಿ ದೂರುಹೇಳಿ, ನಿಮ್ಮನ್ನು ಹೊಡೆಯಿಸಿ ಹಿಂಸಿಸಿರುವುದು? ನೀನಾದರೂ ಹೇಳಮ್ಮಾ–ಹೇಮಲತಾ?

**ಹೇಮ:**— (ನಸುನಕ್ಕು) 'ನಾನು ಅಷ್ಟನ್ನು ಹೇಳಲಾರೆನು. ಏಕೆಂದರೆ, ಓದುಬರಹವನ್ನು ಚನ್ನಾಗಿ ಕಲ್ತು, ಅದನ್ನು ಕಾರ್ಯ, ಕರಣ, ಕಲಾಪಗಳೆಲ್ಲದರಿಂದಲೂ ಸಾರ್ಥಕಪಡಿಸುವಷ್ಟು ಸಾಹಸವುಳ್ಳವರಿಗಾದರೆ, ಆ ಮಾತನ್ನು ಹೇಳಲಾಗುವುದು. ಅಷ್ಟೇಅಲ್ಲ, ನಾನು ನಿಮಗೆ ಕಿರಿಯ ಸೊಸೆ; ಮನೆಯನ್ನು ಬಿಟ್ಟು ಅತ್ತಿತ್ತ ಹೋಗುವಳಲ್ಲ. ಅಲ್ಲದೆ, ಈ ಕಾಲದವರಂತೆ ಸಾಹಸದ ಕೆಲಸಕ್ಕಾಗಲೀ, ನಾಗರೀಕತೆಗಾಗಲೀ ಕೈಹಾಕಿ

ದವಳೇ ಅಲ್ಲ ಇಷ್ಟಾಗಿ, ಯಾವಾಗಲೂ, ಹಳೆಯ 'ಗೊಡ್ಡು ವೈದಿಕ ಯುಗ'ದವಳೆಂದು ಹೇಳಿಸಿಕೊಳ್ಳುತ್ತಿರುವ ನನಗೆ, ನಿಮ್ಮ ಬಲವೇ ಬಲವಾಗಿರಬೇಕಲ್ಲದೆ, ನಿಮ್ಮ ಕಡೆಯ ಬೈಗುಳಕ್ಕೂ ಏಟಿಗೂ ಕಾರಣವೇನು? ಅಕ್ಕನಿಗೆಂದರೆ, ಒಂದೊಂದುವೇಳೆ ನಿಮ್ಮ ವಿಷಯದಲ್ಲಿ, ಹಾಗೆಯೇ ಆಗಿದ್ದರೂ ಇರಬಹುದು. ನಾನೇನು ಬಲ್ಲೆ?

**ಭವಾನಿ —** ಅಹುದು, ಅದೀಗ ದಿಟವಾದ ಮಾತು. ಆದರೆ ನೋಡು, ಹೇಮ! ನೀನು ಹೇಳಿದುದೆಲ್ಲವೂ ದಿಟವಲ್ಲ. ನನ್ನನ್ನು ಸಾಹಸವತಿಯೆಂದೆಯಲ್ಲವೆ? ನಾನಾಗಿ ಸಾಹಸವನ್ನು ತೋರಿರುವುದೆಲ್ಲಿ? ಎಲ್ಲವೂ ಇವರ ಬೋಧನೆ, ಮತ್ತು ಇವರ ಮಕ್ಕಳ ಕಟ್ಟಪ್ಪಣೆ.

**ಕಮಲಾ —** 'ಅದೀಗ ಸರಿ, ಅಹುದು, ಎಲ್ಲಕ್ಕೂ ನಾನೇ ಕಾರಣಳು. ಹಾಗೆಯೇ ಆಗಲಿ, ನೋಡು, ಹೇಮಲತಾ! ನನ್ನ ಪ್ರಭಾವವಾದರೂ ಎಷ್ಟುಮಟ್ಟಿನದಿರಬೇಕು? ಒಂದೇಒಂದಾದ ಸಾಮಾನ್ಯ ಸ್ತ್ರೀವ್ಯಕ್ತಿಯನ್ನು ಭಾವನಗರದ ವಿದ್ಯಾರ್ಥಿಯೆಂದೂ, ಕಮಲಾಕಾಂತನ ಆಪದ್ಬಂಧುವೆಂದೂ, ವಾಮನಗೋಸ್ವಾಮಿಯ ಸಹಾಧ್ಯಾಯಿಯೆಂದೂ ಹೇಳಿಕೊಳ್ಳಲನುವಾಗಿ 'ದುರ್ಗಾಚರಣ'ನೆಂಬ ಹೆಸರಿಂದ ಗೋಚರಕ್ಕೆ ತಂದಿತು. ಅಬಳಿಕಲೆಂದರೆ, ಭವಾನಿಯಾಗಿ, ವೃದ್ಧನಮಗಳು 'ದುರ್ಗೆ'ಯಾಗಿ, ಅಡವಿಯಡವಿ ಸುತ್ತಿ ಕಾಡುಜನರೊಡನೆ ಹೆಣಗಾಡಲು, ಗದಾ, ತ್ರಿಶೂಲ, ಪಿನಾಕ, ಪಾಶಗಳಿಂದ ಸಾಕ್ಷಾತ್ ಚತುರ್ಭುಜಧಾರಿಣಿಯಾದ ಮಹಿಷಮರ್ದಿನಿಯಾಗಿ, ಮತ್ತೆ ದ್ವಿಭುಜೆಯಾಗಿ, ಲಲಿತಾದೇವಿಯು, ಮತ್ತು ಭಟ್ಟಾಚಾರ್ಯರ ಬಂಧವಿಮೋಚನಾದಿ ಅಘಟನಘಟನಗಳಿಂದ ತನ್ನ ಪ್ರಭಾವವನ್ನು ವ್ಯಕ್ತಪಡಿಸಿತು. ಅದೂ ಹಾಗಿರಲಿ, ಹೇಮ! ನೋಡೇ, ಅದೊಂದೇ ವ್ಯಕ್ತಿಯ ಜಾಲವಿದ್ಯಾಪ್ರಭಾವದಿಂದ ವಿಧರ್ಮಿಗಳನ್ನು ಲೀಲಾಮಾತ್ರವಾಗಿ ಕೈಸೆರೆ ಹಿಡಿವಂತೆ ಮಾಡಲ್ಪಟ್ಟಿತಲ್ಲದೆ, ಭೈರವಮೂರ್ತಿ— ಉಹೂ!—ಅವನೆಂತಹ ಕಾಳಭೈರವ? ಕಮಲಾಕಾಂತನನ್ನು ಕಾಳಭೈರವನಾಗಿ ಮಾಡಬೇಕಾದರೆ, ಸಾಮಾನ್ಯ ಶಕ್ತಿಯೇ—ಅದು?

**ಹೇಮ:—** ಸಾಮಾನ್ಯವೆಂದು ಹೇಳುವರಾರು? ನೋಡಿರಿ, ಅತ್ತೆ, ಭಟ್ಟಾಚಾರ್ಯರ ಮನೆಯ ಮೇಲೆ ಶನಿ ವಕ್ರಿಸಿತೆಂದು ತಿಳಿದು ಬಂದೊಡನೆ,

ಆ ಶಕ್ತಿಪ್ರಭಾವವು ಹೇಗೆ ತಿರುಗಿತು? ಕುಮಾರಸೇನ ರಾಕೂರರಿಗೆ, ಹೇಳಲಾಗದ ಮತ್ತೂ ವಿವರಿಸಲಾಗದ ಹೃದ್ರೋಗವೂ, ಏನೂ ತಿಳಿಯದ ನಮ್ಮ ಅಕ್ಕನಿಗೆ, ಆ ಹಾಳು ಸುಂಟರಗಾಳಿಯ ಹೊಡೆತದ ಅಜ್ಞಾತ ರೋಗವೂ ಉಂಟಾಗಬೇಕೇ?

**ಕಮಲಾ:—** ನೀನೇ ನೋಡಮ್ಮ; ಇದೆಲ್ಲವೂ ನನ್ನ ಪ್ರೇರಣೆ ಯಿಂದಲೇ ಆಗಿರುವುದಷ್ಟೇ? ಆದರೆ, ಅರಿಯದ ಹುಡುಗಿ–ಭವಾನಿ! ಹೇಳು, ತಾಯೀ! ನನ್ನ ಮಗ ವಿಕ್ರಮಕುಮಾರನ ರೋಗನಿವಾರಣೆಗಾಗಿ, ದೇಶಸಂಚಾರಕ್ಕೆಂದು ಹೊರಟುಹೋಗಿದ್ದಿರಷ್ಟೇ? ಎಲ್ಲಿಯವರೆಗೆ ಹೋಗಿ ದ್ದಿರಿ? ಎಲ್ಲೆಲ್ಲಿ, ಎಷ್ಟೆಷ್ಟು ದಿನಗಳಿದ್ದಿರಿ? ಏನೇನು ವಿಶೇಷ ಪ ಯತ್ನ ಮಾಡಿದಿರಿ? ಅದನ್ನಾದರೂ ಹೇಳಬಲ್ಲೆಯೋ? ಅರೆಯೋ?

**ಭವಾನಿ:—** (ನಗುತ್ತ–) 'ಅತ್ತೆ! ತಿರುಗಿದುದು ಒಂದೆರಡು ಕಡೆ ಗಳಲ್ಲಲ್ಲ. ನೋಡಿದವಿಶೇಷಗಳು ಒಂದೆರಡಲ್ಲ. ಮಾಡಿದುದೇನು ಗೊತ್ತೇಇರುವುದು. ಹೊಟ್ಟೆಗೆ ತುಂಬುವುದು, ಬಟ್ಟೆಗೆ ಸರಿಮಾಡಿಕೊಳ್ಳು ವುದು, ಹೊತ್ತುಹೋಗುವುದಕ್ಕೆ ಮತ್ತು ಮನೋಲ್ಲಾಸಕ್ಕೆ ಕಾಡುಮೃಗ ಗಳೊಡನೆ ಆಡಿ–ಪಾಡುವುದು, ಇಷ್ಟೇ! ಅದು ಹೇಗೆ, ಎಲ್ಲಿ, ಎಷ್ಟೆಷ್ಟು ಎಂಬರೆ–ನನಗೆ ಗೊತ್ತೇ? ವೈದ್ಯರೇ ನಮ್ಮನ್ನು ಸುತ್ತಿಸಿ ಕರೆತಂದವರು. ಅವರನ್ನೇ ಕೇಳಿ ತಿಳಿಯಬಹುದಲ್ಲ?

**ಕಮಲಾ:—** ಸಾಕಮ್ಮಾಸಾಕು, ಮಾತಿನಲ್ಲಿ ಎಷ್ಟು ಕೊಂಕು ಬಿಂಕಗಳು? ಅಬ್ಬ! ಊರೂರು, ಕೇರಿಕೇರಿ, ಅಡವಿಯಡವಿಗಳನ್ನು ಅಲೆದಲೆದು ಬುದ್ಧಿ ಪ್ರಚಂಡವಾಗಿ ಹೋಗಿದೆ! ಇದನ್ನು ಸಹಿಸುವು ದೆಂದರೆ ಯಾರಿಂದಾದೀತು?

**ಭವಾನಿ.—** ಕೈಜೋಡಿಸಿ ನಗುತ್ತ–'ಅತ್ತೆಯವರೇ! ಕೋಪಿಸ ಬೇಡಿರಿ, ಕೈಮುಗಿಯುವೆನು, ಕ್ಷಮಿಸಿರಿ; ಇನ್ನುಮುಂದೆ, ತಮ್ಮ ಸನ್ನೆಯ ರಿತು ಕೆಲಸ ಮಾಡುವೆನು. ಕರುಣಿಸಿ, ಕಟ್ಟುಮಾಡಬಹುದಷ್ಟೆ?

**ಕಮಲಾ:—** (ತಲೆದೂಗಿ–) 'ಅದೀಗ ತಕ್ಕ ಮಾತು, ಮರ್ಯಾದೆಗೆ ಒಪ್ಪುವ ನಡತೆ;–ಪ್ರಕೃತಿಗೆ ತಕ್ಕ ಘನತೆ! ಆಗಲಿ, ಮುದ್ದಿನ ಸೊಸೆಯೇ! ಇನ್ನು ಕಟ್ಟು ಮಾಡುವೆನು.................'

ಕಮಲಾದೇವಿಯ ಮಾತು ಮುಗಿವುದಕ್ಕೆ ಮೊದಲೇ, ಒಳಗಣಿಂದ ಹೊರಟ–'ಅಯ್ಯೋ, ಅಪ್ಪಾ, ಇದೆಲ್ಲವೂ ನಮ್ಮ ಸಂಚಿತವಪ್ಪ, ಅವರೇನು ಮಾಡುವರು ? ನಾವು ಪಾಪಿಗಳು–ಇದನ್ನೆಲ್ಲಾ........' ಎಂಬ ಯಾತನಾ ಸ್ವರವೊಂದು ಕೇಳಬಂದು, ಆಕೆ, ಕುಳಿತಂತೆಯೇ ಬೆದರಿ, 'ಅದೇನದು ಅಳು ? ಇಲ್ಲಿಗೆ, ಇಷ್ಟು ಹೊತ್ತಿನಲ್ಲಿ ಅಳುತ್ತ ಬರುವರಾರು ?' ಎಂದು ಕೇಳಿದಳು.

**ಹೇಮ —** ಅತ್ತೆ ! ಹೀಗೆ ಚಕಿತರಾಗಬೇಕಾದುದಿಲ್ಲ. ಎಲ್ಲಕ್ಕೂ ತಮ್ಮ ಹಿರಿಯ ಸೊಸೆಯ ಮಾಟವೇ ಮೂಲವು. ಪ್ರಮದೆಯ ತಾಯ್ತಂದೆಗಳನ್ನು ಇಲ್ಲಿಗೆ ಬರುವಂತೆ ಬರೆದು ಕಳುಹಿದ್ದಳು. ಅವರೇ ಬಂದಿರಬಹುದಲ್ಲದೆ, ಮತ್ತಾರಿಲ್ಲಿ ಬರುವರು ?

**ಭವಾನಿ.—** ಮಾಟವೇನೂ ಇಲ್ಲ. ಅವರಿಗೆ ನಾಲ್ಕುಮಾತುಗಳನ್ನು ಹೇಳಿ, ಅವರ ಮುಖದಿಂದಲೇ ಪ್ರಮದೆಗೂ ಮತ್ತು ಮಧುಕರನಿಗೂ ಸಮಾಧಾನ ಪಡಿಸಬೇಕೆಂದು ಆಲೋಚಿಸಿ ಬರೆದಿದ್ದಿತು.

(ಇಷ್ಟರಲ್ಲಿ ಕಮಲಾಕಾಂತನು, ನರೆಗೂದಲಿನ ಮುತ್ತೈದೆಯೊಬ್ಬಳನ್ನೂ, ಮಾಸಿದತಲೆಯ ಬಾಡಿದಮುಖದ ಹದಿನಾರು ವರ್ಷದ ನವತರುಣಿಯೊಬ್ಬಳನ್ನೂ ಕರೆತಂದು, ಕಮಲಾದೇವಿಯ ಮುಂದೆ ನಿಲ್ಲಿಸಿದನು. ಕಮಲಾದೇವಿ ನಮ್ರತೆಯಿಂದ ಬಂದವರನ್ನು ಮರ್ಯಾದೆಯಿಂದ ಮುಂದೆ ಕುಳ್ಳಿರಿಸಿಕೊಂಡಳು. )

**ಕಮಲಾಕಾಂತ —**(ಕಮಲಾದೇವಿಯನ್ನು ಕುರಿತು–) 'ಅತ್ತಿಗೆ! ಇವರೇ ಪ್ರಮದಾದೇವಿಯ ತಾಯಿ; ಈಕೆ ಮಧುಕರನ ಪತ್ನಿ.' (ಎಂದು ಹೇಳಿ, ಮುದುಕಿಯನ್ನು ಕುರಿತು–) 'ತಾಯಿಾ– ಗಿರಿಜಾಬಾಯಿ ! ಈಕೆಯೇ ನ್ಯಾಯಮೂರ್ತಿಯವರ ಪತ್ನಿ ಈಕೆಯೇ ನಿಮಗೆ ಕಾಗದವನ್ನು ಬರೆದಿದ್ದ ವಿಕ್ರಮಸೇನರಾಕೂರರ ಪತ್ನಿ–ಭವಾನೀದೇವಿ. ಆಕೆ ದುರ್ಗಾಪ್ರಸಾದರ ಭಾರ್ಯೆ. ಇನ್ನು-ನಾನು ನಿಮ್ಮ ಯಜಮಾನರನ್ನು ವಿಚಾರಿಸಿಕೊಳ್ಳಲು ಹೋಗುವೆನು.. ನೀವೇನೂ ಆಲೋಚಿಸಬೇಕಾಗಿಲ್ಲ' ಎಂದು ಹೇಳಿ ಹೊರಟುಹೋದನು.

**ಗಿರಿಜಾ—** ( ಕಣ್ಣೀರು ತುಂಬಿ– ) 'ಹೇಳಿರಿ ತಾಯಿಾ ! ದಯೆ

ಯಿಟ್ಟು ಹೇಳಿರಿ; ಮಗಳು ಉಳಿದಿರುವಳೇ ? ಈ ಹುಡುಗಿಯ ಓಲೆಯ ಭಾಗ್ಯವನ್ನು ಉಳಿಸಿಕೊಡಲಾಗುವುದೇ ?.........'

**ಕಮಲಾ:**— ಅವ್ವಾ ! ಇಷ್ಟೊಂದು ಕಳವಳಪಡುವಿರೇಕೆ ? ಯಾರೇನು ಹೇಳಿದರು ?

**ಗಿರಿಜಾ.**—ಏನು ಹೇಳಲಮ್ಮ–ನನ್ನ ಹೊಟ್ಟೆಯ ಪುಣ್ಯವನ್ನು ! ನಿನ್ನೆಯ ಮಧ್ಯಾಹ್ನ ನಾವಿದ್ದಲ್ಲಿಗೆ ಮಗಳು, ಅಳಿಯ, ಮಗು ಮತ್ತು ಈ ಹುಡುಗಿಯ ಗಂಡ ಇವರೆಲ್ಲರಿಗೂ ತುಂಬಾ 'ಕಾಯಿಲೆ' ಯೆಂದೂ ಎಲ್ಲರಿಗೂ ನಾವೇ ಔಷಧೋಪಚಾರಗಳನ್ನು ಮಾಡುತ್ತಿರುವುದರಿಂದ ಈವೇಳೆಯಲ್ಲಿ ನೀವು ಬಂದರೆ ಎಷ್ಟೋ ಅನುಕೂಲವುಂಟೆಂದೂ ಹೇಳಿ, ಭವಾನೀದೇವಿಯ ಕಾಗದವು ಬಂದಿತು. ಒಡನೆಯೇ ಹೊರಟು ಬಂದು ಇಲ್ಲಿ ವಿಚಾರಿಸಿದುದರಲ್ಲಿ–" ಮಗಳ ಗಂಡನೂ, ಸವತಿಯೂ ಎಲ್ಲಿಗೋ ಹೊರಟು ಹೋದರೆಂದೂ, ಮಗಳ ಮಗುವನ್ನು ಯಾರೋ ಕಡಿದುಹಾಕಿದರೆಂದೂ, ಮಗಳು ತಲೆತಪ್ಪಿಸಿಕೊಂಡಿರುವಳೆಂದೂ, ಇದಕ್ಕೆ ಕಾರಣನು, ಈ ಹುಡುಗಿಯ ಗಂಡನೆಂದು ಹೇಳಿಕೊಳ್ಳುತ್ತಿರುವರೆಂದೂ, ಇನ್ನೂ ಏನೇನನ್ನೋ ಹೇಳಿದರು. ಅಲ್ಲಲ್ಲಿ ಕೇಳಿ ವಿಚಾರಿಸಿಕೊಂಡು, ಎಲ್ಲಿಯೂ ಸಮಾಧಾನದ ಮಾತನ್ನು ಕೂಡ ತಿಳಿಯದೆ ಇಲ್ಲಿಗೆ ಬರುತ್ತಿದ್ದೆವು, ದಾರಿಯಲ್ಲಿ ನಿಮ್ಮ ಮೈದುನನು ಮತ್ತಾರ ಜೊತೆಯಲ್ಲಿಯೋ ಹೋಗುತ್ತಿದ್ದವನು, ನಮ್ಮನ್ನು ವಿಚಾರಿಸಿ, ಇಲ್ಲಿಗೆ ಕರೆತಂದನು.

**ಭವಾನಿ** — ತಾಯಿ ! ನೀವು ಏನೂ ಆಲೋಚಿಸಬೇಡಿರಿ, ಆದರೆ ಒಂದು ಮಾತು, ತಾಯಿತಂದೆಗಳಿಗೆ ಮಕ್ಕಳಲ್ಲಿ ಪ್ರೀತಿ ಹೆಚ್ಚಾಗಿರುವುದೆಂಬುದನ್ನು ಎಲ್ಲರೂ ಬಲ್ಲರು ಅವರ ಪ್ರೀತಿ ಹೇಗೆ ಕಾರ್ಯಕಾರಿಯಾಗಬೇಕೆಂದರೆ, ಅವರ ಮುಂದಿನ ಸುಖಸಮಾಧಾನಗಳಿಗೆ ಸರಿಯಾದ ಶಿಕ್ಷಣದಲ್ಲಿಟ್ಟು, ಅವರನ್ನು ಸರ್ವಪ್ರಕಾರದಿಂದಲೂ ಅನುಕೂಲದಾಂಪತ್ಯಾನುರಾಗವುಂಟಾಗುವ ಕಡೆಯಲ್ಲಿ ದಾನಮಾಡಿದರೆ ಮಾತ್ರ, ಆ ತಂದೆತಾಯಿಗಳ ಪ್ರೀತಿಗೆ ಬೆಲೆಯುಂಟು.

**ಗಿರಿಜಾ** — ( ಉದ್ವೇಗದಿಂದ ) " ತಾಯಿ, ಏನಂದೆಯಮ್ಮಾ ? ಈಗ ನಾವು ಕೊಟ್ಟಿರುವಕಡೆಯೇನು, ಕಡಮೆಯಾದುದೇ ? ಇಲ್ಲ, ಅವಳ

ಗಂಡನು ಅವಳಲ್ಲಿ ಪ್ರೀತಿಯನ್ನು ಸ್ವಲ್ಪವಾಗಿಟ್ಟಿದ್ದನೇ? ಹೀಗೆಲ್ಲಾ ಆಗುವದೆಂದು ನಮಗೇನು ಗೊತ್ತು? ತಾಯಿ! ಎಲ್ಲವೂ ಅವಳ ಗ್ರಹಚಾರ!" ಎಂದಳು.

**ಭವಾನಿ** — ಅವಳ ಗ್ರಹಚಾರವೊಂದೇ ಕಾರಣವಲ್ಲ, ತಾಯಿ! ನೋಡಿ, ಪಾತ್ರವೇನೋ ಅತ್ಯುತ್ತಮವೇ ಅಹುದು. ಆದರೂ, ತಮ್ಮ ಮಗಳನ್ನು ಮೊದಲು ಯಾರ ಒಡವೆಯಾಗಿ ಸಂಕಲ್ಪಿಸಿ ಒಳೆಯಿಸಿದಿರಿ? ಮೊದಲೆ ಹಾಗೇಕೆ ಮಾಡಬೇಕಾಗಿದ್ದಿತು? ಆದುದರಿಂದಲೇ ಅಲ್ಲವೇ ಈಗ ತಮ್ಮ ಮಗಳಮೂಲಕವಾಗಿ ಅವರ ಮನೆಯವರ ಇಷ್ಟರ ಹಾನಿಗಳಿಗೂ ತಾವೇ ಬೀಜಪ್ರಾಯವಾದಿರಿ? ಮಗಳ ಪ್ರೀತಿ ಮನೆಯ ಹುಡುಗನಲ್ಲಿಯೇ ಇದ್ದರೂ ಅವನೂ ನಿಮ್ಮ ಅಕ್ಕರೆಯಿಂದ ಬಳದವನೇ ಆಗಿದ್ದರೂ, ಮಗಳನ್ನು ತಿಳಿತಿಳಿದೇ ಬೇರೆಯವರಿಗೆ ಕೊಡಬೇಕಾದರೆ?........ ... ...

**ಗಿರಿಜಾ** — (ಉದ್ವೇಗದಿಂದ) "ಹಾಗಾದರೆ, ನನ್ನ ಮಗಳು ಕೆಟ್ಟುಹೋದಳೇ? ಹೇಳು, ತಾಯಿ, ಬೇಗಹೇಳು! ನಮ್ಮಿಂದಲೇ ತಪ್ಪಾಯಿತೆಂದು ಒಪ್ಪಿಕೊಳ್ಳುವೆನು. ಆದರೆ ಇಷ್ಟು ಹೇಳು. ನನ್ನ ಮಗಳು, ಹುಟ್ಟಿದ ಮತ್ತು ಹೊಕ್ಕ ಕುಲಗಳಿಗೆ ಮೃತ್ಯುವಾದಳೇ? ಏನಾದರೂ ನಡತೆಯಲ್ಲಿ ಕಲಂಕವು ಕಾಣಬಂದಿರುವುದೇ? ಹಾಗಿದ್ದರೆ, ಈಗಲೇ ಇಲ್ಲಿಂದಿಲ್ಲಿಯೇ ಹೊರಟುಹೋಗುವೆನು." ಎಂದಳು.

**ಭವಾನಿ:**— ಅಮ್ಮ, ಸ್ವಲ್ಪ ತಾಳ್ಮೆಯನ್ನು ತೆಗೆದುಕೊಳ್ಳಿರಿ; ಯಾರಿಗೂ ಯಾವ ಬಗೆಯ ಹಾನಿಗೂ ಅವಕಾಶ ದೊರೆಯಲಿಲ್ಲ. ಎಲ್ಲರೂ ಮಾನ, ಪ್ರಾಣ, ಧನಗಳೊಡನೆ ಸುರಕ್ಷಿತರಾಗಿರುವರು. ನಿಮ್ಮ ಮಗಳು ಹೊಕ್ಕ ಮನೆಯವರ ಸದ್ವೃತ್ತಕ್ಕೂ, ಪತಿಯ ಕ್ಷಮಾಗುಣಕ್ಕೂ, ಸಪತ್ನಿಯ ನೀತಿಶಿಕ್ಷಣದ ದಕ್ಷತೆಗೂ ಒಳಪಡದೆ, ಮತ್ತೆಲ್ಲಿಗಾದರೂ ಕೊಡಲ್ಪಟ್ಟಿದ್ದರೆ, ನೀವು ಹೇಳಿದಂತೆಯೇ ಆಗುತ್ತಿದ್ದಿತು, ಈಗ ಹಾಗಾಗಲಿಲ್ಲ. ಈಗಲೀಗ ಅವಳ ಮನಸ್ಸಿನಲ್ಲಿ ಕರ್ತವ್ಯಸ್ಫೂರ್ತಿಯೂ, ಸ್ವರೂಪವಿಜ್ಞಾನವೂ ಅಂಕುರವಾಗಿ, ಕುಕಾರ್ಯಕ್ಕೆರಗದಿದ್ದರೂ, ಮನಃಪೂರ್ವಕವಾಗಿ ಪತಿಸೇವೆಯಲ್ಲಿ ನಿರತೆಯಾಗದಿದ್ದುದಕ್ಕೂ, ಗೃಹಕಾರ್ಯನಿರ್ವಾಹದಲ್ಲಿ ತನ್ನ ಮರ್ಯಾದೆಗೆ ತಕ್ಕಂತೆ ನಡೆಯದಿದ್ದುದಕ್ಕೂ ಪಶ್ಚಾತ್ತಾಪ ಹೊಂದಿರುವಳು.

**ಗಿರಿಜಾ**—( ಗದ್ಗದಸ್ವರದಿಂದ ) ' ತಾಯಿ ! ಅಷ್ಟುಮಟ್ಟಿಗಾದು ದಕ್ಕೆ ಆ ಪರಮೇಶ್ವರನ ಅನುಗ್ರಹವೂ, ಪಾರ್ವತೀದೇವಿಗೆ ಸಮಾನರಾದ ನಿಮ್ಮಗಳ ಸಹಾಯವೂ ಕಾರಣವೆಂದು ಭಾವಿಸುತ್ತೇನೆ. ಆದರೆ ನೋಡು, ತಾಯಿ ! ಈ ಹುಡುಗಿಯ ದುಃಖವನ್ನು ನೋಡಿ ಸಹಿಸಲಾರೆನು. ಹಗ ಲಿರುಳೂ ಗಂಡನ ನಡತೆಗಾಗಿ ಅನ್ನನೀರು ಬಿಟ್ಟು, ಪರಮೇಶ್ವರನಲ್ಲಿ ಮೊರೆ ಯಿಡುತ್ತಿರುವಳು. ಈ ಹುಡುಗಿ ನಮ್ಮ ಮನೆಗೆಬಂದು ಒಂದು ವರ್ಷವಾ ಗುತ್ತ ಬಂದರೂ, ಒಂದು ದಿನವಾದರೂ, ಈ ಪಾಪ ಹುಡುಗಿಗೆ ಪತಿಸಲ್ಲಾ ಪಸುಖದ ಮಾತೇ ಇಲ್ಲ. ಹೇಗಾದರೂ ಇರಲೆಂದಿದ್ದರೆ, ಜೀವದ ಮೇಲೆಯೇ........

**ಭವಾನಿ.**— ತಾಯಿ ! ಹುಡುಗಿಯನ್ನು ಸಮಾಧಾನಪಡಿಸಿರಿ. ಇವಳ ಮನೋಯೋಗಬಲದಿಂದ ಅವನೂ ಸನ್ಮಾರ್ಗಗಾಮಿಯಾಗುವನು. ಪತಿಯ ಶೀಲ, ಧರ್ಮ—ಇವುಗಳಿಗೆಲ್ಲಕ್ಕೂ ಪತ್ನಿಯ ಆತ್ಮವಿಶ್ವಾಸವೇ ಕಾರ ಣವು. ಅವಳಲ್ಲಿ ಆತ್ಮಜ್ಞಾನಸ್ವರೂಪವೊಂದು ಚೆನ್ನಾಗಿದ್ದರೆ, ಪತಿಯೆಂತಹ ದುಷ್ಕರ್ಮಿಯಾಗಿರಲಿ, ದಾರಿಗೆ ಬಂದೇಬರುವನು, ಸಂಶಯವಿಲ್ಲ. ....

( ಭವಾನಿ ಹೇಳುತ್ತಿದ್ದಾಗಲೇ ಕುಳಿತಿದ್ದ ಮಧುಕರನ ಪತ್ನಿ, ದುಃಖವನ್ನು ತಡೆಗಟ್ಟಲಾರದೆ ಅಳುತ್ತಳುತ್ತ ಭವಾನಿಯ ಕಾಲನ್ನು ಹಿಡಿದು–) " ಅಕ್ಕಾ ! ನನ್ನನ್ನೂ ನಿಮ್ಮ ಒಡಹುಟ್ಟಿದವಳೆಂದು ತಿಳಿದು ಕೈಹಿಡಿಯಿರಿ. ಇಷ್ಟಕ್ಕೂ ನನ್ನ ದೌರ್ಭಾಗ್ಯವೇ ಮೂಲವು. ಅವರು ನನ್ನಲ್ಲಿ ಉದಾಸೀನರಾಗಿದ್ದರೂ, ಇಲ್ಲವೇ ನನ್ನನ್ನು ದ್ವೇಷಿಸುತ್ತಿದ್ದರೂ ನನಗೆ ದುಃಖವಿಲ್ಲ. ಹೇಗಾದರೂ ಅವರು ಜೀವದಿಂದಿದ್ದರೆ ಸಾಕು. ಅಕ್ಕ, ಇಂದಿನವರೆಗಾದ ಅಪರಾಧಕ್ಕೆ ಇನ್ನಾವುದಾದರೂ ಶಿಕ್ಷೆಯನ್ನು ತೋರಿಸಬಹುದಾದರೆ ಸರಿ, ಇಲ್ಲದೆ ಅವರ ಜೀವಕ್ಕೇ ಅಪಾಯವು ತೋರುವುದಾದರೆ, ಮೊದಲು ನನ್ನನ್ನು.... ......."

**ಭವಾನಿ:**— ( ಅವಳನ್ನು ಕೈಹಿಡಿದೆಬ್ಬಿಸಿ–) ' ತಂಗಿ ! ನೀನು ಅಳ ಬೇಡ. ನಿನ್ನ ಗಂಡನನ್ನು ನಾವು ಹೊರಗಿನವನೆಂದೇನೂ ತಿಳಿದಿಲ್ಲ. ಹೇಗಾದರೂ ಬಿಡಿಸುವೆವು, ಶಾಂತೆಯಾಗು. ' ಎಂದಳು.

**ಹುಡುಗಿ:**— ( ಕಣ್ಣೀರು ತುಂಬಿ– ) ' ಅಕ್ಕಾ ! ಹೆಂಗರುಳೆಂದು

ತಮ್ಮಲ್ಲಿ ಇಷ್ಟನ್ನು ಹೇಳಿಕೊಂಡೆನು. ಇನ್ನು ಹೇಗಾದರೂ........'

ಅಷ್ಟರಲ್ಲಿ ಕಮಲಾಕಾಂತನು ಬಂದು—'ತಾಯಿ, ಭವಾನಿ! ಈಗಲೇ ಬರಬೇಕೆಂದು ನಿನಗೆ ಪತ್ಯಾಜ್ಞೆಯಾಗಿದೆ.' ಎಂದನು.

**ಕಮಲಾ**— ಓಹೋ! ಹೊರಡಮ್ಮ—ಹೊರಡು, ಮತ್ತಾವ ಅಗತ್ಯದ ಕೆಲಸವ್ಪೋ ತಿಳಿಯಲಿಲ್ಲ.

**ಭವಾನಿ,**—(ಎದ್ದುನಿಂತು—) "ಹೇಗಾದರೂ ಹೇಳಿರಿ, ಅತ್ತೆ! ಇವರಿಗೆ ತಕ್ಕಂತೆ ಧೈರ್ಯವನ್ನು ಹೇಳುತ್ತಿದ್ದರೆ ನಾನೂ ಬೇಗಬರುವೆನು." (ಮಧುಕರನ ಪತ್ನಿಯನ್ನು ಕುರಿತು—) 'ತಂಗೀ, ನೀನೇನೂ ಕಳವಳಪಡ ಬೇಕಾದುದಿಲ್ಲ, ನಿನ್ನ ಭಾಗಕ್ಕೆ ದೇವರಿರುವನು, ಇನ್ನೊಂದೆರಡು ಗಳಿಗೆ ಯಲ್ಲಿ ನಾನೇ ಬಂದು ನಿನ್ನನ್ನು ಕರೆದುಕೊಂಡು ಹೋಗುವೆನು. ಅದು ವರೆಗೆ ನೀನಿಲ್ಲಿ ಧೈರ್ಯವಾಗಿರು. ಹೊರಡಲೇ?' ಎಂದಳು.

**ಮಧುಕರನ ಪತ್ನಿ**— ಕಣ್ಣೀರುತುಂಬಿ— "ಅಕ್ಕ! ಹೊರಡಿರಿ. ಹೇಗಾದರೂ ಸಂತೋಷ. ಪತಿಭಾಗ್ಯವಿದ್ದರೆ, ಒಂದೆರಡು ದಿನವಾದರೂ ಸೇವಿಸಿ ಕೃತಾರ್ಥೆಯಾಗುವೆನು. ಇಲ್ಲವಾದರೆ ಈಗಲೇ ನಾಯಲಿಕ್ಕೂ, ಸಿದ್ಧಳಾಗಿರುವೆನು. ಇನ್ನು ನನಗೆ ದುಃಖವೆಲ್ಲಿಯದು? ನಾಚಿಕೆ—ಭಯ ಗಳಾದರೂ ಏಕೆ?" ಎಂದು ನಿಂತುಕೊಂಡಳು.

ಹೇಮಲತೆಯೂ, ಕಮಲಾದೇವಿಯೂ ಎದ್ದುನಿಂತು ಮಧುಕರನ ಪತ್ನಿಯನ್ನು ಕೈಹಿಡಿದುಕೊಂಡು 'ಏಳಿರಿ. ಗಿರಿಜಾಬಾಯಿ! ಇನ್ನು ನಡೆ ಯಿರಿ, ಸ್ನಾನ—ಪಾನಗಳ ಕೆಲಸಗಳನ್ನು ಮುಗಿಯಿಸಿಕೊಂಡು ಆ ಬಳಿಕ ಉಳಿದ ಕೆಲಸಗಳನ್ನು ಮಾಡುವಿರಂತೆ! ಭಯ, ಶೋಕ, ಕಳವಳಗಳೆಲ್ಲವೂ ನಿನ್ನೆಯವರೆಗಿದ್ದುವು, ಈಗಲೇನೂ ಇಲ್ಲ.' ಎಂದು ಗಿರಿಜಾಬಾಯಿಯನ್ನು ಬಲಾತ್ಕಾರದಿಂದ ಎಬ್ಬಿಸಿದಳು. ಭವಾನಿ, ಕಮಲಾದೇವಿಯಿಂದಪ್ಪಣೆ ಹೊಂದಿ ಕಮಲಾಕಾಂತನೊಡನೆ ಹೊರಟುಹೋದಳು. ಕಮಲಾದೇವಿ— ಹೇಮಲತೆಯರೂ ಅವರಿಬ್ಬರನ್ನೂ ಕರೆದುಕೊಂಡುಹೊರಟರು.

---

ಶ್ರೀ.

# ಚತುರ್ಥ ಪರಿಚ್ಛೇದ

"ಸುಷೇಣಮುಹಿತಾಚೇಯಮರ್ಥ ಸೂಕ್ಷ್ಮವಿನಿಶ್ಚಯೇ ।
ಔತ್ಪಾತಿಕೇಚ ವಿವಿಧೇ ಸರ್ವತಃ ಪರಿನಿಷ್ಠಿತಾ ।
ಯದೇಷಾ ಸಾಧ್ವಿತಿ ಬ್ರೂಯಾತ್ಕಾರ್ಯಂತನ್ಮುಕ್ತಸಂಶಯಮ್ ॥'
(ರಾಮಾಯಣ)

(ಪ್ರಮಾಣ, ದೀರ್ಘಾಲೋಚನೆ, ಪರಾಮರ್ಶ ಇತ್ಯಾದಿ.)

ದುರ್ಗಾಪ್ರಸಾದಠಾಕೂರನ ಮನೆಯ ಮುಂಗಡೆಯ ಓಲಗಸಾಲೆಯಲ್ಲಿ ಚಾಪೆಯಮೇಲೆ ಅನಾಥಬಂಧು—ವಿಕ್ರಮಕುಮಾರ, - ನ್ಯಾಯಮೂರ್ತಿದಯಾನಾಥಠಾಕೂರ, ದುರ್ಗಾಪ್ರಸಾದ, ಅಭಿನವ ಧನ್ವಂತರೀಮಹಾಶಯ—ಈನಾಲ್ವರೂ ಆಲೋಚನೆಯಲ್ಲಿ ಕುಳಿತಿದ್ದರು. ಕುಮಾರಶೇಖರನು ಅಂದು ಒಪ್ಪಿಸಿದ್ದ ಪ್ರಮಾಣಪತ್ರಿಕೆಯನ್ನು ವಿಕ್ರಮಕುಮಾರನು ಹಿಡಿದು ಓದುವುದರಲ್ಲಿದ್ದನು. ಉಳಿದವರು ಅದನ್ನು ಕೇಳಲು ಕುತೂಹಲಗೊಂಡು ಕುಳಿತಿದ್ದರು. ಪ್ರಮಾಣಪತ್ರಿಕೆಯಲ್ಲಿ ಹೀಗೆ ಬರೆದಿದ್ದಿತು.

"ಕಲ್ಯಾಣನಗರದ ನ್ಯಾಯಮೂರ್ತಿಯವರ ಸನ್ನಿಧಾನದಲ್ಲಿ—

ಇಲ್ಲಿಯ ಪೋಲೀಸ್ ಸೂಪರಿಂಟೆಂಡೆಂಟರವರ ಕೈಕೆಳಗೆ 'ಗುಮಾಸ್ತ'ನಾಗಿದ್ದ ಕುಮಾರಶೇಖರನು ನಿವೇದಿಸುವುದೇನಂದರೆ –

"ಧರ್ಮಾವತಾರ! ನಾನು ಪರಮಪಾಪಿ, ನರಾಧಮನು, ನೀತಿಬಾಹಿರನು ಮತ್ತು ಸ್ವಾಮಿದ್ರೋಹಿ. ಇಂತಿರುವ ನಾನು ಈ ನನ್ನ ಕರ್ಮಫಲಾನುಭವದ ಪಶ್ಚಾತ್ತಾಪಾಗ್ನಿಯಲ್ಲಿ ದಗ್ಧಹೃದಯನಾಗಿ, ಪ್ರಾಯಶ್ಚಿತ್ತಕ್ಕೆ ತೊಡಗಿರುವುದೇನೂ ಆಶ್ಚರ್ಯವಲ್ಲ. ಆ ಪ್ರಾಯಶ್ಚಿತ್ತಕ್ಕೆ ಇನ್ನು ಒಂದೆರಡು ಗಳಿಗೆಯಷ್ಟೇ ಅವಧಿಯಿರುವದರಿಂದ ಇದುವರೆಗಿನ ನನ್ನ ಕುತ್ಸಿತಚರಿತ್ರೆಯನ್ನು ಸನ್ನಿಧಿಯಲ್ಲಿ ನಿವೇದಿಸುತ್ತಿರುವೆನು. ಇದರಿಂದ ನನ್ನ ಅನುಬಂಧಿಗಳಾದ ಇತರರ ಮೇಲಿನ ಆರೋಪ, ಅಪರಾಧ ಇವುಗಳ ನಿಜಸ್ವರೂಪವು ಸ್ಪಷ್ಟವಾಗಿ ತಿಳಿಯಬಂದು ಪ್ರಜಾಕ್ಷೇಮವನ್ನುಂಟುಮಾಡು

ವಂತಾಗಬಹುದೆಂದು ನಂಬಿರುವೆನು. ಪ್ರಭುವೇ! ಹೆಚ್ಚು ಬರೆಯಲಾರೆನು. ಒಂದೆರಡು ಮಾತುಗಳಲ್ಲೇ ಮುಗಿಸಬೇಕೆಂಗಿರುವುದು. ನಾನು ಭಟ್ಟಾಚಾರ್ಯರ ಕಿರುತಂದೆಯ ಮಗನು, ಭಟ್ಟಾಚಾರ್ಯರೇ ನನ್ನನ್ನು ಸಾಕಿದವರು. ಹೆತ್ತ ತಂದೆತಾಯಿಗಳ ಮುಖವನ್ನು ನಾನು ಚೆನ್ನಾಗಿ ಕಂಡವನಲ್ಲದಿದ್ದರೂ, ಸಾಕುತಾಯಿತಂದೆಗಳಾದ ಲಲಿತಾದೇವಿ ಮಧುಸೂದನ ಮಹಾಮಹೋಪಾಧ್ಯಾಯರ ಆದರದಿಂದ ಈವರೆಗೂ ಪಾಲಿಸಲ್ಪಟ್ಟೆನಲ್ಲದೆ, ಮುಂದೆಯೂ ಅವರ ಅಂತಃಕರಣದ ಆಶೀರ್ವಾದದಿಂದಲೇ ನನ್ನ ಆತ್ಮಕ್ಕೆ ಶಾಂತಿಯುಂಟಾಗಬೇಕು."

"ಅವರು ನನ್ನನ್ನು ಎಷ್ಟೋ ಅಕ್ಕರೆಯಿಂದ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೂ ಹೆಚ್ಚಾಗಿ ಸಾಕಿದರು. ನನ್ನ ಸುಖಕ್ಕಾಗಿ, ನನಗೆ ಅಶನ ವಸನಗಳಿಗೆ ತಕ್ಕಮಟ್ಟಿಗೂ ಸುವ್ಯವಸ್ಥೆಗಳನ್ನು ಮಾಡಿಯೇ ನನ್ನನ್ನು ನನ್ನ ಸಂಸಾರದೊಡನೆ ಪ್ರತ್ಯೇಕ ಗೃಹದಲ್ಲಿರಿಸಿದರು. ಮೂರ್ಖನಾದ ನಾನು, ದುಂದುಗಾರರ ಸಹವಾಸದಲ್ಲಿ ಸೇರಿ ಬರಿದಾದೆನಲ್ಲದೆ, ದುರಾಶಾ ಪಿಶಾಚಗ್ರಸ್ತೆಯಾದ ಹೆಂಡತಿಯ ನಿರ್ಬಂಧ, ಕುತ್ಸಿತರ ದುರ್ಬೋಧೆ–ಇವುಗಳಿಂದ ವಿಕಲ್ಪಕ್ಕೂ ಗುರಿಯಾಗಿ, ಉಚಿತಾನುಚಿತ ಪ್ರಜ್ಞೆಯನ್ನು ಕಳೆದು ಕೊಂಡು, ಕೆಲವು ದಿನಗಳಲ್ಲಿಯೇ ಆ ನನ್ನ ಸಾಕುತಾಯಿತಂದೆಗಳನ್ನು ವಂಚಿಸುವುದಕ್ಕೆ ಮೊದಲುಮಾಡಿದೆನು. ವಂಚಕನಾಗಿ ತಿರುಗುತ್ತಿದ್ದ ನನಗೆ ಈಗ ಒಂದು ವರ್ಷದಲ್ಲಿ ಮಧುಕರನೂ ಸೇರಿದನು! ಇಬ್ಬರೂ ಒಂದಾದೆವು."

"ಮಧುಕರನು ಇಲ್ಲಿಗೆ ಬರುವುದಕ್ಕೆ ಮೊದಲೇ ಅವನು ಭಟ್ಟಾಚಾರ್ಯರ ಮನೆಯಮೇಲೆ ಕಣ್ಣಿಟ್ಟಿದ್ದವರ ಒಳಸಂಚನ್ನೂ, ಅವರ ನೆಲೆ, ಸುಳಿವುಗಳನ್ನೂ ಅವರು ಇತರ ಸ್ಥಳಗಳಲ್ಲಿ ಅಡಿಗಡಿಗೆ ಮಾಡುತ್ತಿದ್ದ ಕೊಲೆ, ಸುಲಿಗೆಗಳನ್ನೂ ಕೇಳಿ, ನೋಡಿ, ತಿಳಿದುಕೊಂಡು ಬಂದಿದ್ದುದರಿಂದ ಅವನು ನಮ್ಮಲ್ಲಿಗೆ ಬಂದುದು ರಕ್ಕಸಿಯಾದ ನನ್ನ ಪತ್ನಿಯ ದುರಾಶೆಗೆ ಅತ್ಯಂತ ಸಹಕಾರಿಯೇ ಆಗಿ ತಿರುಗಿತು. ಹೆಚ್ಚೇಕೆ, ನಾನೇ ಅವಳ ಆಳಾದೆನು."

"ಮಧುಕರನೊಡನೆ ಸೇರಿದ ಬಳಿಕ ನಾನು ಅಣ್ಣನನ್ನೂ ಅತ್ತಿಗೆಯನ್ನೂ ಪ್ರಾಣಾಪಾಯಕ್ಕೆ ಗುರಿಮಾಡದಂತೆ ನಿರ್ಬಂಧದಲ್ಲಿಮಾತ್ರ ಇರಿ

ಸಿದ್ದು ಅವರಿಂದ ಉಪಾಯವಾಗಿ ಸ್ವತ್ತುಗಳೆಲ್ಲವನ್ನೂ ವಿಕ್ರಯರೂಪವಾಗಿ ಬರೆಯಿಸಿಕೊಳ್ಳುವುದಕ್ಕೂ, "ಪ್ರಮದೆಯು ದುರಾಚಾರಕ್ಕೆ ಪ್ರವರ್ತಿಸಿದು ದನ್ನು ತಿಳಿದು ಶಿಕ್ಷಿಸಿದೆವಾಗಿ, ಅವಳು ಆತ್ಮಹತ್ಯೆಯನ್ನು ಮಾಡಿಕೊಂಡಳು" ಎಂಬ ಸುಳ್ಳು ಕಾಗದವನ್ನು ಹುಟ್ಟಿಸುವುದಕ್ಕೂ ಆಲೋಚಿಸಿ, ನಮ್ಮ ಉದ್ದೇಶಸಿದ್ಧಿಗಾಗಿ ಗಡಿಯವರೊಡನೆ ಸಂಧಿಮಾಡಿಕೊಂಡೆವು. ಈ ನಮ್ಮ ಕೆಲಸಗಳನ್ನು ನೆರವೇರಿಸಲು ಅವರಿಗೆ ಪ್ರತಿಫಲವಾಗಿ ನಾಲ್ಕನೇಯ ಒಂದುಪಾಲು ಸ್ವತ್ತನ್ನು ಕೊಡುವುದೆಂದು ಗೊತ್ತುಮಾಡಿದ್ದೆವು. ಅವರ ದರಂತೆಯೇ ಮಾಡುತ್ತ ಬಂದರು. ನಾವು ಇಲ್ಲಿದ್ದು ಸಲಕರಣೆಗಳನ್ನು ಒದಗಿಸಿಕೊಡುತ್ತ ಬಂದೆವು."

"ಮುಖ್ಯವಾಗಿ ಇಷ್ಟು ಅನರ್ಥಗಳಿಗೂ ನಾನೇ ಕಾರಣನೆಂದರೆ ಸಾಕು. ಹೇಗೆಂದರೆ, ನಾನು ಪತ್ನಿಯನ್ನು ಧಿಕ್ಕರಿಸಿದ್ದರಾಗಲಿ, ಮಧು ಕರನ ದುರಭಿಸಂಧಿಗೆ ಸೇರದೆ ಪ್ರತಿಕೂಲನಾಗಿದ್ದರಾಗಲಿ, ಇದು ನಡೆ ಯುತ್ತಿರಲಿಲ್ಲ, ಹಾಗಾಗದೆ ನಾನೇ ಮುಂದಾದೆನು. ಅಂದು ನ್ಯಾಯ ಮೂರ್ತಿಗಳ ಕೈಗೆ ಸಿಕ್ಕಿದ ಸೂಚನಾಪತ್ರವನ್ನು ಪುಸ್ತಕದಲ್ಲಿರಿಸಿದವನು ನಾನೇ. ಮುಖ್ಯವಾಗಿ ನನ್ನ ದುರ್ಮಂತ್ರಕ್ಕೆ ಮನೆಯವರೆಲ್ಲರೂ ಎಂದರೆ- ನಮ್ಮ ಅಣ್ಣ, ಅತ್ತಿಗೆ, ಕಿರಿಯತ್ತಿಗೆ-ಇವರ ಹೊರತು ಉಳಿದವರೆಲ್ಲರೂ ಒಳಪಟ್ಟಿದ್ದರೆಂದರೆ ನಾಕು."

" ಮತ್ತೊಂದು ಮಾತು ಉಳಿಯಿತು. ಅದು ನನ್ನ ದೊಡ್ಡಪ್ಪನವರ ಮರಣವೃತ್ತಾಂತ. ಅವರ ಮರಣಕ್ಕೆ ನಾನು ಕಾರಣನಲ್ಲವಾದರೂ ಹೆಮ್ಮಾರಿಯಾದ ನನ್ನ ಹೆಂಡತಿ ವಿಷಪ್ರಯೋಗಮಾಡಿದಳೆಂಬ ವಿಚಾರವನ್ನು ಕೇಳಿದ ಬಳಿಕಾದರೂ, ಅವಳನ್ನು ದಂಡಿಸದೆ ಮೂಕನಂತೆ ಸುಮ್ಮನಿದ್ದುದ ರಿಂದ ನಾನೂ ಆ ಪಾತಕಕ್ಕೆ ಭಾಗಿಯೇ ಸರಿ. ಧರ್ಮಾವತಾರ! ಇನ್ನು ವಿವರಿಸಲು ವೇಳೆಯಿಲ್ಲ. ಹೊರಗೆ ಕೂಗುತ್ತಿರುವರು. ನಾನಿನ್ನು ವಿಳಂ ಬಿಸಲಾರೆನು; ಇದೋ ಯಮಲೋಕಕ್ಕೆ ಹೊರಡುವೆನು. ಹೊರಡುವು ದಕ್ಕೆ ಮೊದಲು ಮತ್ತೊಂದು ಮಾತು,-ನನ್ನ ಅಣ್ಣಂದಿರ ಮಗು ಪ್ರದ್ಯು ಮ್ನನನ್ನು ಈವರೆಗೆ ನಾನು ರಾತ್ರಿಯ ಕಾಲದಲ್ಲಿ ಹೊರತು, ಉಳಿದ ಕಾಲದ ಲ್ಲೆಲ್ಲಾ ನನ್ನ ನಂಬಿಕೆಯ ರೈತರ ಬಳಿಯಲ್ಲಿ ಬಿಟ್ಟು ರಕ್ಷಿಸಿಕೊಂಡು ಬಂದು,

ಇಂದು ಮರಿಯನ ಮೂಲಕವಾಗಿ ದುರ್ಗಾಪ್ರಸಾದರಲ್ಲಿ ಒಪ್ಪಿಸಲು ಕಳಿಹಿರುವೆನು. ಅಲ್ಲದೆ, ನನ್ನ ಇಬ್ಬರು ಮಕ್ಕಳನ್ನೂ ಕೂಡ, ತಮ್ಮ ಘನಸನ್ನಿಧಾನದಲ್ಲಿ ಒಪ್ಪಿಸಿಬಿಟ್ಟು, ಈಗ ನಿಶ್ಚಿಂತನಾಗಿ ಮುಂದಿನ ದಾರಿಯನ್ನು ಹುಡುಕಲು ಹೋಗುತ್ತಿರುವೆನು. ಇನ್ನು ನನಗೆ ಅಲ್ಲಿ ಯಮಕಿಂಕರರ ದಂಡನೆಯೇ ಉಳಿದಿರುವುದಲ್ಲದೆ ರಾಜಾಗ್ರಹದ ಶಿಕ್ಷೆಗೆ ಅವಕಾಶವಿಲ್ಲದಂತೆ ನನ್ನ ಪ್ರಾಣಕ್ಕೆ ನಾನೇ, ನನ್ನ ಕೈಯಿಂದಲೇ ಸಮಾಪ್ತಿಯನ್ನುಂಟುಮಾಡುವೆನು. ಇನ್ನು ಇಲ್ಲಿ ..ಎದ್ದೆ ....

ಇತಿ, **ಕುಮಾರಶೇಖರಹತಕ** ”

ಕಾಗದವು ಮುಗಿವುದರೊಳಗಾಗಿಯೇ ಓಲಗಶಾಲೆಯೊಳಹೊಕ್ಕ ಕಮಲಾಕಾಂತನು–“ ವಿಕ್ರಮ ! ದೇವಿ ಬಂದು ಬಾಗಿಲಲ್ಲಿ ನಿಂತಿರುವಳು.” ಎಂದು ಹೇಳಿದನು.

ವಿಕ್ರಮನು ಬಗ್ಗಿನೋಡಿ–“ ಬರಬಹುದು, ಇತ್ತಬಾ– ಹೊರಗಿನವರಾರೂ ಇಲ್ಲ. ” ಎಂದನು.

**ಭವಾನಿ —** ಮುಂದೆ ಒಂದೆರಡು ಅಡಿಯಿಟ್ಟು ನೋಡಿ, ಲಜ್ಜೆಯಿಂದ ಅಲ್ಲಿಯೇ ನಿಂತು– “ ಏಕೆ ಕರೆದುದು ? ” ಎಂದು ಕೇಳಿದಳು.

**ವಿಕ್ರಮ —** ಅಲ್ಲಿ ನಿಂತಂತೆಯೇ ಕೇಳಿ ಹೋಗುವುದಕ್ಕೆ ಬಂದೆಯೇನು? ಇತ್ತಬಾ, ಕುಳಿತುಕೊ, ಆಲೋಚಿಸತಕ್ಕ ವಿಷಯಗಳು ಹಲವು ಬಿದ್ದಿರುವುವು.

ಭವಾನಿ ಲಜ್ಜಾವನತಭಾವದಿಂದ ಮೆಲ್ಲಮೆಲ್ಲನೆ ಬಂದು ಒಂದುಕಡೆ ಸರಿದು ಕುಳಿತಳು. ಅದುವರೆಗೂ ಸುಮ್ಮನೆ ನೋಡುತ್ತಿದ್ದ ದಯಾನಾಥ ಠಾಕೂರನು ಕೈನೀಡಿ ಸಂಭ್ರಮದಿಂದ– ‘ ಭಗವತಿ, ದುರ್ಗಾಭವಾನಿ, ಸೌಭಾಗ್ಯಲಕ್ಷ್ಮಿ, ಈಗಲೀಗ ನಮ್ಮ ಆಲೋಚನಾ ಕಾರ್ಯವು ಸಾರ್ಥಕವೆನ್ನಿಸಿತು.’ ಎಂದನು,

ಭವಾನಿ ಲಜ್ಜೆಯಿಂದ ತಲೆಯೆತ್ತಲಾರದೆ ನೆಲವನ್ನೇ ನೋಡುತ್ತ ಕಂಪಿತಸ್ವರದಿಂದ– ‘ ಸರಿ, ಸರಿ ! ಇದೇನೋ ವಿಪರೀತವು. ಹಿರಿಯರೇ ಇಷ್ಟು ವಿನೋದ......................’ಎಂದು ಮೆಲ್ಲನುಸಿರಿದಳು.

**ದಯಾ:—** ( ನಗುತ್ತ ) ‘ ಓಹೋ ! ತಾಳುತಾಳು, ಅಷ್ಟೇ

ನಾಲದು. ಸಕಾರಣವಾಗಿ ಸ್ತುತಿಯನ್ನೂ ಮಾಡಿಬಿಡುವೆನು.

"ಯದ್ಭ್ರೂಭಂಗಾಃಪ್ರಮಾಣಂ ಸ್ಥಿರಚರರಚನಾ ತಾರತಮ್ಯೇ ಮುರಾರೇ । ವೇದಾನ್ತಾಸ್ತತ್ವಚಿನ್ತಾಮುರಭಿದುರಸಿಯತ್ಪಾದಚಿಹ್ನೈಸ್ತರನ್ತಿ ॥ ಭೋಗೋಪೋದ್ಘಾತಕೇಳೀಚುಳುಕಿತ ಭಗವದ್ವೈಶ್ವರೂಪ್ಯಾನುಭಾವಾ । ಸಾನಶ್ಶ್ರೀರಾಸ್ತೃಣೀತಾಮಮೃತಲಹರಿಧೀಃ ಲಙ್ಘನೀಯೈರಪಾಙ್ಗೈಃ" ॥

(ಪರಮಾತ್ಮನ ಸಕಲ ಚರಚರಾತ್ಮಕ ಪ್ರಪಂಚದ ರಚನಾ ಸ್ಥಿತಿ ಕೌಶಲಗಳಿಗೂ ತನ್ನ ಭ್ರೂಭಂಗವನ್ನೇ ಪ್ರಮಾಣವಾಗಿ ಮಾಡಿರುವ,- ಮತ್ತು ಪರಮವಸ್ತುವಿನ ನಿಜಸ್ವರೂಪವನ್ನು ತಿಳಿಯಲು ಚಿಂತಿಸುತ್ತಿರುವ ವೇದಾಂತಗಳಿಗೆ, ತನ್ನ ಪಾದಚಿಹ್ನೆಯಿಂದಲೇ ಉದ್ದೇಶಸಿದ್ಧಿಯನ್ನು ಹೊಂದಿಸುವ, ಮತ್ತು ಪರಮಾತ್ಮನ ಲೀಲಾನಂದವಿಭೂತಿಗೆ ತಾನೇ ಅಧೀಶ್ವರಿಯಾಗಿದ್ದು ಅವನನ್ನು ತನ್ನ ಅಧೀನವಾಗಿ ಮಾಡಿಕೊಂಡಿರುವ ಮಹಾಮಹಿಮಾಸಂಪನ್ನೆಯಾದ ಆ ಶ್ರೀದೇವಿಯೇ ನಮ್ಮನ್ನು ತನ್ನ ಕೃಪಾಕಟಾಕ್ಷಗಳಿಂದ ಅನುಗ್ರಹಿಸಲಿ" ಎಂದು ಭಾವವು.)

ಎಂದು ಹೇಳಿದ ಮಹನೀಯನೇನು ಸಾಮಾನ್ಯನೇ ? ಆದಿಶಕ್ತಿಸ್ವರೂಪಿಣಿಯಾಗಿರುವ ಭಗವತಿಯೇ ಜಗನ್ನಿಯಂತನಿಗೆ ಅಂತಸ್ಸತ್ವವು-ಎಂದಬಳಿಕ, ಅವಳ ಆವೇಶದಿಂದ ಬೀಗಿರುವ ನಿನ್ನನ್ನು ಸಾಕ್ಷಾತ್ ದುರ್ಗೆಯೆಂದೇಕೆ ಹೇಳಬಾರದು ? ನಿನ್ನ ಸಹಾಯಸಂಪತ್ತಿಯಿಲ್ಲದಿದ್ದರೆ, ನಮ್ಮ ಕುಮಾರನ ವ್ಯಕ್ತಿತ್ವದಲ್ಲಿ ಇಷ್ಟು ಅದ್ಭುತಶಕ್ತಿ ಹೇಗೆ ಬರುತ್ತಿದ್ದಿತು ? ಲೋಕೋತ್ತರ ಗುಣಗಳನ್ನು ವರ್ಣಿಸುವುದು ಲೋಕಸ್ವಭಾವವಾಗಿರಲು ನೀನೇಕೆ ಲೋಕಾಚಾರವನ್ನು ತಡೆಗಟ್ಟಬೇಕೆಂದು ಬಳಲುತ್ತಿರುವೆ ?

**ಭವಾನಿ** — ಕೆಲಸವೇನೋ ಅದನ್ನಷ್ಟೇ ಹೇಳಬೇಕಲ್ಲದೆ ಹೊಗಳುತ್ತ ಹೊತ್ತುಗಳೆಯಬಾರದೆಂದು ಕೋರುವೆನು.

**ದಯಾ** — ಹೂಂ, ಹಾಗೆಯೇ ಆಗಲಿ, ಭವಾನಿ ! ಈಗ ಹೇಳು. ಕುಮಾರ ಶೇಖರನ ಪ್ರಮಾಣಪತ್ರವನ್ನು ಓದಿರುವಿಯಷ್ಟೆ ? ಅದರಲ್ಲಿ ನಿನ್ನ ಅಭಿಪ್ರಾಯವೇನು ?

**ಭವಾನಿ**— ನನ್ನ ಅಭಿಪ್ರಾಯವೇ ? ಅನುತಪ್ತಹೃದಯನಾಗಿ ಪರಿ

ತಪಿಸುವ ಅವನ ನಡತೆ ಈಗ ಚೆನ್ನಾಗಿ ಸಂಸ್ಕಾರಹೊಂದಿರುವುದು. ಅದುದರಿಂದ ಕ್ಷಮೆಗೆ ಅರ್ಹನೆಂದು ಹೇಳುವೆನು.

**ದಯಾ** — ಹೇಗೆ ಹೇಳುವೆ? ಇಷ್ಟು ಅನರ್ಥಗಳಿಗೂ ಕಾರಣ ನಾಗಿ ಸ್ಮರಿಸುವುದಕ್ಕೂ ಅಗದ ದ್ರೋಹಿಯನ್ನು ಕ್ಷಮಿಸುವುದು ಹೇಗೆ?

**ಭವಾನಿ** — ಅಹುದು, ಅವನು ನಿರಪರಾಧಿಯೆಂದು ನಾನೇನೂ ಹೇಳಿಲ್ಲ. ಆದರೂ ಕುಮಾರನ ಆ ದ್ರೋಹಚಿಂತನೆಯಲ್ಲಿಯೂ ಎಷ್ಟು ಉತ್ತಮಗುಣಗಳು ಕಂಡುಬಂದಿರುವವೋ ವಿಚಾರ ಮಾಡಬೇಕು.

**ದಯಾ** — ಏನೆಂಬುದು ನನಗೆ ತಿಳಿಯಲಿಲ್ಲ?

**ಭವಾನಿ:**— ಕುಮಾರನು ಯಥಾರ್ಥವಾಗಿಯೂ ದ್ರೋಹಿಯಾ ಗಿದ್ದ ಪಕ್ಷದಲ್ಲಿ ಭಟ್ಟಾಚಾರ್ಯರ ಮಗು ಇದುವರೆಗೂ ಜೀವಿಸುತ್ತಿರಲಿಲ್ಲ! ಕುಮಾರನು ಸ್ವಾಭಾವಿಕವಾಗಿ ಕೃತಜ್ಞನೂ, ಧಾರ್ಮಿಕವೃತ್ತಿಯಿಂದ ಬಳೆದವನೂ ಆಗಿದ್ದುದರಿಂದಲೇ, ಅಕಾಲ ಮೃತ್ಯುವಿಗೆ ತುತ್ತಾಗುತ್ತಿದ್ದ ಮಗುವನ್ನು ಬಿಡಿಸಿ ಕರೆದುಕೊಂಡು ಹೋಗಿ, ಅದರ ಸಂರಕ್ಷಣೆಗಾಗಿ ಪಡುಪಾಟುಪಟ್ಟನು. ಅಣ್ಣನ ಆಸ್ತಿಯನ್ನು ಅಪಹರಿಸಬೇಕೆಂದು ಪ್ರೇರಿತ ನಾಗಿ, ಅಕಾರ್ಯದಲ್ಲಿ ಪ್ರವರ್ತಕನಾಗಿದ್ದರೂ, ಕೊಲೆಗಡುಕರಿಗೆ ಬುದ್ಧಿಗಲಿಸಿ ದುದೂ, ವಿಪತ್ತಿಗೆ ಬಿದ್ದ ಅಣ್ಣ–ಅತ್ತಿಗೆಯರಿಗೆ ಅಪಾಯವಾಗದಂತೆ ವ್ಯವಸ್ಥೆಯನ್ನು ಮಾಡಿದ್ದುದೂ, ಮಗುವನ್ನು ತ್ಯಜಿಸಿ ಬಿಡಬೇಕೆಂದು ಎಷ್ಟೆಷ್ಟು ಪ್ರೇರಿಸಲ್ಪಟ್ಟರೂ ಅದಕ್ಕೊಪ್ಪದಿದ್ದುದೂ ಇದೆಲ್ಲವೂ ಕ್ಷಮೆಗೆ ಯೋಗ್ಯವಲ್ಲವೇನು?

**ದಯಾ:**— ತಲೆದೂಗಿ– 'ತಾಯಿ! ಅದೆಲ್ಲವೂ ಇರಬಹುದು. ಆದರೂ ಈಗ ನೋಡು,–ಕುಮಾರಶೇಖರನ ಮೇಲೆ ಎಷ್ಟೊಂದು ಅಪರಾ ಧಗಳು ಹೊತ್ತಿರುವುವು? ಸ್ವಾಮಿದ್ರೋಹಿ, ಪಿತೃಘಾತಕ, ಸಮಾಜದ ಕಲ್ಯಾಣಕ್ಕೆ ಕಂಟಕ.'

**ಭವಾನಿ** — ಇರಬಹುದು, ಆದರೂ ಪೂರ್ವಾಪರ ವಿಚಾರವಿರಬೇ ಕಲ್ಲವೆ? ಕುಮಾರನು ತನ್ನ ತಪ್ಪನ್ನು, ಮುಖ್ಯವಾಗಿ ತಾನು ಮಾಡಿದು ದಕ್ಕೆ ಇಮ್ಮಡಿಯಾಗಿ ಒಪ್ಪಿಕೊಂಡಿರುವನು; ಅದಕ್ಕಾಗಿ ಸಂಪೂರ್ಣ ಪಶ್ಚಾತ್ತಾಪವನ್ನೂ ಹೊಂದಿರುವನು.

**ದಯಾ:**—ತಾಯಿ! ಅವನ ಮೇಲೆ ದಂಡಪ್ರಯೋಗಕ್ಕೆ ಪತ್ನಿಯು ಕೊಲೆಯನ್ನು ಮಾಡಿರುವ ಒಂದೇ ತಪ್ಪಿತವು ಸಾಲದೇ ?

**ಭವಾನಿ:**— ಉತ್ತೇಜಿತ ಸ್ವರದಿಂದ– 'ಹಿರಿಯರೂ ನ್ಯಾಯವಿಧಾಯಕರೂ ಆದವರಲ್ಲಿ ಧರ್ಮಸೂಕ್ಷ್ಮವನ್ನು ಹೇಳಲು ನನಗಳವಲ್ಲ. ಕುಮಾರನೇನೋ ಕೊಲೆಗೇಡಿಯೇ ಸರಿ. ಆದರೂ ಒಂದುಮಾತು– ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಯೇ ತೀರಬೇಕಷ್ಟೆ?'

**ದಯಾ:**—ಅದಕ್ಕಲ್ಲವೇ ಈಗ ವಿಚಾರವಾಡುತ್ತಿರುವುದು ?

**ಭವಾನಿ:**— ಹಾಗಿದ್ದರೆ, ಗುರುಜನರು ವಿಚಾರಮಾಡಿ ಹೇಳುವುದಾಗಲಿ? ಸರ್ಕಾರದ ಪರವಾಗಿ, ಕುಮಾರನೇ ಆ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಿರುವನು! ಪಾತಕವನ್ನು ಪ್ರಾಯಶ್ಚಿತ್ತವು ಜಯಿಸಿಬಿಟ್ಟಿರುವುದು.

**ದಯಾ:**—ಹೇಗೆ?

**ಭವಾನಿ**—ಕುಮಾರನು ಮಾಡಿರುವುದು ಒಂದೇ ಕೊಲೆ ಆದರೂ ಅದು ಕೊಲೆಯೆಂದಾಗಲೀ ಜನಕ್ಷೋಭೆಗೆ ಕಾರಣವಾದ ಘಾತಕವೃತ್ತಿಯೆಂದಾಗಲೀ ಹೇಳುವಂತಹದಲ್ಲ. ಏಕೆಂದರೆ, ಅದು ಅಪರಾಧಕ್ಕೆ ಕೊಟ್ಟ ಶಿಕ್ಷೆ.'

**ವಿಕ್ರಮ:**— (ಮುಗುಳುನಗೆಯಿಂದ) 'ಅಪರಾಧಿ ಯಾರೆಂಬುದನ್ನು ನೋಡಿ ಶಿಕ್ಷೆಯನ್ನು ವಿಧಿಸಬೇಕಷ್ಟೆ? ಹೆಂಗಸಿನ ಕೊಲೆಗೆ ಹೇಸದಿರುವವರು ಯಾರು?

**ಭವಾನಿ.**— ಸ್ತ್ರೀಯರಾದಮಾತ್ರಕ್ಕೆ ಅವರಿಗೆ ಶಿಕ್ಷೆ ಕಡಿಮೆಯಾಗಬೇಕಲ್ಲವೆ? ಇರಲಿ, ಕುಮಾರನ ಹೆಂಡತಿಯಿಂದ ಎಷ್ಟೊಂದು ಕೊಲೆಯಾಗಿ–ಆಗುತ್ತಿದ್ದಿತೋ, ಯೋಚಿಸಬಹುದು! ಸ್ತ್ರೀಯರಾಗಲೀ– ಪುರುಷರಾಗಲೀ– "ಕೊಂದವರಿಗೆ ಕೊಲೆ" ಎಂಬ ಮಾತಿಗೆ ಎಲ್ಲರೂ ಕಟ್ಟುಬೀಳಲೇಬೇಕು. ಆದುದರಿಂದ ಕುಮಾರನು ಶೋಕರೋಷತ್ವೇಷಾದಿ ವಿಕಾರಗಳಿಂದ ಪರವಶನಾಗಿ ಪತ್ನಿಗೆ ತಕ್ಕ ಶಿಕ್ಷೆಯನ್ನೇ ಮಾಡಿರುವನಲ್ಲದೆ, ತನ್ನ ಕ್ರೂರಕೃತ್ಯಕ್ಕೆ ತಾನೇ–ತನ್ನ ಕೈಯಿಂದಲೇ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡೇ ಇರುವನು. ಇನ್ನು ಆತನಮೇಲೆ, ಯಾವ ರಾಜ

ಶಾಸನಕ್ಕೂ ಅಧಿಕಾರವಿಲ್ಲ.

**ದಯಾ** — ಇಲ್ಲದಿರುವುದೇ, ಭವಾನಿ ?

**ಭವಾನಿ** — ಕುಮಾರನು ಈವರೆಗೆ ಮಾಡಿರುವ ಅಕಾರ್ಯಗಳಲ್ಲಿ ಪತ್ನಿಯ ಕೊಲೆಯೊಂದನ್ನು ಬಿಟ್ಟರೆ, ಉಳಿದುದರಲ್ಲಿ ರಾಜದ್ರೋಹದ ಅಥವಾ ಸಮಾಜದ ಶಾಂತಿಭಂಗದ ಯಾವ ಕಾರ್ಯಗಳು ನಡೆದಿರುವುವು ? ಭಟ್ಟಾಚಾರ್ರ್ಯರ ಮೇಲೆ ನಡೆಯಿಸಿದ ಅಕೃತ್ಯವೆಂದರೆ, ಅವರೇ ಅವನನ್ನು ಮನಃಪೂರ್ವಕವಾಗಿ ಕ್ಷಮಿಸುವುದಕ್ಕೆ ಸಿದ್ಧರಾಗಿರುವರು. ಆ ವಿಚಾರದಲ್ಲಿ ಅವರ ಇಷ್ಟಕ್ಕೆ ವಿರೋಧವಾಗಿ ಅವನನ್ನು ಶಿಕ್ಷೆಗೆ ಗುರಿಮಾಡಬೇಕೆಂಬ ನಿಮ್ಮ ದಂಡಶಾಸ್ತ್ರಪ್ರಯೋಗಕ್ಕೆ ಅವಕಾಶವೇನಿರುವುದು ?

**ದು- ಪ್ರ.:** — ಅತ್ತಿಗೆ, ಕುಮಾರನ ಪಕ್ಷವಾಗಿ ನೀನು ಇಷ್ಟೊಂದು ವಾದಿಸುವೆಯೇಕೆ ?

**ಭವಾನಿ:** — ಏಕೆಂದರೆ, ಆತನು ತನ್ನ ಯಾತನಾದೇಹವನ್ನು ಬಿಟ್ಟು ಹೋಗುತ್ತಿದ್ದನು. ಆ ಕಾಲದಲ್ಲಿ ಆತನಿಗೆ ಮತ್ತೆ ಪ್ರಾಣದಾನವನ್ನು ಮಾಡಿದವರು ನಮ್ಮ ಧನ್ವಂತರಿಗಳು, ಕಮಲಾಕಾಂತ, ಮತ್ತು ನಾನು. ಈ ನಾವು ಮೂವರೂ ಹೊಣೆಯಾಗಿ ಅವನನ್ನು ಉಳಿಸಿಕೊಳ್ಳಲು ಸಿದ್ಧರಾಗಿರುವೆವು. ಅಲ್ಲದೆ, ಇದು ನನ್ನ ಒಬ್ಬಳ ಅಭಿಪ್ರಾಯವೇ ಅಲ್ಲ. ಭಟ್ಟಾಚಾರ್ಯರೂ ಮತ್ತು ಅವರ ಪತ್ನಿ ಲಲಿತಾದೇವಿಯೂ ಕೊರಳಾಣೆಯಿಟ್ಟು ಕೇಳಿಕೊಂಡಿರುವರು. ಏಕೆಂದರೆ, ಸಾಕಿದ ಹುಲಿಯನ್ನಾದರೂ ಕೊಲ್ಲುವವರು ವಿರಳವಷ್ಟೆ; ಹಾಗೆಂದಬಳಿಕ ?

**ದಯಾ:** — ನೋಡಿದೆಯಾ ? 'ಭಗವತಿ' ಯೆಂದು ಕರೆದುದರ ಅಭಿಪ್ರಾಯವಿದೇ ! ನಿನ್ನ ವಾದವು ನ್ಯಾಯವಾಗಿಯೇ ಇರುವುದು. ಅದನ್ನು ಅನುಮೋದಿಸಬೇಕೆಂಬುದೇ ನಮ್ಮ ಇಂದಿನ ಆಲೋಚನೆಯೂ ಆಗಿರುವುದು ಆಗಲಿ, ಮಧುಕರನ ವಿಚಾರದಲ್ಲಿ ಏನೆನ್ನುವೆ ?

**ಭವಾನಿ:** — ನಾನು ಹೇಳುವುದೇನು ? ಅವನು ವಿಶ್ವಾಸಘಾತಕನೇನೋ ಅಹುದು, ಆದಕ್ಕಾಗಿ ಶಿಕ್ಷೆಯನ್ನು ವಿಧಿಸುವುದೂ ಸರಿಯಾದುದು. ಆದರೂ, ಬುದ್ಧಿಕೌಶಲ್ಯ-ಪ್ರಾಪಂಚಿಕ ಸ್ಥಿತಿಗಳನ್ನು ಚೆನ್ನಾಗಿ ತಿಳಿದಿರುವ ಆತನನ್ನು ಮುಂದೆ ಸರಿಯಾದ ದಾರಿಗೆ ತಿರುಗಿಸುವೆವೆಂದೂ

ಮುಂದೆ ಇವನಿಂದ ಇಂತಹ ಅಕಾರ್ಯಗಳೇನಾದರೂ ನಡೆದರೆ ತಾವು ನಿಲ್ಲುವೆ ವೆಂದೂ ಸಂಭಾವಿತರಾದವರಾರಾದರೂ ಹೊಣೆಯಾಗಿ ನಿಂತು ಕೇಳಿದರೆ....... ಹೇಗೂ ನಾನು ಆತನ ಪ್ರಾಣಮಾನಗಳಿಗೆ ಅಪಾಯಬಾರದಂತೆ ನೋಡಿ ಕೊಳ್ಳುವುದಾಗಿ ಆತನ ಪತ್ನಿಗೆ ಮಾತು ಕೊಟ್ಟಿರುವೆನು.

**ದಯಾ —** 'ಏನುಏನು, ಮಾತುಕೊಟ್ಟಿರುವೆ? ಸರಿ, ಅದರಂತೆ ನಡೆಯಿಸಿಯೇ ತೀರಬೇಕು! ಹೇಗಾದೀತು? ನಾನೇ ಸರ್ಕಾರದ ಕಡೆಯ ಅಧಿಕಾರಿಯಾಗಿದ್ದು, ಈ ರೀತಿಯಾದ ... .. '

**ಭವಾನಿ.—** ' ನ್ಯಾಯವಿಮರ್ಶೆಯಲ್ಲಿ, ಲಜ್ಜಾಭಯಗಳನ್ನು ಹಿಡಿದರೆ ಆಗುವುದಿಲ್ಲ. ಎಲ್ಲವನ್ನೂ ಕಟ್ಟಿಟ್ಟು ಹೇಳಬೇಕೆಂಬುದೇ ಹಿರಿಯರ ಇಷ್ಟವೆಂದು ತಿಳಿಯುತ್ತಿರುವುದು. ಆಗಲಿ, ಗುರುಚಿತ್ತವು ವಿಚಾರ ಮಾಡಿ ನೋಡಲಿ? ಸರಕಾರದ ಹಣವನ್ನು ಸುಲಿದು, ತಮ್ಮ ಉದರಗುಹೆಗೆ ತುಂಬುವ ಅಧಿಕಾರಿಗಳೆಷ್ಟುಮಂದಿ? ತಮ್ಮ ಕೈಕೊಂಡ ಅಧಿಕಾರಕ್ಕೆ ಉತ್ತರವಾದಿಗಳಾಗಿ ನಿಲ್ಲಲು, ತ್ರಿಕರಣಶುದ್ಧರಾಗಿ ಕೆಲಸಮಾಡುತ್ತಿರುವ ರೆಷ್ಟುಮಂದಿ? ಸರಕಾರದ ಶಾಸನಗಳನ್ನು ತಮ್ಮ ಮತ್ತು ತಮ್ಮ ಪರಿವಾರದ ಮಟ್ಟಿಗೆ ಸಂಬಂಧಪಡದಂತೆ ಮಾಡಿಕೊಂಡು, ತಮ್ಮವರ ಉದರ ಪೋಷಣೆಗೆ ಇಲ್ಲವೆ-ಆಶಾಪೂರ್ತಿಗೆ, ಸಮಾಜದ ಶಾಸನಗಳನ್ನೂ, ಧರ್ಮ ಸೂತ್ರಗಳನ್ನೂ, ದಂಡವಿಧಿಯನ್ನೂ, ರಾಜಕೀಯ ನಿಬಂಧಗಳನ್ನೂ, ಹುರುಳಿಲ್ಲದವುಗಳನ್ನಾಗಿ ಮಾಡಿ, ಗುಪ್ತಮಾರ್ಗದಲ್ಲಿ ನಡಯುತ್ತಿರುವ ಮಹಾಶಯರೆಷ್ಟುಮಂದಿಯಿರುವರು? ಅವರೆಲ್ಲರನ್ನೂ ಹಿಡಿದು, ಶಿಕ್ಷೆಗೆ ಗುರಿಮಾಡಿರುವುದಾದರೆ, ಎಲ್ಲಿ? ಹೇಗೆ?...... .....

**ದಯಾ:—** ' ಹಾ, ಯಾರನ್ನೂ ದಂಡಿಸಿಲ್ಲವೇ? ಎಷ್ಟುಮಂದಿ ಯನ್ನು ಅವರ ತಪ್ಪಿತಕ್ಕಾಗಿ ಅರ್ಧದಂಡವಿಧಿಯಿಂದ ಶಿಕ್ಷಿಸಿ, ಅವರನ್ನು ಅಧಿಕಾರದಿಂದ ಬಿಡಿಸಿ ಮನೆಗೆ ಕಳುಹಿಲ್ಲ? "

**ಭವಾನಿ:—** ಕಳಿಹಿರಬಹುದು. ನೂರಕ್ಕೆ—ಸಾವಿರಕ್ಕೆ ಒಬ್ಬಿಬ್ಬ ರಂತೆ ಅಪರಾಧಿಗಳು ಶಿಕ್ಷೆಗೆ ಗುರಿಯಾಗಿರಬಹುದು. ಆದರೇನು? ನ್ಯಾಯವು ಬೇರೆ ಸರ್ವತ್ರ ಆಚರಣೆಗೆ ಬಂದಿಲ್ಲ. ಏತರಿಂದ? " ತಪ್ಪಿತಸ್ಥರಾಗಲು ಕಾರಣವೇನು? ಮುಂದೆ ಸರಿಯಾದ ದಾರಿಗೆ ಬರುವ ಸಂಭವವೇನಾದರೂ

ಉಂಟೇ ? ” ಎಂಬಿವನ್ನು ತಿಳಿದು ದಂಡಿಸುವುದಾದರೆ, ಎಲ್ಲವೂ ನೆಟ್ಟಗಾದೀತು. ಈಗ ಅದೆಲ್ಲವೂ ನನಗೇಕೆ ? ಮಧುಕರನನ್ನು ಕೆಲಸದಿಂದ ನಿವೃತ್ತಿಮಾಡಿದರೆ ಸಾಕು. ಸರ್ಕಾರದ ಕಡೆಯ ಶಿಕ್ಷೆಯೂ ಆಯಿತು, ಕ್ಷಮಿಸಲ್ಪಟ್ಟನೆಂಬ ತಿಳಿವುಂಟಾಗಿ ಅವನ ಅಭಿಮಾನ–ದುರಾಗ್ರಹಗಳೂ ಮುರಿಯಲ್ಪಟ್ಟು ಪಶ್ಚಾತ್ತಾಪದಿಂದ ವಿವೇಕವನ್ನು ಪಡೆಯಲು ಅವಕಾಶ ಕೊಟ್ಟಂತೆಯೂ ಆಯಿತು. ಹಾಗೆ ಮಾಡದೆ ನಮ್ಮ ಸಮಾಜಕ್ಕೆ ಸೇರಿದವರನ್ನು ನಾವೇ ಹೊರಗೆ ದೂಡಿದರೆ ಸಮಾಜದ ಅಭಿವೃದ್ಧಿ ಹೇಗಾಗಬೇಕು ? ನಮ್ಮಲ್ಲಿ ಪರಮಾತ್ಮನ ಅನುಗ್ರಹಲಬ್ಧವಾಗಿರುವ ಭೂತದಯೆ, ಅನುಕಂಪನ, ಕ್ಷಮಾ, ಔದಾರ್ಯಾದಿಗುಣಗಳಿಗೆ ಬೆಲೆಯಾದರೂ ಎಲ್ಲಿ ? ನಮ್ಮವರಿಂದ ಏನಾದರೂ ತಪ್ಪಿತವು ನಡೆದಿದ್ದರೆ ನಾವೇ ಅವರನ್ನು ನೀತಿಮಾರ್ಗದಲ್ಲಿ ಸರಿಪಡಿಸಿಕೊಂಡು ಭದ್ರಪಡಿಸುವುದರಿಂದ ಸಮಾಜಕ್ಕೂ, ರಾಜ್ಯಕ್ಕೂ ಎಷ್ಟು ಕಲ್ಯಾಣವಾಗುವುದು ?

**ವಿಕ್ರಮ:**— (ನಗುತ್ತ–) “ ಹಾಗೆ ಮಾಡಬಹುದಾದರೆ, ಕ್ಷಣಕ್ಷಣಕ್ಕೂ ಹೆಚ್ಚುತ್ತಿರುವ ಸರ್ಕಾರದ ನ್ಯಾಯಸ್ಥಾನಗಳ ನ್ಯಾಯಾಧಿಕಾರಿಗಳ ದೆಸೆಯಿಂದ ಉಪಯೋಗವೇನಾದೀತು ? ”

**ಭವಾನಿ:**— ಅದೇನೆಂದು ನಾನು ಹೇಳಲಾರೆನು. ಆದರೂ ಪ್ರತಿಯೊಂದನ್ನೂ ಅವರೇ ನೋಡಿ ನಿರ್ಣಯಿಸಬೇಕೆನ್ನುವುದು ಸಮಾಜದ ಹಾನಿಯೇ ಸರಿ. ಸಮಾಜದ ಕಡೆಯ ದಯಾಶಿಕ್ಷೆಯೊಂದರಿಂದಲೇ ಆಗಬಹುದಾದ ಕಾರ್ಯಕ್ಕೆ ನಿಮ್ಮ ಹಲವು ನ್ಯಾಯಸಭೆಯು ಸೇರಿಮಾಡುವ ಶಿಕ್ಷೆ ಸರಿತೂಗಲಾಗದು. ದಯಾಶಿಕ್ಷೆಯಿಂದ ಅಪರಾಧಿ, ಯಥಾರ್ಥವಾಗಿ ಪಶ್ಚಾತ್ತಾಪಹೊಂದಿ ಮುಂದಿನ ತನ್ನ ವರ್ತನವನ್ನು ಕ್ರಮಪಡಿಸಿಕೊಳ್ಳುವಂತಾಗುವುದು. ಇನ್ನಿದರಮೇಲೆ ನಾನೇನು ಹೇಳಲಿ ? ಮುಖ್ಯವಾಗಿ ಮಧುಕರನನ್ನು ಶಿಕ್ಷಿಸುವುದಾದರೆ, ಅವನೊಬ್ಬನಿಗಾಗಿ ನಾಲ್ಕಾರುಮಂದಿಗಳ ಸಾಧುಜೀವನವನ್ನೂ ಅಳಿಸಿದಂತಾದೀತೆಂದು ಮಾತ್ರ ಹೇಳುವೆನು. ಇನ್ನಿದರಮೇಲೆ ಯುಕ್ತತೋರಿದಂತೆ ಮಾಡಬಹುದು.

**ಧನ್ವಂತರಿ:**— ಕ. ಕಾಂ.— ರು (ಕೈಚಪ್ಪಾಳೆಯನ್ನು ಹೊಡೆದು–) “ ಶಹಬಾಸ್ !! ಮೇಲುಮಾತು. ” ಎಂದರು.

**ದಯಾ:—** (ವಿಕ್ರಮನನ್ನು ನೋಡಿ-) "ಏನಪ್ಪಾ-ವಿಕ್ರಮ, 'ಸತಿಗೆ ಸ್ವತಂತ್ರವ ಕೊಡದಿರಿ' ಎಂಬ ನೀತಿಯನ್ನು ನೋಡಿದೆಯಾ? ಈಗ ನಾವೇನು ಮಾಡುವ?"

**ದು. ಪ್ರ:—** ನಸುನಗೆಯಿಂದ-'ಭವಾನೀದೇವಿ' ತಾನೇ ಹೊಣೆಯಾಗಿ ನಿಂತು, ಪ್ರತಿಫಲವಾಗಿ .. .... '

**ಭವಾನಿ —** (ಕಮಲಾಕಾಂತನನ್ನು ನೋಡಿ)-"ಭೈರವಮೂರ್ತಿ! ಇವರಿಗೆ ಪ್ರತಿಫಲವು ಬೇಕಂತೆ! ಆಗಲಿ, ಕಡಿದಾದ ಬೆಟ್ಟ-ಗುಡ್ಡಗಳಲ್ಲಿ ಅಡಗಿ, ಕಾಡುತ್ತಿದ್ದ ಕಾಡಿನ ಕಳ್ಳರನ್ನೆಲ್ಲಾ ಹಿಡಿದು ಸರ್ಕಾರಕ್ಕೆ ಒಪ್ಪಿಸಿತಷ್ಟೆ? ಅದಕ್ಕೆ ಇವರಿಂದ ನಾವು ಯಾವ ಪ್ರತಿಫಲವನ್ನು ಕೇಳಬೇಕು?"

**ವಿಕ್ರಮ —** (ನಗುತ್ತ) "ಚಿಕ್ಕಪ್ಪ! ಈಗ ಉತ್ತರವೇನು? ಕಳ್ಳರನ್ನು ಹಿಡಿದುಕೊಟ್ಟುದಕ್ಕೆ ಪ್ರತಿಫಲವಾಗಿ ಮಧುಕರ-ಕುಮಾರಶೇಖರರ ಪ್ರಾಣದಾನಮಾಡಬೇಕಂತೆ! ಅವರಿಬ್ಬರ ಪ್ರಾಣದಾನದ ಪ್ರತಿಫಲವಾಗಿ ರಾಷ್ಟ್ರದ ಕ್ಷೇಮವೇ ಪ್ರತಿಫಲವಂತೆ!"

**ದಯಾ:—** ಹಾಗೆಂದು ಸಭಾಮಧ್ಯದಲ್ಲಿ ಇತ್ಯರ್ಥವಾದಲ್ಲದೆ ಆಗಲಾರದಷ್ಟೆ?

**ಭವಾನಿ:—** ಅದಕ್ಕೂ ಆಲೋಚನೆ ನಡೆಯದೆ ಇಲ್ಲ.

**ದಯಾ:—** (ಕೌತುಕದಿಂದ) "ಅದಾವುದು ತಾಯಿ?"

**ಭವಾನಿ: —** ಇಂದಿನ ವಿಜಯೋತ್ಸವದಲ್ಲಿ ನಮ್ಮ ಕಮಲಾಕಾಂತಕುಮಾರನೇ ವಿಜಯಿ. ಅವನ ಸಾಹಸಕ್ಕೆ ಕಾಣಿಕೆಯಾಗಿ ಜಯಶ್ರೀ ಮಾಲೆಯನ್ನು ಹಿಡಿದು ನಿಂತೇ ಇರುವಳು. ಅವಳನ್ನು ಇವನಿಗೊಪ್ಪಿಸಲು ನಿಶ್ಚಿತವಾಗಿ ವಿವಾಹಸಂಭ್ರಮವು ಸಡಗರದಿಂದ ನಡೆಯಲಿ! ವಿವಾಹಮಹೋತ್ಸವಕ್ಕಾಗಿ ನೆರೆಯುವ ಆರ್ಯಸಮಾಜದಲ್ಲಿ ಈವರೆಗಾದ ಅಪಚಾರಗಳೂ, ಅದಕ್ಕಾಗಿ ವಿಧಿಸಿರುವ ಅರ್ಧದಂಡವೂ ನಿವೇದಿಸಲ್ಪಟ್ಟು, ಅವರನ್ನು ಮತ್ತೆ ಸಮಾಜಕ್ಕೆ ಸೇರಿಸಿಕೊಳ್ಳಲು ಅನುಮತಿಯನ್ನು ಕೊಡಬೇಕೆಂದು ಕೇಳಿಕೊಳ್ಳುವುದಾದರೆ, ಒಲ್ಲೆನೆಂಬುವರಾರು?

**ದಯಾ:—** ವಿವಾಹಕ್ಕೆ ಕನ್ಯೆಯನ್ನೂ ನೋಡಿರುವೆಯೇನು? ಅದಾರು?

**ಭವಾನಿ:**— ಮಾತೃವಿಹೀನೆಯಾಗಿ, ಪಿತೃಸೇವೆಯಲ್ಲಿ ನಿರತೆಯಾಗಿರುವ ಕೋಮಲಬಾಲೆ, ಕುಮಾರಶೇಖರನ ಕನ್ಯೆ ಅನ್ನಪೂರ್ಣೆಯನ್ನೇ ಗೊತ್ತುಮಾಡಿರುವೆವು.

**ದಯಾ:**— ಗೊತ್ತುಮಾಡಿಯೂ ಇರುವಿರೋ? ನಿಮ್ಮ ನಿಮ್ಮಲ್ಲಿಯೇ ಗೊತ್ತುಮಾಡಿಕೊಂಡಿರುವಿರೋ? ಹೆತ್ತವರು-ಗೊತ್ತುಗಾರರು ಮತ್ತಾರೂ ಇಲ್ಲವೋ?

**ಭವಾನಿ:**— 'ಗುರುಜನರು ಆಕ್ಷೇಪಿಸಬೇಕಾದುದಿಲ್ಲ. ಕನ್ಯೆಯನ್ನು ಕೊಡಲು ಗೊತ್ತುಗಾರರಾಗಿ ಲಲಿತಾದೇವಿಯೂ ಹೇಮಲತಾದೇವಿಯೂ ನಿಂತಿರುವರು. ತಂದುಕೊಳ್ಳಲು ಗೊತ್ತುಗಾರರಾಗಿ ನಿಲ್ಲುವುದಕ್ಕಂತೂ ನಮ್ಮ ಅತ್ತೆಯವರೇ ಸಿದ್ಧರಾಗಿರುವರು. ಇವರಿಗೂ ಹೆಚ್ಚಾದ ಸ್ವಾತಂತ್ರ್ಯವು ಮತ್ತಾರಲ್ಲಿರುವುದು? ಇವರ ಅಭಿಮತಗಳನ್ನು ಉಲ್ಲಂಘಿಸುವುದಕ್ಕಾದರೂ ಶಕ್ತರಾಗಿ ನಿಲ್ಲುವವರಾರು? ಕಮಲಾಕಾಂತನೇನಾದರೂ ಅವಿಧೇಯನಾಗಿದ್ದರೆ,

**ದಯಾ:**— 'ಅಬ್ಬ-ಅಬ್ಬ! ಇದು ಸಾಮಾನ್ಯ ಸ್ತ್ರೀ ಪ್ರಕೃತಿಯಲ್ಲ. ಅದ್ಭುತಘಟನಾಕೌಶಲವುಳ್ಳ ಭಗವತಿಯ ಆವೇಶವೇ ಇದು. ಆಗಲಿ, ಭಗವತಿ! ಆಗಲಿ, ನಾವೂ ದುರ್ಗಾದೇವಿಯ ಆಜ್ಞಾನುಸಾರವಾಗಿಯೇ ನಡೆಯುವ.

**ಭವಾನಿ**— (ಅಪ್ರತಿಭೆಯಾಗಿ ಲಜ್ಜೆಯಿಂದ ತಲೆಬಾಗಿಸಿ ಮಾತಿಲ್ಲದೆ ಕುಳಿತಳು.)

**ದಯಾ:**— ತಾಯಿ! ಈಗಲೀಗ ಸ್ವಾಭಾವಿಕ ಸ್ಥಿತಿಗೆ ಬಂದೆಯಲ್ಲವೆ? ಇನ್ನು ಹೇಳು, ಪ್ರಮದೆಯ ಸ್ಥಿತಿಯು ಏನಾಗಿರುವುದು? ಉಳಿದವರ ಸ್ಥಿತಿಗಳೇನಾಗಿರುವುವು? ಆರಾರ ಬಳಿಯಲ್ಲಿ ಆರಾರನ್ನು ನಿಲ್ಲಿಸಿರುವೆ?

**ಭವಾನಿ.**— (ಮೆಲ್ಲನೆ) 'ಪ್ರಮದೆ, ಉಗ್ರಜ್ವರಪೀಡಿತೆಯಾಗಿ ಬಿದ್ದಿರುವಳು. ಅವಳ ಉಪಚಾರಕ್ಕಾಗಿ ನಿಪುಣೆಯಾದ ದಾಸಿಯನ್ನು ಗೊತ್ತುಮಾಡಿರುವೆನು. ಕುಮಾರಶೇಖರನು ಭ್ರಮೆಹಿಡಿದವನಂತೆ ಬುದ್ಧಿಸ್ವಾಧೀನವಿಲ್ಲದೆ ಅಳುತ್ತಿರುವನು. ಅವನ ಶುಶ್ರೂಷೆಗೆ ಲಲಿತಾದೇವಿಯೂ

ಅವನ ಮಗಳೂ ಇರುವರು. ಮಧುಕರನ ಸ್ಥಿತಿಯೇನಾಗಿರುವುದೆಂಬುದು ನನಗೆ ಚನ್ನಾಗಿ ತಿಳಿಯಬಂದಿಲ್ಲ. ಅವನನ್ನೇನೋ ಆಯುಧಾದಿಗಳೊಂದೂ ಇಲ್ಲದ ಕಿರುಮನೆಯಲ್ಲಿ ಇಟ್ಟು ಬಾಗಿಲನ್ನು ಹಾಕಿರುವರು. ಅಡಿಗಡಿಗೆ ಕಮಲಾಕಾಂತನು, ತಾನೇ ಹೋಗಿ ಸಮಾಧಾನಮಾಡಿ ಬರುವನು. ಇನ್ನೂ ಹೀಗೆಯೇ ಅವರನ್ನು ಬೇರೆ ಬೇರೆ ಇರಿಸುವುದು ಸರಿಯಾಗಿ ಕಾಣುವುದಿಲ್ಲ..... .........

ಅಷ್ಟರಲ್ಲಿ ಒಳಗಣಿಂದ ದಾಸಿಯೊಬ್ಬಳು ಓಡಿಬಂದು "ತಾಯಿ! ಕುಮಾರರು ಅಳುತ್ತಿರುವರಂತೆ. ನಿಮ್ಮನ್ನು ಬೇಗ ಕರೆತರಲು, ಲಲಿತಾದೇವಿಯವರು ಅಟ್ಟಿರುವರು." ಎಂದು ಹೇಳಿದಳು. ಭವಾನಿ ಧಿಗ್ಗನೆದ್ದು ಎಲ್ಲರಿಂದಲೂ ಅನುಮತಿಹೊಂದಿ ದಾಸಿಯ ಹಿಂದೆ ಹೊರಟು ಹೋದಳು.

---

ಶ್ರೀ:

## ಪಂಚಮ ಪರಿಚ್ಛೇದ.

---

(ಸಂತಾಪ, ಸಮಾಧಾನ.)

ಹೇಮಲತಾದೇವಿಯು ಕಿರುಮನೆಯಲ್ಲಿ ಹಾಸಿಗೆಯಮೇಲೆ ಒರಗಿದ್ದ ಕುಮಾರಶೇಖರನು ದೇಹಸ್ಮೃತಿಯಿಲ್ಲದೆ ಬಿಕ್ಕಿಬಿಕ್ಕಿ ಅಳುತ್ತಿದ್ದನು. ಬಳಿಯಲ್ಲಿಯೇ ಅವನ ಮಗಳಾದ ಅನ್ನಪೂರ್ಣೆಯೂ, ಮಗನಾದ ಕೃಪಾದೇವನೂ ಕುಳಿತು ತಂದೆಯನ್ನು ಕೂಗಿ ಕರೆಯುತ್ತ ಗಳಗಳನಳುತ್ತಿದ್ದರು. ತಲೆಯಕಡೆ ಲಲಿತಾದೇವಿ ಕುಳಿತು, ಕಣ್ಣೀರು ಸುರಿಸುತ್ತ, ತನ್ನ ಕೋಮಲಹಸ್ತಗಳಿಂದ ಕುಮಾರಶೇಖರನ ಮುಡಿಯನ್ನು ನೇವರಿಸುತ್ತ, ನಡುನಡುವೆ—"ಬೇಡ, ಕುಮಾರ, ಅಳಬೇಡ, ಮಾತನಾಡು, ಏನಾಗಿರುವುದು. ಹೇಳು—ಹೇಳಣ್ಣಾ?" ಎಂದು ಕೂಗಿ ಕೇಳುತ್ತಿದ್ದಳು. ಆದರೂ, ಕುಮಾರನು ಮಾತನಾಡದೆಯೇ ಅಳುತ್ತಿದ್ದನು. ಲಲಿತಾದೇವಿಯ ತೊಡೆಯ

ಮೇಲೆ ಕುಳಿತಿದ್ದ ಪ್ರದ್ಯುಮ್ನನು ಒಮ್ಮೆ ಕುಮಾರನ ತಲೆಯನ್ನು ಹಿಡಿದೆಳೆದು–' ಅಣ್ಣಯ್ಯ, ಅಣ್ಣಯ್ಯ, ಅಯ್ಯೋ ಅಣ್ಣಯ್ಯ, ಮಾತಾಡು.' ಎಂದು ಕೂಗುತ್ತಲೂ, ಮತ್ತೊಂದುಬಾರಿ ಲಲಿತೆಯ ಗಲ್ಲವನ್ನು ಹಿಡಿದು– 'ಅಮ್ಮಯ್ಯಾ, ಅಣ್ಣಯ್ಯ–ಮಾತಾಡು ಏಕೆ ?' ಎಂದೂ ಕೇಳುತ್ತಿದ್ದನು.

ಆ ವೇಳೆಯಲ್ಲಿ ಭವಾನಿದೇವಿ ತ್ವರೆಯಿಂದ ಕಿರುಮನೆಯೊಳಹೊಕ್ಕು, 'ಏನತ್ತಿಗೆ?' ಎಂದು ಕೇಳಿದಳು.

**ಲಲಿತಾ:**— ಭವಾನಿ! ಇದೆಲ್ಲವೂ ನನ್ನ ಪೂರ್ವಾರ್ಜಿತ! ಏನು ಹೇಳಲಿ–ತಾಯಿ! ಮೈಮರೆತು ನಿದ್ರೆಮಾಡುತ್ತಿದ್ದವನು ಹೇಗೋ ಅರಿಚಿಕೊಂಡು ಎಚ್ಚತ್ತು ಹೀಗೆ ಅಳತೊಡಗಿರುವನು ಎಷ್ಟು ಒಗೆಯಿಂದ ಕೂಗಿ ಕರೆದರೂ ಕಣ್ತೆರೆಯಲೊಲ್ಲನು. ಮಕ್ಕಳು ಅಳುತ್ತಿರುವುದನ್ನು ನೋಡಿದರೆ ಪ್ರಾಣವೇ ಹಾರಿಹೋದಂತಾಗುವುದು. ......

**ಭವಾನಿ:**—'ಅತ್ತಿಗೆ, ಸ್ವಲ್ಪತಾಳು, ನಾನು ಸಮಾಧಾನಪಡಿಸುವೆನು. ಎಂದು ಮಕ್ಕಳ ಕೈಹಿಡಿದು– "ಅನ್ನಪೂರ್ಣಾ! ನೀನೂ ಕೃಪಾದೇವನೂ ಹೋಗಿ ನಿಮ್ಮ ದೊಡ್ಡಪ್ಪನನ್ನು ಕರೆತರುವಂತೆ ಭಾವನವರಿಗೆ ತಿಳಿಸುಹೋಗು. ಏನೂ ಆಲೋಚಿಸಬೇಡ.' ಎಂದು ಅವರಿಬ್ಬರನ್ನೂ ಕಳಿಹಿ, ತಾನು ಕುಮಾರಶೇಖರನ ಬಳಿಗೆ ಬಂದು, ಅವನ ತಲೆಯ ಮೇಲೆ ತನ್ನೆಡಗೈಯಿರಿಸಿ, ಬಲದಕೈಯಿಂದ ಕಣ್ಣನ್ನು ಬಿಡಿಸುತ್ತ–"ಏಳು ಏಳು, ಕುಮಾರಶೇಖರ, ನನ್ನನ್ನು ನೋಡು, ನಾನು ಬಂದೆನು; ನಿನ್ನ ಸರ್ವಾಪರಾಧವೂ ಕ್ಷಮಿಸಲ್ಪಟ್ಟಿರುವುದು. ಏಳು, ಅಳುವುದನ್ನು ನಿಲ್ಲಿಸು ಕಣ್ದೆರೆ," ಎಂದಳು.

(ಕುಮಾರನು ಮತ್ತೆ ಮೊದಲಿನಂತೆಯೇ ಅಳುತ್ತಿದ್ದನು.)

**ಭವನಿ —** (ಮತ್ತೆಯೂ ಮೊದಲಿನಂತೆಯೇ–) 'ಏಕೆ, ಕುಮಾರ! ನನ್ನಲ್ಲಿಯೂ ಅಪನಂಬುಗೆಯೇ? ಕಣ್ದೆರೆ, ನನ್ನ ಮಾತನ್ನು ಕೇಳು, ಭಗವಂತನು ನಿನ್ನನ್ನು ಕ್ಷಮಿಸುವನು. ನೀನಿನ್ನು ಪಾಪನಿರ್ಮುಕ್ತನಾಗುವೆ; ಇನ್ನು ಅಳಬೇಡ, ಪ್ರಾಯಶ್ಚಿತ್ತದಿಂದ ನಿನ್ನನ್ನು ಪರಿಶುದ್ಧನನ್ನಾಗಿ ಮಾಡುವರು.

**ಕುಮಾರ —** (ಬಿಕ್ಕುತ್ತ–) 'ಏನು, ಯಾರು, ಅಯ್ಯೋ, ಸುಳ್ಳು,

ದುರ್ಗಾ ! ಬರಿಯಭ್ರಾಂತಿ ! ನಾನು ಪಾಪಿ ! ಅಯ್ಯೋ, ಅಲ್ಲಿ-ಅಲ್ಲಿ-ನೋಡು, ಹಾ ! ಅಯ್ಯೋ ! ಬಂತು-ಬಳಿಗೆ ಬಂತು. ಹಾ-ಹಾ-ಹೋದೆ; ನನ್ನ ....ಹಾ !' (ಎಂದು ಒದೆದಾಡತೊಡಗಿದನು.)

**ಭವಾನಿ:—** ಹಾಗೆಯೇ ನೋಡಿ ವಿಚಾರಮಾಡಿ ಇವನ ಭ್ರಾಂತಿಯ ಮೂಲವೇನೆಂದು ತಿಳಿದುಕೊಂಡು ತಲೆದೂಗಿ ಎದ್ದು ನಿಂತು ಘನಗಂಭೀರ ಸ್ವರದಲ್ಲಿ "ಚಿಃ, ಚಿಃ, ಎಷ್ಟು ಸಾಹಸವು ? ಎಲ್ಲಿಗೆ ಬರುವುದು ? ನಾನಿಲ್ಲಿದ್ದೇನೆ; ಎಚ್ಚರಿಕೆ ! ವಿಶಾಲಾಕ್ಷಿ, ದೂರಸಾರು; ತೊಲಗು, ದೂರದಲ್ಲಿರು, ನಡೆ; ಇಲ್ಲದಿದ್ದರೆ ನೋಡಿದೋ ! ಸುಟ್ಟು ಹಾಕುವೆನು.' ಎಂದು ಹೇಳಿ, ಬಳಿಕ ಕುಮಾರನ ಎದೆಯಮೇಲೆ ಕೈಯಿರಿಸಿ-ಏಳು, ಇನ್ನು ಏಳು, ಕುಮಾರ! ಭಯವಿಲ್ಲ, ನಿನ್ನ ಪತ್ನಿಯನ್ನು ಕಟ್ಟಿಹಾಕಿರುವೆನು-ನೋಡಲ್ಲಿ ! ಎದ್ದು ಕುಳಿತುಕೊ" ಎಂದಳು.

**ಕುಮಾರ —** (ಬುಸುಗುಟ್ಟುತ್ತ ಮೆಲ್ಲನೆ ಕಣ್ದೆರೆದು-"ಹಾ ! ಏನು, ಏನಂದೆ ತಾಯಿ ?" ಎಂದು ಕೇಳಿದನು.

**ಭವಾನಿ:—** ಕಣ್ದೆರೆ, ಭೀತಿಯನ್ನು ದೂರಮಾಡು. ನಿನ್ನ ಸಾಕು ತಾಯಿ ಅಳುತ್ತಿರುವಳು ನೋಡು.

ಕುಮಾರನು ತ್ವರೆಯಿಂದೆದ್ದು ಕಳಿತು, ಲಲಿತಾದೇವಿಯನ್ನು ನೋಡಿ, ದುಃಖವನ್ನು ತಡೆಯಲಾರದ, ಅವಳ ಕಾಲ್ಗಳನ್ನು ಬಿಗಿಯಾಗಿ ಹಿಡಿದು ಬಿಕ್ಕಿಬಿಕ್ಕಿ ಅಳುತ್ತ-"ಅಮ್ಮಾ, ಅಮ್ಮಾ, ಬೇಡ ಅಮ್ಮಾ ! ಪಾಪಿಗಾಗಿ-ಈ ಚಂಡಾಲನಿಗಾಗಿ ನೀನು-ನೀನೇಕೆ ಅಳುವೆ ? ಅಮ್ಮಾ, ಈ ಪಾಪಿಯನ್ನು ಕ್ಷಮಿಸು, ಕ್ಷಮಿಸು !"

**ಲಲಿತೆ —** ಕುಮಾರನ ತಲೆಯನ್ನು ನೇವರಿಸಿ, ಅನುಕಂಪಿತಸ್ವರದಿಂದ—'ಕುಮಾರ ! ಆದುದು ಆಗಿಯೇ ಹೋಯಿತು. ಇನ್ನದಕ್ಕಾಗಿ ಸುಮ್ಮನೇಕೆ ಅಳುತ್ತಿರುವೆ ? ಬಿಡು, ಸಂತಾಪವನ್ನು ಬಿಟ್ಟು, ಶಾಂತಿಪಥವನ್ನು ಹಿಡಿ, ಪರಮಾತ್ಮನಲ್ಲಿ ಕ್ಷಮೆ ಬೇಡು, ಪರಮಾತ್ಮನೊಬ್ಬನೇ ನಿನ್ನನ್ನು ಕ್ಷಮಿಸಲು ಶಕ್ತನಲ್ಲದೆ, ನಾವು ಶಕ್ತರಾಗಲಾರೆವು. ನಮಗಾರಿಗೂ ನಿನ್ನಲ್ಲಿ ಅನ್ಯಥಾ ಭಾವವೂ ಇಲ್ಲ.

**ಕುಮಾರ —** (ದೈನ್ಯಭಾವದಿಂದ-) 'ಬೇಡ ಅಮ್ಮಾ ! ಹಾಗೆ

ಹೇಳಿ, ಅಂತಸ್ತಾಪವನ್ನು ಹೆಚ್ಚಿಸಬೇಡ! ಯಾರಲ್ಲಿ ಅಪರಾಧಿಯಾಗಿರುವೆನೋ ಅವರನ್ನಲ್ಲದೆ, ಮತ್ತಾರಲ್ಲಿ ಕ್ಷಮೆ ಬೇಡಲಿ? ಅವರಲ್ಲದೆ ಮತ್ತಾರು ನನ್ನ ಅಪರಾಧವನ್ನು ಕ್ಷಮಿಸಬೇಕಾಗಿರುವದು? ಹೇಳು, ಅವ್ವಾ! ಕ್ಷಮಿಸಿರುತ್ತೇನೆಂದು ಹೇಳಿ, ನನ್ನ ಅಂತಸ್ತಾಪವನ್ನು ಶಮನಮಾಡು. ಅಮ್ಮಯ್ಯಾ, ಅಣ್ಣನಿಗೆ ಹೇಳಿ, ಈ ಹಂತಕನಿಗೆ ಒಂದಿಷ್ಟು ದಯಾಭಿಕ್ಷೆಯನ್ನು ಕೊಡುವಂತೆ ಮಾಡು. ಅದರಿಂದಲೇ ನನ್ನ ಅಂತರಾತ್ಮಕ್ಕೆ ಶಾಂತಿಯುಂಟು. ಅವ್ವಾ! ಇನ್ನು ....

**ಲಲಿತಾ —** (ಕಂಬನಿದುಂಬಿ ಗದ್ಗದಸ್ವರದಿಂದ–) 'ಅಪ್ಪ! ಇಷ್ಟು ಪೇಚಾಡಬೇಕಾಗಿಲ್ಲ. ಅವರು ನಿನ್ನಲ್ಲಿ ಆಗ್ರಹಗೊಂಡಿದ್ದರಲ್ಲವೇ ಕ್ಷಮಿಸಬೇಕಾದುದು? ಹೆತ್ತಮಕ್ಕಳ ವಿಷಯದಲ್ಲಿರುವ ವಾತ್ಸಲ್ಯಕ್ಕೂ ಹೆಚ್ಚಾಗಿ ಸಾಕುಮಕ್ಕಳಲ್ಲಿ ಮಮತೆಯೆಂಬುವದನ್ನು ನೀನು ತಿಳಿದಿದ್ದೂ ಅಳುವುದೇ? ಮಕ್ಕಳು ಎಷ್ಟೋ ಕೆಟ್ಟಕೆಲಸಗಳನ್ನು ಮಾಡುವರು. ಬುದ್ಧಿ ತಿಳಿಯದೆ ಅವರು ಮಾಡಿದುದಕ್ಕೆ ಬುದ್ಧಿವಂತರಾದ ಹಿರಿಯರು ಕೋಪಿಸಿ ಅವರನ್ನು ಬಿಟ್ಟುಬಿಡಬಹುದೇ? ಹೇಳು, ಒಂದುಬಗೆಯಲ್ಲಿದಿದ್ದರೆ ಹತ್ತು ಬಗೆಯಾಗಿ ಹೇಳಿ, ಅವರನ್ನು ದಾರಿಗೆ ತರಬೇಕಾದುದು ಹಿರಿಯರ ಕೆಲಸವಾಗಿರುವುದು. ನೀನು ಮುಂದಾಲೋಚನೆಯಿಲ್ಲದೆ, ಮೂರ್ಖರೊಡನೆ ಸೇರಿ, ಬುದ್ಧಿಗೆಟ್ಟು, ಒಂದೆರಡು ಕೆಟ್ಟಕೆಲಸಗಳನ್ನು ಮಾಡಿದೆಯೆಂದು, ನಿನ್ನನ್ನು–ಪಡುಪಾಟುಪಟ್ಟು ಸಾಕಿ, ಅಕ್ಕರೆಯಿಂದ ಸಲಹಿ, ದೊಡ್ಡವನನ್ನಾಗಿ ಮಾಡಿ ಮುಂದಕ್ಕೆ ತಂದ ನಿನ್ನನ್ನು ದೂರಮಾಡಿ ಬಿಡಲು ನಾವು ಕಟುಕರೇ? ಹೇಳು ಕುಮಾರ, ನಿನ್ನ ಸಂಸಾರ ....

(ಲಲಿತಾದೇವಿಯ ಗಂಟಲು ಕಟ್ಟಿತು. ಮುಂದೆ ಒಂದು ಅಕ್ಷರವಾದರೂ ಹೊರಡಲಿಲ್ಲ. ನೀರವವಾಗಿ ಅಳುತ್ತ ಕುಳಿತುಬಿಟ್ಟಳು. ಲಲಿತಾದೇವಿ ಅಳುವುದನ್ನು ನೋಡಿ ಪ್ರದ್ಯುಮ್ನನೂ ಅಳತೊಡಗಿದನು.)

**ಭವಾನಿ: —** (ಪ್ರದ್ಯುಮ್ನನನ್ನೆತ್ತಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಮೃದುಮಧುರವಾಗಿ–) "ಅತ್ತಿಗೆ! ಶೋಕಪಡುವುದನ್ನು ಸಾಕು. ನಡೆದ ಕಾರ್ಯಕ್ಕೆ ಮಿಡುಕಿ ಫಲವಿಲ್ಲ. ಗಳಗಳನತ್ತು ಮನಸ್ಸನ್ನು ಕೆಡಿಸಿಕೊಳ್ಳಬಾರದು. ಇನ್ನು ಸಮಾಧಾನತಂದುಕೊಂಡು ಅವನಿಗೂ

ಧೈರ್ಯ ಹೇಳು. ಗಂಡಸರೆಲ್ಲರೂ ಬರುವ ವೇಳೆಯಾಯ್ತು." ಎಂದಳು.

(ಲಲಿತಾದೇವಿ ಕಣ್ಣೊರಸಿಕೊಳ್ಳುತ್ತ, ಸ್ಥಿರಭಾವವನ್ನು ಹೊಂದಿ ಸುಮ್ಮನೆ ಕುಳಿತಳು.)

**ಭವಾನಿ:—** (ಕುಮಾರನನ್ನು ನೋಡಿ–) 'ಅಣ್ಣ! ಇನ್ನು ಅತ್ತು ಹಂದೆಯಾಗಬೇಡ. "ಕೆಟ್ಟಮೇಲೆ ಬುದ್ಧಿಬಂತು, ಅಟ್ಟಮೇಲೆ ಒಲೆಯುರಿದಿತು" ಎಂಬ ಗಾದ ಸುಳ್ಳಲ್ಲ "ತಲೆ ತಗುಲಿದಷ್ಟೂ ತಿಳಿವು ಹೆಚ್ಚುವುದು." ಎಂಬುದನ್ನು ತಿಳಿದು ಎಚ್ಚತ್ತು ಮುಂದಿನ ಸುಖಲಾಭಕ್ಕಾಗಿ ಆತ್ಮವಿಚಾರದಲ್ಲಿ ಪ್ರಸಕ್ತನಾಗು.

**ಕುಮಾರನು** ದೈನ್ಯದಿಂದ–' ಅಕ್ಕಾ, ಹೇಗೆ ಸಹಿಸಲಿ? ಸ್ಮರಣಮಾತ್ರದಿಂದಲೇ ದವಾನಲದಿಂದ ದಗ್ಧನಾಗುತ್ತಿರುವಂತೆ ತೋರುವುದು. ನಾನು ಮೊದಲೇ ತಿಳಿಗಣ್ಣುಳ್ಳವನಾಗಿದ್ದರೆ, ಹೀಗೆ ಇಷ್ಟು ಅನರ್ಥಗಳುಂಟಾಗುತ್ತಿರಲಿಲ್ಲ. ಮೊದಲುಮೊದಲೇ ಎಚ್ಚತ್ತುಕೊಳ್ಳದೆ, ಜ್ಞಾನಶೂನ್ಯನಾಗಿ, ಹೆಂಗಸನ್ನು ತಲೆಯಮೇಲೇರಿಸಿ, ಕುಣಿಸಿ ಮತ್ತಿಗೇರಿಸಿಬಿಟ್ಟು, ಕಡೆಗೆ ಅವಳ ಮಾಯಾಮಂತ್ರದಿಂದ ಮೂಢನಾಗಿ ಘೋರಪಾತಕಗಳಿಗೆ ಗುರಿಯಾದುದಲ್ಲದೆ, ಅಯ್ಯೋ ಭವಾನಿ, ಅವಳು ಎಂತಹಳೇ ಆಗಲಿ, ಸ್ತ್ರೀಹತ್ಯೆಯನ್ನೂ ಮಾಡಿ, ಇಹಪರಗಳೆರಡರಲ್ಲಿಯೂ ಸುಖಬಾಹಿರನಾದೆನಲ್ಲವೇ? ತಾಯಿ, ನನ್ನ–ಈ ಅಧಮನಾದ–ನನ್ನ ಕ್ರೂರಕೃತ್ಯದಿಂದ ಮಕ್ಕಳ ಗತಿಯೇನಾಯಿತು? " (ಎಂದು ಕುಮಾರನು ಮುಖಕ್ಕೆ ಬಟ್ಟೆಯನ್ನು ಮುಚ್ಚಿ ಮಕ್ಕಳಂತೆ ಗಟ್ಟಿಯಾಗಿ ಅಳುತ್ತ ಕುಳಿತನು. ಭವಾನಿಯ ದಯಾರ್ದ್ರಹೃದಯವೂ ಕರಗಿಹೋಯಿತು. ಕಣ್ಣೀರು ತುಂಬಿ–) "ಅಣ್ಣ! ಕೋಪವನ್ನು ತಡೆಯಲಾರದ ವಿಚಾರಶೂನ್ಯತೆಯ ಫಲವಿದು. ಇನ್ನಾದರೂ ಶಾಂತನಾಗು, ಪತ್ನಿಯ ಹತ್ಯೆಯನ್ನು ಮಾಡಿದೆಯಾದರೂ ಅವಳ ಆತ್ಮಕ್ಕೆ ಶಾಂತಿಯುಂಟಾಗುವಂತೆ ಜಿತೇಂದ್ರಿಯನಾಗಿ ಮಕ್ಕಳ ಪುರೋವೃದ್ಧಿಯಲ್ಲಿ ನಿನ್ನ ಉಳಿದ ಕಾಲವನ್ನು ಕಳೆಯಲು ಸಂಕಲ್ಪ ಮಾಡು. ಮಕ್ಕಳಿಗೆ ಹೆತ್ತತಾಯಿ ಇಲ್ಲದೆಹೋದರೂ, ಅವರ ಲಾಲನ–ಪಾಲನಗಳಿಗೆ ಓರ್ವ ತಾಯಿಯಲ್ಲದೆ ನಾಲ್ಕಾರು ತಾಯಿಯರು ಸಿದ್ಧವಾಗಿರುವರು.

**ಲಲಿತಾ:**— (ಕಂಪಿತಸ್ವರದಿಂದ–) "ಕುಮಾರ! ನಿನಗೆ ನಿನ್ನ ಪತ್ನಿಯನ್ನು ಬದುಕಿಸಿಕೊಡುವುದಕ್ಕೂ, ಮತ್ತು ನಿನ್ನ ಮಕ್ಕಳಿಗೆ ಹೆತ್ತ ತಾಯಿಯನ್ನು ಕೊಡುವುದಕ್ಕೂ ನಮ್ಮಿಂದಳವಲ್ಲ. ಆದರೂ ನಿನ್ನ, ನಿನ್ನ ಮಕ್ಕಳ ಪೋಷಣೆ, ಅಭ್ಯುದಯ ಇತ್ಯಾದಿಗಳ ವಿಚಾರದಲ್ಲಿ ಮಾಡಬೇಕಾದ ಕಾರ್ಯಗಳಾವುದೊಂದರಲ್ಲಿಯೂ ಕೊರತೆಯಾಗದಂತೆ ನೋಡಿಕೊಳ್ಳಲು, ನಾವೆಲ್ಲರೂ ಇರುವೆವು, ಇನ್ನು ಶಾಂತನಾಗು.

**ಕುಮಾರ —** (ನಿಟ್ಟುಸಿರುಬಿಟ್ಟು) ಅಮ್ಮಾ! ದಗ್ಧಹೃದಯಕ್ಕೆ ಶಾಂತಿಯಿನ್ನೆಲ್ಲಿದ? ಕ್ಷಣಕ್ಷಣಕ್ಕೂ ವಿಷಜ್ವಾಲೆಯಂತೆ ಹೊರಡುತ್ತಿರುವ ಈ ಶ್ವಾಸೋಚ್ಛ್ವಾಸಗಳನ್ನಾದರೂ ನೋಡಿ, ಈ ಪಾಪಿಯ ಪರಿತಾಪವನ್ನು ತಿಳಿಯಲಾರೆಯಾ? ಅಮ್ಮ ಎಲ್ಲವನ್ನೂ ತಡೆಯಲು ಪ್ರಯತ್ನಿಸುವೆನು. ಆದರೆ ಅಯ್ಯೋ, ಅನ್ನಪೂರ್ಣೆಯ ಮದುವೆ.. .... ಈ ವರ್ಷವೇ ಆಗ ಬೇಕೆಂದು..... ..ಅಯ್ಯೋ ಎಷ್ಟೊಂದು ಸಡಗರ–ಎಷ್ಟು ಸಂತೋಷ– ತಮ್ಮನಿಗೆ ... ಅಪ್ಪಾ–ನಾರಾಯಣಾ! ... . ' ಎಂದು ಹೇಳು ತ್ತಿದ್ದಂತೆಯೇ ಮೂರ್ಛಿತನಾದನು"

ಕುಮಾರನು ಮೂರ್ಛಿತನಾಗಿ ಬಿದ್ದ ಕ್ಷಣದಲ್ಲಿಯೇ– "ಬಿಡು ಬಿಡು, ವಿಕ್ರಮ! ನನ್ನನ್ನು ಬಿಟ್ಟುಬಿಡು. ನಾನಿನ್ನು ಕ್ಷಣವೂ ನೋಡುತ್ತ ನಿಲ್ಲಲಾರೆನು." ಎಂದು ಹೇಳುತ್ತ ಮಧುಸೂದನಭಟ್ಟಾಚಾರ್ಯನು ಕೂಗಿ ಕೊಂಡನು. ಭವಾನಿಯೂ ಲಲಿತಾದೇವಿಯೂ ತಿರುಗಿ ನೋಡಿದರು. ಕಿರುಮನೆಯ ಬಾಗಿಲಲ್ಲಿ ಧನ್ವಂತರಿ, ಕಮಲಾಕಾಂತ, ದುರ್ಗಾಪ್ರಸಾದ, ದಯಾನಾಥ ಇವರೆಲ್ಲರೂ ಭ್ರಾಂತರಾಗಿ ನೋಡುತ್ತ ನಿಂತಿದ್ದರು. ವಿಕ್ರಮನು ಭಟ್ಟಾಚಾರ್ಯನನ್ನು ಬಿಗಿಯಾಗಿ ತಬ್ಬಿ ಹಿಡಿದಿದ್ದನು. ಭಟ್ಟಾ ಚಾರ್ಯನು ಬಿಡಿಸಿಕೊಳ್ಳುವ ಸಾಹಸದಲ್ಲಿದ್ದನು ಈತನ ಮಗ್ಗುಲಲ್ಲಿಯೇ ಮತ್ತೊಬ್ಬ ವೃದ್ಧನು ಸ್ತಬ್ಧನಾಗಿ ನಿಂತಿದ್ದನು.

ಮಧುಸೂದನನನ್ನು ನೋಡಿದೊಡನೆಯೇ ಭವಾನಿಯ ತೊಡೆಯ ಮೇಲೆ ಕುಳಿತಿದ್ದ ಪ್ರದ್ಯುಮ್ನನು ಓಡಿಬಂದು, ಸಂಭ್ರಮದಿಂದ–'ಅಪ್ಪಾ ಅಪ್ಪಾ!' ಎಂದು ಅಪ್ಪಿಕೊಂಡನು. ವಿಕ್ರಮನು ಮಧುಸೂದನನನ್ನು ಬಿಟ್ಟನು. ವಿಕ್ರಮನ ಕೈಹಿಡಿತವು ತಪ್ಪಿಹೋದೊಡನೆಯೇ ಮಧು

ಸೂದನನು ಮಗನನ್ನು ಕಣ್ಣೆತ್ತಿಯೂ ನೋಡದೆ ಹಾರಿಬಂದು ಮೂರ್ಛಿತನಾಗಿ ಬಿದ್ದಿದ್ದ ಕುಮಾರಶೇಖರನನ್ನು ಎತ್ತಿ ತನ್ನ ಎದೆಗೆ ಅಪ್ಪಿ ಕುಳ್ಳಿರಿಸಿಕೊಂಡು, ಮುಖದಲ್ಲಿ ಸುರಿಯುತ್ತಿದ್ದ ಬೆವರನ್ನು ತನ್ನ ಉತ್ತರೀಯದ ಕೊನೆಯಿಂದ ಒರಸುತ್ತ ದುಃಖಾತಿರೇಕದಿಂದ, ತಡೆತಡೆದು ಹೇಳಿದನು. “ ಕುಮಾರ ! ನಾನು ಬಂದಿರುವೆನು, ನಿನ್ನ ಅಣ್ಣ, ಕಣ್ದೆರೆ, ಶೇಖರ ! ನನ್ನನ್ನು ನೋಡು. ” ಎಂದನು.

**ಕುಮಾರ —** ( ಅರೆಗಣ್ಣು ಬಿಟ್ಟುನೋಡಿ ವಿಕೃತಸ್ವರದಿಂದ)- ‘ ಅಯ್ಯೋ-ಅಣ್ಣಯ್ಯಾ ಪಾಪಿ-ನಾನು-ಪಾಪಿ, ಕ್ಷಮಿಸು ಅಣ್ಣಯ್ಯಾ ’

**ಮಧು: —** ( ಗದ್ಗದಸ್ವರದಿಂದ ) ‘ ಅಪ್ಪ, ಹೆಚ್ಚಾಗಿ ಅತ್ತು ನನ್ನನ್ನು ಕೊಲ್ಲಬೇಡ, ನಿನ್ನ ದುಃಖವನ್ನು ನೋಡಲಾರೆನು. ಕುಮಾರ ! ನಿನ್ನ ಸಂತಾಪವನ್ನು ನೋಡಿ ನಾನು ಬೆಂದುಹೋಗುತ್ತಿರುವೆನು.

**ಕುಮಾರ —** ( ಉನ್ಮತ್ತನಂತೆ ಎದ್ದುಕುಳಿತು, ಮಧುಸೂದನನ ಕಾಲನ್ನು ಹಿಡಿದು )–‘ ಅಣ್ಣಯ್ಯ, ಆಶೀರ್ವಾದಮಾಡು. ಇದೋ ನೋಡು; ಪ್ರಪತ್ತಿಯನ್ನು ಹೊಂದಿದೆನು. ಪಶ್ಚಾತ್ತಾಪದಿಂದ ಪರಿತಪಿಸುವ ನನಗೆ ಇದೊಂದೇ ಇನ್ನು ಮುಂದೆ ಆಶ್ರಯವಸ್ತು. ಇದರ ಸೇವೆಯೇ ನನ್ನ ತಾಪಕ್ಕೆ ಶಾಂತಿಕ್ರಿಯೆ. ಅಣ್ಣ, ಈ ಪಾದಸಾಕ್ಷಿಯಾಗಿ ಹೇಳುವೆನು. ಇನ್ನು ನಾನು ಶೋಕಪಡುವುದಿಲ್ಲ. ನಿನ್ನ ಚರಣದಲ್ಲಿ ನನ್ನ ಸರ್ವಸ್ವವನ್ನೂ ಒಪ್ಪಿಸಿಬಿಟ್ಟೆನಾದುದರಿಂದ ಇನ್ನು ನನಗೆ ಮತ್ತಾವ ಲೋಭಮೋಹಕ್ಕೂ ಕಾರಣವಿರುವುದಿಲ್ಲ. ನನಗೆ ಗುರುದೈವತವೆಲ್ಲವೂ ನೀನೇಯೆಂದು ಇದೋ ಪಾದಸಾಕ್ಷಿಯಾಗಿಟ್ಟು ಪ್ರಮಾಣ ಮಾಡುತ್ತೇನೆ. ಅಣ್ಣಯ್ಯ, ಪ್ರದ್ಯುಮ್ನನನ್ನು ಒಪ್ಪಿಸಿದೆನು ಮತ್ತು ಅದೋ ಅಲ್ಲಿ ನಿಂತು ನೋಡುತ್ತಿರುವ ಆ ಮಕ್ಕಳನ್ನೂ ನಿನ್ನ ಪಾದಕಾಣಿಕೆಯಾಗಿ ಸಮರ್ಪಿಸಿಬಿಟ್ಟೆನು. ಇನ್ನು ಮುಂದೆ ನನಗೆ..........

**ಮಧು:—** ( ಕುಮಾರಶೇಖರನನ್ನು ಅಷ್ಟಕ್ಕೇ ತಡೆದು) ಕುಮಾರ! ಉನ್ಮತ್ತನಾಗದೆ, ಸ್ವಸ್ಥಚಿತ್ತನಾಗಿ ಕುಳಿತುಕೊ. ಇಲ್ಲಿ ನೋಡು; ನಿನ್ನ ಭಾವಿಜಾಮಾತೃ. ಈತನಿಗೆ ನಿನ್ನ ಮಗಳನ್ನು ದಾನಮಾಡಲು ನಿಶ್ಚಯವಾಗಿರುವುದು. ಕುಮಾರ, ವ್ಯಥೆಪಡಬೇಡ. ಇವರೆಲ್ಲರೂ ಮುಖ್ಯವಾಗಿ

ನಮ್ಮ ಭವಾನಿಯು ಪ್ರೇರಣೆಯಿಂದ ನಿನ್ನ ಮಗಳ ವಿವಾಹವನ್ನು ಈ ಸಪ್ತಾಹದೊಳಗಾಗಿಯೇ ನಡೆಯಿಸಬೇಕೆಂದು ಗೊತ್ತು ಮಾಡಿರುವರಂತೆ.

**ಕುಮಾರ:—** (ಕೌತುಕದಿಂದ)— ಅಣ್ಣಯ್ಯ, ಇದು ಬರಿಯ ಆಶೆಯಲ್ಲವೇ? ಈ ನೃಶಂಸನ ಕೂಡ ಸಂಬಂಧ, ದಯಾನಾಥರಂತಹರಿಗೆ— ಅಯ್ಯೋ ಅಸಂಭವವಿದು! ಕಮಲಾಕಾಂತನೊಪ್ಪುವನೇ?

**ದಯಾನಾಥ —** (ಮುಂದೆಬಂದು)— 'ಅಯ್ಯಾ, ಕುಮಾರ! ಈಗ ನಾವೆಲ್ಲರೂ ನಿನ್ನನ್ನು ಕ್ಷಮಿಸಿರುವೆವು, ಧೈರ್ಯವಾಗಿರು. ಭವಾನೀದೇವಿ ವಿಕ್ರಮಕುಮಾರರ ದೈವಿಕಪ್ರೇಮದಿಂದ ನಮ್ಮ ಸಮಾಜದ ಕಲ್ಯಾಣವು ಊರ್ಜಿತಸ್ಥಿತಿಗೆ ಬರುತ್ತಿರುವುದು. ನಾಳೆಯೇ ಸೇರುವ ನಿಶ್ಚಿತಾರ್ಥದ ಸಭೆಯಲ್ಲಿ ನಿನ್ನ—ಮಧುಕರನ ಅಪರಾಧಗಳೂ, ಪ್ರಾಯಶ್ಚಿತ್ತ—ಪರಿತಾಪಗಳೂ ಯಥಾಪ್ರಕಾರವಾಗಿ ನಿವೇದಿಸಲ್ಪಟ್ಟು, ಪರಿಷತ್ತಿನ ಅನುಮತಿ ಹೊಂದಿಯೇ ನಿಮ್ಮನ್ನು ನಮ್ಮೊಡನೆ ಸೇರಿಸಿಕೊಳ್ಳುವೆವು. ಆಗಲೇ ನಿನ್ನ ಮಗಳ ವಿವಾಹ ನಿಶ್ಚಯವೂ ಆಗುವುದು. ಇನ್ನಾದರೂ ಶಾಂತನಾಗು. ನಮ್ಮ ಕಮಲಾ ಕಾಂತನು ನ್ಯಾಯಪರನೂ, ಸೂಕ್ಷ್ಮದರ್ಶಿಯೂ, ಭೂತದಯಾಪರನೂ ಆಗಿರುವುದರಿಂದ ನಿನ್ನಲ್ಲಿ ಆತನು ಎಂದಿಗೂ ತಿರಸ್ಕಾರಭಾವವನ್ನು ವಹಿಸುವುದಿಲ್ಲ.

ಕುಮಾರನು ಕೈಜೋಡಿಸಿ ದೈನ್ಯದಿಂದ—'ನ್ಯಾಯಮೂರ್ತಿ! ನನ್ನ ನಾಲಿಗೆ ಯಲ್ಲಿ ಮುಳ್ಳು ಮುರಿದಿರುವುದು ನಾನೇನು ಹೇಳಬೇಕೋ ತಿಳಿಯೆನು.'

**ಲಲಿತಾದೇವಿ:—** ಪತಿಯನ್ನು ಕುರಿತು—"ಅದಾವಾಗ ಬಂದರು, ಪ್ರಮದೆಯ ತಂದೆಯುವರು?" ಎಂದಳು

**ಮಧು:—** ಅವರು ತಮ್ಮ ಪತ್ನಿಯನ್ನೂ ಮಧುಕರನ ಪತ್ನಿ ಯನ್ನೂ ಜೊತೆಗೊಂಡು ಈ ದಿವಸವೇ ಬಂದರಂತೆ. ಬಂದುದು ಮೊದ ಲ್ಗೊಂಡು ಮಗಳನ್ನೂ ಸೋದರಳಿಯನನ್ನೂ ತೋರಲು ನನ್ನನ್ನು ತ್ವರೆ ಪಡಿಸುತ್ತಿರುವರು. ನಾನು ನೋಡಿದ್ದರಲ್ಲವೇ ಇವರಿಗೆ ತೋರಿಸುವುದು? ಭವಾನಿಯ ಅನುಮತಿಯಾದಲ್ಲದೆ, ನಾವು ನೋಡಲವಕಾಶವಿಲ್ಲವೆಂದು ಹೇಳುತ್ತಿದ್ದೆನು. ಅಷ್ಟರಲ್ಲಿ ವಿಕ್ರಮನು ಓಡಿಬಂದು ನನ್ನ ಕೈಹಿಡಿದು ಇಲ್ಲಿಗೆ ಕರೆತಂದನು.

**ವೃದ್ಧ.**— ( ಕೈಮುಗಿದು ) " ತಾಯಿಯರೇ ! ನಾನು ಮುದುಕನಾದರೂ ಕೈಮುಗಿದು ಕೇಳುತ್ತಿರುವೆನು. ಹೆತ್ತೊಡಲನ್ನು ಹಿಡಿದು ಕಟ್ಟುವುದು ಕಷ್ಟ. ದಯೆಯಿಟ್ಟು ಮಕ್ಕಳ ಮುಖವನ್ನು ನೋಡಗೊಡಿರಮ್ಮಾ !

**ಕುಮಾರ:**— (ದೈನ್ಯದಿಂದ)– " ಅಕ್ಕ–ಭವಾನೀದೇವಿ ! ನಾನೂ ಪ್ರಾರ್ಥಿಸುವೆನು; ನನಗೂ ಕೃಪೆಮಾಡು. ನಾನು ಅವಳಲ್ಲಿಯೂ ಕ್ಷಮೆಯನ್ನು ಬೇಡಬೇಕಾಗಿರುವುದು. ತಾಯಿ, ಮಾಡು." ಎಂದನು.

**ಭವಾನಿ:**— ( ಎದ್ದುನಿಂತು ) "ಹಾಗಿದ್ದರೆ ಕೊಂಚ ತಾಳಿರಿ ಹೇಳಿಕಳಿಹುವೆನು." ( ಎಂದು ಹೇಳಿ ಅಲ್ಲಿಂದ ಹೊರಟುಬಿಟ್ಟಳು. ವಿಕ್ರಮ, ದುರ್ಗಾಪ್ರಸಾದ, ಕಮಲಾಕಾಂತ, ದಯಾನಾಥರೂ ಅಲ್ಲಿಂದ ಹೊರಟು ಹೋದರು. )

---

**ಶ್ರೀ**

# ಷಷ್ಠ ಪರಿಚ್ಛೇದ.

"ಬದ್ಧಾಂಜಲಿ ಪುಟಂ ದೀನಂ ಯಾಚನ್ತಂ ಶರಣಾಗತಮ್ ।
ನಹನ್ಯಾದಾನೃಶಂಸಾರ್ಥಮಪಿ ಶತ್ರುಂ ಪರಂತಪ ॥
ಆರ್ತೋವಾಯದಿವಾದೃಪ್ತ: ಪರೇಷಾಂ ಶರಣಂಗತ. ।
ಅರಿ:ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯ. ಕೃತಾತ್ಮನಾ ॥

(ರಾಮಾಯಣ)

( ಸಂಪ್ರಾರ್ಥನೆ, ಸಂದರ್ಶನ, ಸಮಾಧಾನ ಇತ್ಯಾದಿ. )

ದುರ್ಗಾಪ್ರಸಾದಠಾಕೂರನ ವಿಶಾಲಭವನದ ಹಿಂದಿನ ಮಾಳಿಗೆ ಮನೆಯ ಒಂದುಕಡೆಯ ಕಿರುಮನೆಯಲ್ಲಿ ಹಾಸುಗೆಯ ಮೇಲೆ ಪ್ರಮದೆ ಮುಸುಕಿಟ್ಟು ಮಲಗಿದ್ದಳು. ಬಳಿಯಲ್ಲಿಯೇ ದಾಸಿಯೊಬ್ಬಳು ಕುಳಿತು ಬಾಗಿಲ ಕಡೆಯನ್ನೇ ನೋಡುತ್ತ, ಆರನ್ನೋ ನಿರೀಕ್ಷಿಸುತ್ತಿದ್ದಳು. ಪ್ರಮದೆಯನ್ನು ನೋಡಲು ಭವಾನೀದೇವಿ ಪ್ರದ್ಯುಮ್ನನನ್ನೆತ್ತಿಕೊಂಡು ಬಂದು

ದಾಸಿಯನ್ನು ಕುರಿತು ಮೆಲ್ಲನೆ– "ಸಮಾಚಾರವೇನು? ಏನಾದರೂ ಎದ್ದಿದ್ದಳೇ?" ಎಂದು ಕೇಳಿದಳು.

**ದಾಸಿ:**— ತಾಯಿ! ಗಳಿಗೆಗೆಂಟುಬಾರಿ ಏಳುತ್ತಾರೆ. ಎದ್ದಾಗಲೆಲ್ಲಾ ನಿಮ್ಮನ್ನೇ ಕೂಗುತ್ತಿರುವರು. ಮದ್ದನ್ನು ಕುಡಿಯುವದಿಲ್ಲ. ಹಾಲನ್ನಂತೂ ಹತ್ತಿರಕ್ಕೂ ಬರಗೊಡುವುದಿಲ್ಲ

**ಭವಾನಿ:**— 'ಹಾಗಿದ್ದರೆ ನೀನಿತ್ತಬಾ' ಎಂದು ಕರೆದು, ಅವಳ ವಶಕ್ಕೆ ಪ್ರದ್ಯುಮ್ನನನ್ನೊಪ್ಪಿಸಿ– 'ನೀನು ಇವನನ್ನು ಎತ್ತಿಕೊಂಡು ಹೋಗಿ ಹೇಮಲತಾದೇವಿಗೆ– 'ಎಲ್ಲರನ್ನೂ ಕರೆದುಕೊಂಡು ಈಗಲೇ ನಾನು ಬರಹೇಳಿದೆನೆಂದು ಹೇಳಿ, ಜೊತೆಯಲ್ಲಿಯೇ ಕರೆದುಕೊಂಡು ಬಾ' ಎಂದು ಕಟ್ಟುಮಾಡಿ ಕಳಿಹಿ, ಬಳಿಕ ಮಲಗಿದ್ದ ಪ್ರಮದೆಯ ಬಳಿಗೆ ಬಂದು ಕುಳಿತು ಪ್ರೀತಿವ್ಯಂಜಕಸ್ವರದಿಂದ– 'ಪ್ರಮದಾ, ತಂಗಿ, ಪ್ರಮದಾ!' ಎಂದು ಕೂಗಿದಳು.

ಪ್ರಮದೆ ಹಚ್ಚಡವನ್ನು ತೆಗೆದು ಕಾಲುದೆಸೆಗೆ ಒಗೆದು ಬಿಸುಟು, ಧಿಗ್ಗನೆದ್ದು ಉನ್ಮಾದಿನಿಯಂತೆ ಭವಾನಿಯ ಕೊರಳನ್ನು ಬಿಗಿದು, ಅವಳ ಎದೆಯ ಮೇಲೆ ತನ್ನ ಮುಖವನ್ನಿರಿಸಿ– 'ಅಕ್ಕಾ, ಅಕ್ಕಾ, ಬಂದೆಯಾ– ಈಗಲಾದರೂ ಬಂದೆಯಾ? ನಿನಗೂ ನನ್ನಲ್ಲಿ ಇಷ್ಟು ಉದಾಸೀನವೇಕೆ? ಅಕ್ಕಾ! ಇನ್ನೆಷ್ಟು ಪರೀಕ್ಷಿಸುವೆ? ನನ್ನ ಸಂಕಟ.... ..'

**ಭವಾನಿ** — (ಪ್ರಮದೆಯ ಬೆನ್ನಿನಮೇಲ ಕೈಯಿರಿಸಿ ಮೆಲ್ಲನೆ–) "ಉಪೇಕ್ಷಿಸಿಲ್ಲ, ಪ್ರಮದಾ! ನಿನ್ನನ್ನು ಪರೀಕ್ಷಿಸಬೇಕೆಂಬ ಇಚ್ಛೆ ನನಗಿಲ್ಲ. ಮನಸ್ಥೈರ್ಯವಿಲ್ಲದಿದ್ದರೆ ಹಲವು ಗಂಡಾಂತರಗಳಿಗೆ ಸಿಕ್ಕಿ ತೊಳಲಬೇಕಾಗುವುದೆಂಬುದನ್ನು ನಿನಗೆ ಅನುಭವಮಾಡಿಕೊಡುವುದಕ್ಕೆಂದು ನಿನ್ನನ್ನಿಲ್ಲಿ ಬೇರೆಯಾಗಿರಿಸಿದ್ದುದು." ಎಂದಳು.

**ಪ್ರಮದೆ:**— "ಅಕ್ಕಾ! ಸ್ಥಿರತೆಯನ್ನು ಹೊಂದಿರುವೆನು. ಇನ್ನು ಮುಂದೆ ಎಂತಹ ಕಷ್ಟವನ್ನಾದರೂ ತಡೆಯಬಲ್ಲೆನು. ಇನ್ನಾದರೂ ನನ್ನನ್ನು ಈ ಸೆರೆಯಿಂದ ಬಿಡಿಸಿ, ನನ್ನನ್ನು ಅವರ ಪಾದತಲದಲ್ಲಿ ಕೆಡಹಿ ಬಿಡು...." (ಇವರಿಷ್ಟು ಮಾತನಾಡುತ್ತಿದ್ದಾಗಲೇ ಕಮಲಾಕಾಂತನು ಪ್ರವೇಶಿಸಿ, ಭವಾನಿಯನ್ನುಕುರಿತು) 'ದೇವೀ–ಭವಾನಿ! ಎಲ್ಲರೂ ಬಂದು ಬಾಗಿಲಲ್ಲಿ

ರುವರು; ಸಮಯವೇನು? ಪ್ರಮದೆಯ ದೇಹಸ್ಥಿತಿ ಹೇಗಿದೆ?' ಎಂದು ಕೇಳಿದಳು.

**ಭವಾನಿ.**— ಸುಸಮಯವೆಂದು ಹೇಳು. ಅಣ್ಣಯ್ಯ-ಭದ್ರ! ಮಹೋಪಾಧ್ಯಾಯರು, ಈಗ ಹೆಸರಿಗೆ ತಕ್ಕಂತೆ ಮಹಾಮಹೋಪಾಧ್ಯಾಯರಾಗಿಯೇ ಬರಬೇಕಲ್ಲದೆ, ಮಕ್ಕಳಂತೆ ಬರಬಾರದೆಂದು ತಿಳಿಸಿರು.

**ಕಮಲಾಕಾಂತನು:—** "ನೀನು ಭಗವತಿಯೇ ಸರಿ" ಎಂದು ಹೊರಟುಹೋದನು.

**ಭವಾನಿ —** ಪ್ರಮದಾ! ಇನ್ನು ಇಲ್ಲಿ ನೀನು ಎಚ್ಚರಿಕೆ ಹೊಂದಿ, ಸ್ಥಿರಭಾವದಿಂದ ಕುಳಿತುಕೊ. ಏಕೆಂದರೆ, ಈಗ ನಿನ್ನಲ್ಲಿಗೆ ನಿನ್ನ ಪತಿ, ನಿನ್ನ ತಂದೆ, ಮತ್ತು ನ್ಯಾಯಮೂರ್ತಿಯವರು, ನನ್ನ ಮೈದುನರು, ನಿನ್ನ ಮಕ್ಕಳು, ಎಲ್ಲರೂ ಬರುವರು. ನೀನು ಭೀರುವಾದರೆ ಆ ವೇಳೆಯಲ್ಲಿ ಸಂತೋಷವು ಮೇರೆಯನ್ನು ಮೀರಿ ಪ್ರಮಾದಕ್ಕೆ ತಿರುಗುವುದು. ಎಚ್ಚರಿಕೆಯಲ್ಲಿರು.

**ಪ್ರಮದೆ —** (ಎದ್ದು ಕುಳಿತು-) "ನೀನೇ ನೋಡಿ ಮೆಚ್ಚುವೆ! ನನ್ನ ಧೈರ್ಯ.... ......."

ಪ್ರಮದೆಯ ಮಾತು ಮುಗಿವುದಕ್ಕೆ ಮೊದಲೇ ಬಾಗಿಲಲ್ಲಿ- "ಮೆಲ್ಲನೆ ನಡೆ, ಕುಮಾರ, ಎಡಹಿಬೀಳುವೆ ಜೋಕೆ!" ಎಂಬ ಮಧುಸೂದನಮಹಾಮಹೋಪಾಧ್ಯಾಯರ ಕಂಠಸ್ವರವು ಕೇಳಿ ಬಂದಿತು. ಪ್ರಮದೆ, ಕಣ್ಣಳನ್ನು ಅರಳಿಸಿ ಬೀಗಿ ಕುಳಿತು, ಕೌತುಕ ವಿಸ್ಮಯಗಳಿಂದ ನೋಡತೊಡಗಿದಳು. ಭವಾನಿ ಪ್ರಮದೆಯ ಬೆನ್ನಿನಮೇಲೆ ಕೈಯಿರಿಸಿ, ಕರ್ತವ್ಯ ಜಾಗ್ರತಳಾಗಿ ಕುಳಿತಳು. ಕಿರುಮನೆಯೊಳಕ್ಕೆ ಕುಮಾರಶೇಖರನ ಕೈ ಹಿಡಿದುಕೊಂಡು ಮಧುಸೂದನನೂ, ಅವನ ಹಿಂದೆ ಪ್ರಮದೆಯ ತಂದೆಯೂ ಅವನ ಹಿಂದೆ ದುರ್ಗಾಪ್ರಸಾದ, ದಯಾನಾಥಠಾಕೂರ, ಕಮಲಾಕಾಂತ ಇವರೂ ಪ್ರವೇಶಿಸಿದರು. ಪ್ರಮದೆ ಒಮ್ಮೆ ಎಲ್ಲರನ್ನೂ ನೋಡಿದಳು; ಬಳಿಕ ಎವೆಯಿಕ್ಕದೆ ಪತಿಯನ್ನೇ ನೋಡುತ್ತ ಕುಳಿತಳು. ಕಮಲಾಕಾಂತನು ಕೈಯೆತ್ತಿ ಮೃದುಸ್ವರದಿಂದ-'ಮಹೋಪಾಧ್ಯಾಯರೇ! ಈಗ ಸ್ವಲ್ಪಕಾಲ ವಿಶ್ರಮಿಸಿಕೊಳ್ಳಬೇಕು. ಆಬಳಿಕ, ಪಾಠಪ್ರವಚನಗಳಿ

ಗಾರಂಭವಾಗಬಹುದು.' ಎಂದು ಸೂಚಿಸಿದನು. ದಯಾನಾಥನೂ ದುರ್ಗಾಪ್ರಸಾದನೂ ಅದನ್ನು ಅನುಮೋದಿಸಿದರು. ಮಧುಸೂದನನು ನಿಟ್ಟುಸಿರುಬಿಟ್ಟು ಎಲ್ಲರನ್ನೂ ಕುಳ್ಳಿರಹೇಳಿ, ತಾನೂ ಕುಳಿತನು. ಆದರೆ ಕುಮಾರಶೇಖರನು ಕುಳಿತುಕೊಳ್ಳಲಿಲ್ಲ. ಕಣ್ಣೀರುತುಂಬಿ ಪ್ರಮದೆಯ ಮುಂದೆ ಅಡ್ಡಬಿದ್ದೆದ್ದು ಕೈನೀಡಿ-“ಅತ್ತಿಗೆ, ಕ್ಷಮಿಸು, ನಿನ್ನಲ್ಲಿ ನಾನು ಮಹಾಪರಾಧಿಯಾಗಿರುವೆನು. ತಾಯಿ,—ಈ ಅಧಮಾಧಮಪ್ರಾಣಿಯ ಅಪಚಾರವನ್ನು ಕ್ಷಮಿಸಿ, ಶಾಂತಿಯನ್ನುಂಟುಮಾಡು. ಇನ್ನಿವನಿಗೆ ಅವಲಂಬನಯೋಗ್ಯವಾದುದು ಸನ್ಯಾಸಾಶ್ರಮಸ್ವೀಕಾರವೊಂದೇ! ಆದರೆ—ತಾಯಿ! .... ......”

ಹೇಳುತ್ತಿದ್ದಂತೆಯೇ ಕಣ್ಣೀರುತುಂಬಿ, ಗಂಟಲುಕಟ್ಟಿ, ಸೊಲ್ಲೆತ್ತದಂತಾಗಲು ಸುಮ್ಮನೆ ಕುಳಿತುಬಿಟ್ಟನು. ಎಲ್ಲರೂ ಸ್ತಬ್ಧಭಾವದಲ್ಲಿ ನೋಡುತ್ತಿದ್ದರು. ಪ್ರಮದೆ ಕುಮಾರಶೇಖರನ ಮಾತಿಗೆ ನಿಟ್ಟುಸಿರು, ಕಣ್ಣೀರು, ಶಿರಃಕಂಪನ ಇವುಗಳಿಂದಲೇ ಉತ್ತರವನ್ನು ಕೊಟ್ಟಳಲ್ಲದೆ, ಮಾತಾಡಲಿಲ್ಲ. ಸ್ವಲ್ಪಹೊತ್ತಿನಲ್ಲಿಯೇ ಅನ್ನಪೂರ್ಣಾ ಕೃಪಾದೇವರನ್ನು ಹಿಡಿದುಕೊಂಡು, ಲಲಿತಾದೇವಿ ಒಳಹೊಕ್ಕಳು. ಅವಳನ್ನು ಕಂಡುದರಿಂದಲೇ ಪ್ರಮದೆಯ ಸ್ಥಿರಭಾವನೆ ಅದೆಲ್ಲಿಯೋ ಹೋಯಿತು. ಎಳೆಮಕ್ಕಳಂತೆ ಧಿಗ್ಗನೆದ್ದು—'ಅಕ್ಕಾ ಅಕ್ಕಾ!' ಎಂದಷ್ಟು ಮಾತ್ರ ಹೇಳುತ್ತ, ನಡುನಡುಗುತ್ತ ಬಂದು ಲಲಿತಾದೇವಿಯ ಕಾಲ್ಗಳನ್ನು ಬಲವಾಗಿ ಹಿಡಿದು, ಬಿಕ್ಕಿಬಿಕ್ಕಿ ಅತ್ತುಬಿಟ್ಟಳು. ಲಲಿತಾದೇವಿಯೂ, ಪ್ರಮದೆಯ ಮುಂದೆ ಕುಳಿತು, ಅವಳ ತಲೆಯನ್ನು ಹಿಡಿದೆತ್ತಿ ನೋಡುತ್ತ ಕಣ್ಣೀರು ಸುರಿಸತೊಡಗಿದಳು. ಭವಾನಿ, ನಿಟ್ಟುಸಿರುಬಿಟ್ಟು ಎದ್ದುಬಂದು, ಲಲಿತಾ ಪ್ರಮದೆಯರ ಮುಂದೆ ಕುಳಿತು—“ಇದೇನಿದು? ಅತ್ತಿಗೆ, ಪ್ರಮದಾ, ಹೀಗೂ ಅಳುವರೇನು? ತಲೆಯೆತ್ತಿ ನೋಡಿರಿ, ಮುಂದೆ ಕುಳಿತಿರುವರಾರು! ಎಷ್ಟುಮಂದಿ? ಎಂಬುದನ್ನು..................”

ಎಂದಳು. ಲಲಿತಾದೇವಿ ಎಚ್ಚೆತ್ತು ಕಣ್ಣೊರಸಿಕೊಂಡು ಗಂಭೀರಮುದ್ರೆಯನ್ನು ತಳೆದು ಕುಳಿತಳು.

**ಪ್ರಮದೆ** — (ತಲೆಯೆತ್ತಿ ಕಂಪಿತಸ್ವರದಿಂದ) 'ಯಾರು ಕುಳಿತಿದ್ದ

ರೇಸು ? ಎಲ್ಲರೂ ಸಂಕಟಕಾಲದಲ್ಲಿ ಎಳೆಮಕ್ಕಳೇ ಆಗುವರಲ್ಲವೇ ? ಅಕ್ಕ ! ಹೇಳು, ನನ್ನ ಹೃದಯದ ನಿಜವಾದ ಪ್ರೇಮಕ್ಕೆ ಆಶ್ರಯಪಾತ್ರ ವಾದುದೆಂಬುದನ್ನೂ, ಆ ಪ್ರೇಮಸ್ವರೂಪವು ಹೇಗಿದ್ದು, ಯಾವ ಯಾವ ಕಾಲದಲ್ಲಿ ಹೇಗೆ ಪ್ರಕಾಶಕ್ಕೆ ಬರುವುದೆಂಬುದನ್ನೂ ತಿಳಿಸಿದ ನನ್ನ ಇಷ್ಟ ದೇವತೆಯನ್ನು ಕಂಡಾಗಲೂ ನಾನು ಕಲ್ಲಾಗಿರಬೇಕೆನ್ನುವಿಯಾ ? ಈ ದೇವಿಯಲ್ಲದೆ ನನಗೆ ಈ ಪೃಥ್ವಿಯಲ್ಲಿ ಇನ್ನಾರಾದರೂ ಹಿತಚಿಂತಕರಿರು ವರೇ ? ಹೇಳು, ನಿನ್ನ ಮಾತನ್ನು ಬಿಡು. ನೀನು ನಮಗೆಲ್ಲರಿಗೂ ಭಗವತಿ–ದುರ್ಗಾಮಾತೆಯೇ ಸರಿ.' ಎಂದಳು. ಪ್ರಮದೆಯ ಮಾತಿಗೆ ಅವಳ ತಂದೆ ಸಂತೋಷ–ಪಶ್ಚಾತ್ತಾಪಗಳೆರಡರಿಂದಲೂ ಕಂಬನಿಗರೆಯು ತ್ತಿದ್ದನು. ಆರಿಂದಲೂ ಉತ್ತರವು ಹೊರಡಲಿಲ್ಲ. ಇಷ್ಟರಲ್ಲಿ, ನ್ಯಾಯ ಮೂರ್ತಿಯ ಅಪ್ಪಣೆಯಂತೆ ಕಮಲಾಕಾಂತನು ಎದ್ದು ಹೊರಟು ಹೋದನು.

ಸ್ವಲ್ಪ ಹೊತ್ತಿನಲ್ಲಿ ಪ್ರದ್ಯುಮ್ನನನ್ನೆತ್ತಿಕೊಂಡು ಹೇಮಲತಾದೇವಿ, ಹೇಮಲತೆಯ ಮಗುವನ್ನೆತ್ತಿದ್ದ ಕಮಲಾದೇವಿ, ಗಿರಿಜಾಬಾಯಿ, ಮಧುಕರನ ಪತ್ನಿ–ಇವರೊಡನೆ ಮೆಲ್ಲಮೆಲ್ಲನೆ ನಡೆತಂದು ಕಿರುಮನೆ ಯೊಳಹೊಕ್ಕರು. ಭವಾನಿ ಎಲ್ಲರನ್ನೂ ಕೈಹಿಡಿದು ಕುಳ್ಳಿರಿಸಿ, ಪ್ರದ್ಯುಮ್ನ ನನ್ನೆತ್ತಿ ಪ್ರಮದೆಯ ತೊಡೆಯಲ್ಲಿ ಕುಳ್ಳಿರಿಸಿ–"ಪ್ರಮದಾ ! ನಿನ್ನ ಮಗ ನನ್ನು ನಿನಗೆ ಒಪ್ಪಿಸಿರುವೆನು. ಅಲ್ಲದೆ ನೋಡು, ಅವರಿಬ್ಬರೂ ನಿನ್ನ ಮಕ್ಕಳೇ ಆಗಿರುವರು. ..........." ಎಂದಳು.

ಎಂದು ಹೇಳುತ್ತಿದ್ದಾಗಲೇ ಹೊರಗೆ–"ಛೀ! ಛೀ!! ಎಷ್ಟುಬಾರಿ ಹೇಳಬೇಕು, ಮಧುಕರ ! ಹೆಂಗಸಿನಂತೆ ಹೀಗೂ ಅಳಬಹುದೋ ? ಸಾಕು, ಸಾಕು ! ಇಲ್ಲಿಯೇ ನಿಲ್ಲುವುದಕ್ಕೆ ನಿನ್ನನ್ನು ಇಷ್ಟು ಕಷ್ಟಪಟ್ಟು ಕರೆತಂದೆವೇ ? ಒಳಕ್ಕೆನಡೆ" ಎಂದು ವಿಕ್ರಮಕುಮಾರನು ಹೇಳುತ್ತಿದ್ದುದು ಕೇಳಿಸಿತು. ಎಲ್ಲರೂ ತಲೆಯೆತ್ತಿ ನೋಡಿದರು. ಮೋರೆಗೆ ಬಟ್ಟೆಯನ್ನು ಮುಸುಕಿಟ್ಟು ಅಳುತ್ತ ಮಧುಕರನು ಬಾಗಿಲಬಳಿಯಲ್ಲಿ ನಿಂತಿದ್ದನು. ಅವನನ್ನು ಹಿಡಿದು ಸಂತೈಸುತ್ತ ಧನ್ವಂತರಿ ನಿಂತಿದ್ದನು. ಮುಂದೆ ವಿಕ್ರ ಮನು ಅಡ್ಡಗಟ್ಟಿ ನಯಭಯಗಳಿಂದ ಎಚ್ಚರಿಸುತ್ತಿದ್ದನು.

ದಯಾನಾಥನು ಕೂಗಿದನು–"ಮಧುಕರ! ಅಲ್ಲಿ ನಿಂತು ಅತ್ತ ಮಾತ್ರದಿಂದ ನೀನು ಪಾಪನಿರ್ಮುಕ್ತನಾಗಲಾರೆ. ಈ ಲಜ್ಜಾಭಯಗಳು ಮೊದಲೇ ಇದ್ದರೆ ನಿನ್ನ ವಿದ್ಯಾಬುದ್ಧಿಗಳು ಎಷ್ಟೋ ಪ್ರಕಾಶವಾಗುತ್ತಿದ್ದವು. ಈಗಲಾದರೂ, ಪಶ್ಚಾತ್ತಾಪ ಹೊಂದಿ ಸಮಾಜದ ಶಾಸನಕ್ಕೆ ವಿಧೇಯನಾಗಿ, ಸಭೆಯಲ್ಲಿ ನಿನ್ನ ತಪ್ಪಿತವನ್ನು ಒಪ್ಪಿಕೊಂಡರೆ, ಇನ್ನು ಮುಂದೆ...."

ದಯಾನಾಥನು ಹೇಳುತ್ತಿದ್ದಂತೆಯೇ ವಿಕ್ರಮನೂ, ಧನ್ವಂತರಿಯೂ ಸೇರಿ, ಮಧುಕರನನ್ನು ಕರೆತಂದು, ದಯಾನಾಥ, ಮಧುಸೂದನ, ಪ್ರಮದೆಯ ತಂದೆ–ಇವರ ಮುಂದೆ ನಿಲ್ಲಿಸಿ, ಮುಖದ ಮೇಲಿದ್ದ ಬಟ್ಟೆಯನ್ನು ತೆಗೆದುಬಿಟ್ಟರು. ಮಧುಕರನು ಮಧುಸೂದನನ ಕಾಲಮೇಲೆ ಮುಖವಿಟ್ಟು ಮಕ್ಕಳಂತೆ ಬಿಕ್ಕಿಬಿಕ್ಕಿ ಅತ್ತುಬಿಟ್ಟನು.

ಮಧುಕರನ ಸ್ಥಿತಿಯನ್ನು ನೋಡಿ, ಅಲ್ಲಿದ್ದವರೆಲ್ಲರ ಕಣ್ಣಿಂದಲೂ ನೀರು ಸುರಿಯಿತು. ಪ್ರಮದೆಯೂ, ಅವನಂತೆಯೇ ಅತ್ತುಬಿಟ್ಟಳು. ಇನ್ನು ಅವನ ಪತ್ನಿಯ ಸ್ಥಿತಿಯನ್ನು ಕುರಿತು ಹೇಳುವುದೇನು? ಆದರೆ, ಅವಳು ಪಾಪ, ನೆಲವನ್ನು ನೋಡುತ್ತ, ನಿಟ್ಟುಸಿರು ಬಿಡುತ್ತಿದ್ದಳಲ್ಲದೆ, ಅಳುವುದಕ್ಕಾಗಲೀ, ಮಾತನಾಡುವುದಕ್ಕಾಗಲೀ ಆಗಲಿಲ್ಲ. ಮಧುಸೂದನನು ಮಧುಕರನನ್ನು ಎತ್ತಿ ಕುಳ್ಳಿರಿಸಿ–" ಅಪ್ಪ, ಸಮಾಧಾನಹೊಂದು. ಇತ್ತನೋಡು, ನನ್ನ ತಮ್ಮ ಕುಮಾರಶೇಖರನನ್ನು. ಇವನು ನನಗೆ ಹೇಗೋ, ನೀನೂ ಹಾಗೆಯೇ ಅಲ್ಲದೆ ನಿನ್ನನ್ನು ಹೊರಗಿನವನೆಂದು ನಾನೆಣಿಸುವುದಿಲ್ಲ. ಹಿಂದೆ ನಡೆದುಹೋದುದನ್ನು ಮರೆತುಬಿಡು. ಹಿರಿಯರು ನಿಮ್ಮ ವಿಷಯದಲ್ಲಿ ಮೊದಲು ಮಾಡಿದ್ದ ಸಂಕಲ್ಪವು ನನಗೆ ತಿಳಿದಿದ್ದರೆ, ಇಷ್ಟು ದುಃಖಕ್ಕಾಗಲೀ ಅನರ್ಥಕ್ಕಾಗಲೀ ಕಾರಣವಿರುತ್ತಿರಲಿಲ್ಲ. ಈಗ ನನಗೂ ಪರಿತಾಪವುಂಟಾಗಿರುವುದು. ಆದರೆ, ಕೇಳು, ಇದು ನನ್ನ ಸ್ವಬುದ್ಧಿಯಿಂದಾದುದಲ್ಲ. ನಮ್ಮ ನಿಮ್ಮ ಹಿರಿಯರ ಮೂಲಕವಾಗಿ ಅದೂ ತ್ವರೆಯಿಂದ ವಿಚಾರವಿಲ್ಲದೆ ನಡೆದು ಹೋಗಿರುವುದು. ಋಣಾನುಬಂಧವು ಹೀಗಿದ್ದಿತು. ಇನ್ನು ವ್ಯಥೆಪಟ್ಟು ಫಲವಿಲ್ಲ, ಶಾಂತನಾಗು. ನನ್ನಲ್ಲಿ ನೀನು ಲಜ್ಜಿತನಾಗಬೇಕಾಗಿಲ್ಲ. ನಿನ್ನನ್ನು ನನ್ನ ಒಡಹುಟ್ಟಿದವನೆಂದೇ ತಿಳಿದು ಮನ್ನಿಸಿದ್ದೇನೆ."

ಮಧುಕರನು ನಿಟ್ಟುಸಿರುಬಿಟ್ಟು ಕೈಕಟ್ಟಿ ವೀರಮುಂಡಿಯೂರಿ ವಿಜಾತೀಯ ಸ್ವರದಿಂದ ಹೇಳತೊಡಗಿದನು– "ಮಹಾತ್ಮಾ! ನಾನು ಪಾಪಿ, ಪರಮಪಾಪಿ; ಪರಸ್ವಾಪಹಾರಕನೂ, ಸಾಧುಜನಹಿಂಸೆಗೂ ಎಳಸಿದ ಪರಮಪಾತಕಿ. ಈ ನನ್ನ ಪಾತಕಕ್ಕೆ ಪ್ರಾಯಶ್ಚಿತ್ತವು ಮತ್ತಾವುದೂ ಇಲ್ಲ–ಆತ್ಮಯಜ್ಞವೊಂದೇ! ಅದಕ್ಕಾಗಿಯೇ ನಾನಿಂದು ಯಾತ್ರಾರ್ಥಿಯಾಗಿ, ತಮ್ಮೆಲ್ಲರಮುಂದೆ ಕ್ಷಮೆಯನ್ನು ಬೇಡಿ, ಅಪ್ಪಣೆಯನ್ನು ತೆಗೆದುಕೊಳ್ಳಲು ಬಂದಿದ್ದೇನೆ. ತಮ್ಮ ಕ್ಷಮಾಶಿಕ್ಷೆಯೊಂದೇ ನನ್ನೀ ಸಮಸ್ತ ಪಾತಕಕ್ಕೂ ಪ್ರಾಯಶ್ಚಿತ್ತರೂಪವಾಗಿ ಪಶ್ಚಾತ್ತಾಪವೆಂಬ ಪ್ರಳಯಾಗ್ನಿಯಂತಾಗಿ ಸುಡುತ್ತದೆ. ಇನ್ನು ನನಗೆ ಆಶೆಯಾಗಲೀ, ಅಭಿಮಾನ–ಅಹಂಕಾರಗಳಾಗಲೀ ಒಂದೂ ಉಳಿದಿಲ್ಲ.

ನಾನು ವಿಚಾರಶೂನ್ಯನೂ ಪ್ರೇಮಪರವಶನೂ ಅಹುದಾದರೂ ಇಂದಿನವರೆಗೆ ಆವ ಸ್ತ್ರೀಯನ್ನೂ ಕಾಮವಾಸನೆಯುಳ್ಳವನಾಗಿ ನೋಡಿಲ್ಲ. ಮೊದಲು ನನ್ನವಳೆಂದು ಗೊತ್ತಾಗಿದ್ದು ಈಗ ನಿಮ್ಮ ಪತ್ನಿಯಾಗಿರುವ ಪ್ರಮದೆಯಲ್ಲಿ ನನ್ನ ಪ್ರೇಮವು ಅವ್ಯಾಹತವಾಗಿರುವುದಾದರೂ ಅವಳ ಶೀಲಚಾರಿತ್ರ್ಯಕ್ಕೆ ಕಲಂಕವುಂಟಾಗುವಂತಾಗಿಲ್ಲ. ಅವಳು ಶುದ್ಧಳಾಗಿಯೇ ಇರುವಳೆಂದು ಪ್ರಮಾಣಮಾಡಿ ಹೇಳುವೆನು. ಇನ್ನವಳನ್ನು ಮನೆಯಿಂದ ಕದ್ದೊಯ್ದು ವಿಚಾರದಲ್ಲಿ ಶಂಕಿಸುವಿರಾದರೆ, ಅದನ್ನೂ ಹೇಳುವೆನು ಕೇಳಿರಿ. ಅವಳು ಮಲಗಿದ್ದ ವೇಳೆಯಲ್ಲಿ, ನೆರೆಮನೆಯ ಹೆಂಗಸನ್ನು ಮೊದಲೇ ಧನಲೋಭದಿಂದ ವಂಚಿಸಿದ್ದೆನಾದುದರಿಂದ ಅವಳ ಮೂಲಕ ಪ್ರಮದೆಗೆ ಜ್ಞಾನತಪ್ಪುವಂತೆಮಾಡಿಸಿ, ಅವಳ ಮೇಲೆ ಕಂಬಳಿಯನ್ನು ಹೊದ್ದಿಸಿ, ಎತ್ತಿಕೊಂಡು ಹಿತ್ತಲಕಡೆಯ ಬಾಗಿಲಿಂದ ಹೊರಟುಬಂದೆನು. ಮತ್ತೆ ಅವಳನ್ನು ನಿರ್ಬಂಧದಲ್ಲಿಯೂ ಇರಿಸಿದೆನು. ಅಲ್ಲಿಂದ ಮುಂದೆ ಇದುವರೆಗೆ ನನಗೆ ಅವಳ ಇಷ್ಟಕ್ಕೆ ವಿರೋಧವಾಗಿ ನಡೆಯುವ ಸಾಹಸವುಂಟಾಗಿಲ್ಲ. ಅಷ್ಟಲ್ಲದೆ ಮತ್ತಾವ ಅತ್ಯಾಚಾರಕ್ಕಾದರೂ ಅವಳು ಗುರಿಯಾಗಿಲ್ಲ. ಅವಳು ನನ್ನಲ್ಲಿ ಅಕೃತ್ರಿಮವಾದ ಶುದ್ಧಪ್ರೇಮಭಾವದಿಂದ ನಡೆದಿರುವಳಲ್ಲದೆ ವಿಕಾರಕ್ಕೊಳಗಾಗಿ, ಧರ್ಮಕ್ಕೆ ಹಾನಿಯನ್ನುಂಟುಮಾಡಿಲ್ಲ. ನಾನು ಆ ನನ್ನ ಹೃದಯಾಭಿಮಾನಿದೇವತೆಯಾಗಿರುವ ಪ್ರಮದಾದೇವಿಗೆ ಇದುವರೆಗೆ ಉಂಟುಮಾಡಿರುವ

ತಾಪಕ್ಕಾಗಿ, ಈ ನನ್ನ ದೇಹವನ್ನು ಸಜೀವವಾಗಿ ಅಗ್ನಿಕುಂಡಕ್ಕೆ ಆಹುತಿ ಕೊಡಬೇಕೆಂದಿರುವೆನು. (ಎಂದು ಹೇಳುತ್ತಿದ್ದಂತೆಯೇ ಒಮ್ಮೆ ತನ್ನ ಪತ್ನಿಯ ಕಡೆ ನೋಡಿದನು. ಅವಳ ಆಗಿನ ಸ್ಥಿತಿಯನ್ನು ನೋಡಿ, ದುಃಖವು ಸಹಿಸಲಾರದುದಾಗಲು ಮೈಮರೆದು ಕಲ್ಲಾಗಿ ಕಣ್ಣುಮುಚ್ಚಿಕೊಂಡು ಕುಳಿತಿದ್ದ ಪತ್ನಿಯ ಕಡೆಗೆ ಕೈನೀಡಿ, ವಿಕೃತಸ್ವರದಿಂದ–' ನ್ಯಾಯಮೂರ್ತಿಗಳೇ! ಪ್ರಸನ್ನರಾಗಿ ಕೇಳಿರಿ. ನಾನು–ಈ ಅಧಮನಾದ ನಾನು, ನನ್ನ ಅಕರ್ಮಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಹೊರಡುವೆನು. ಆದರೆ ಅತ್ತ ನೋಡಿರಿ. ಈ ಅಧಮನ ಕೈಹಿಡಿದುದರಿಂದ ಆ ಪ್ರಾಣಿಗೆ ಉಂಟಾಗಿರುವ ... .. ಹೇಳಲಾರೆನು. ಎದೆಯೊಡೆಯುತ್ತಿರುವದು. ಪೂಜ್ಯರೆ! ಈ ದೇವಿ, ನೆಳಲಂತೆಯೇ ನನ್ನನ್ನು ಅನುವರ್ತಿಸಿಕೊಂಡು ನನ್ನ ಮನಸ್ಸಂತೋಷಕ್ಕಾಗಿ .. ... '

ಮುಂದೆ ಹೇಳಲಾರದೆ ಮೂರ್ಛಿತನಾಗಿ ಕೆಳಗೆ ಬಿದ್ದುಬಿಟ್ಟನು. ಅವನ ಪತ್ನಿಯೂ ಪತಿಬಿದ್ದಾಗಲೇ ನೆಲಕ್ಕುರುಳಿದಳು. ಎಲ್ಲರೂ ಸಂಭ್ರಾಂತರಾಗಿ ' ಇನ್ನು ಈ ಹೃದಯವಿದ್ರಾವಕವಾದ ದೃಶ್ಯವನ್ನು ನಾಕು ಮಾಡಿ ' ರೆಂದು ಹೇಳಿದರು. ಅದರಂತೆಯೇ ಧನ್ವಂತರಿ, ವಿಕ್ರಮಸೇನರು ಮಧುಕರನನ್ನೂ, ಭವಾನೀ ಹೇಮಲತೆಯರು ಅವನ ಪತ್ನಿಯನ್ನೂ ಬೇರೆ ಬೇರೆ ಕಡೆಗೆ ಎತ್ತಿಕೊಂಡು ಹೋದರು. ಬಳಿಕ ಎಲ್ಲರೂ ಅಲ್ಲಿಂದ ಹೊರಟುಹೋದರು.

---

ಶ್ರೀ:

# ಸಪ್ತಮ ಪರಿಚ್ಛೇದ.

" ಗಚ್ಛಗಚ್ಛಸಿಚೇತ್ಕಾಂತಶತ್ರೈವಸ್ಯಾಜ್ಜನಿರ್ಮಮ ।
(ಚಂದ್ರಾಲೋಕ)

( ಪತಿಪತ್ನೀಪ್ರೇಮಪರಾಕಾಷ್ಠೆ )

" ರಮಾ ! ಮನೋರಮಾ !! ಇನ್ನೂ ಅಳುತ್ತಿರುವೆಯೇಕೆ ? ಇನ್ನೂ ಈ ಕೃತಘ್ನನ–ಈ ಘಾತಕನ.......... "

" ಹೇಳಿದಷ್ಟೂ, ಈ ಬಯ್ಗಳನ್ನು ಕೇಳಿದಷ್ಟೂ, ನನ್ನ ಈ ."

" ಬೇಡ–ರಮಾ ! ಬಿಟ್ಟುಬಿಡು. ಒಂದು ದಿನ, ಒಂದೇ ಒಂದು ರಾತ್ರಿ, ಒಂದು ಪ್ರಹರಮಾತ್ರವಾದರೂ ನನ್ನ ಸರಸ–ಸುಖಸಲ್ಲಾಪಗಳನ್ನು ಕೂಡ ನೀನು ಕಂಡವಳಲ್ಲ. ನನ್ನ ಮನೆಗೆ ಬಂದುದು ಮೊದಲು ಇದು ವರೆಗೆ, ನೀನು ನನ್ನಿಂದ ಹೊಂದುತ್ತಿದ್ದ ಕಷ್ಟಸಂಕಟಗಳೆಲ್ಲವನ್ನೂ ನುಂಗಿ, ನನ್ನನ್ನು ಸೇವಿಸುತ್ತ ಬಂದೆ. ಫಲವೇನಾಯಿತು ? ರಮಾ ! ನಿನ್ನ ಸೇವೆಗೆ ನನ್ನಿಂದ ನೀನಾವ ಪ್ರತಿಫಲವನ್ನು ಹೊಂದಿದೆ ? ನನ್ನಿಂದ ನಿನಗೆ ಸ್ವಪ್ನದಲ್ಲಿ ಸುಖವುಂಟಾಗಿರುವುದೆಂದು ಕೂಡ ಹೇಳುವಂತಿಲ್ಲ. ಹೀಗಿದ್ದೂ ನನ್ನ ವಿಷಯದಲ್ಲಿ ನಿನಗಿಷ್ಟು . . .. "

"ತಾವು ಹೇಗಿದ್ದರೂ ನನಗೆ ಸ್ವಾಮಿಯೇ ಅಲ್ಲವೇ ? ಸ್ವಾಮಿ, ಸೇವಕರಲ್ಲಿ ತಪ್ಪಿದ್ದರೆ ಶಿಕ್ಷಿಸುವರೆಂದಿಷ್ಟು ಮಾತ್ರ ನನಗೆ ಗೊತ್ತಿದೆ. ನನ್ನ ಲ್ಲಿಯೋ ನನ್ನ ಅದೃಷ್ಟದಲ್ಲಿಯೋ ತಪ್ಪಿದ್ದುದರಿಂದ ನನಗೆ ತಮ್ಮ ಪ್ರಸನ್ನ ತೆಯ ಅಭಾವವಾಗಿದ್ದಿತು. ಹಿರಿಯರ ಆಶೀರ್ವಾದದಿಂದ ಇಂದು, ಇಷ್ಟು ಮಟ್ಟಿಗಾದರೂ..... ...."

" ಕಾತರನಾಗಿ ಬೇಡುತ್ತಿದ್ದೇನಲ್ಲವೆ ? ಮನೋರಮೆ, ಸಮಾಧಾನ ವನ್ನು ವಹಿಸು. ಪಾಪಿಯಲ್ಲಿ ಮರುಕವನ್ನು ಮಾಡಬೇಡ. ನಿಷ್ಠುರೋಕ್ತಿ ಯನ್ನಾಡಿಯಾದರೂ ನನ್ನ ಮನಸ್ಸನ್ನು ಸ್ಥಿರತೆಗೆ ತಂದುನಿಲ್ಲಿಸು. ಕೈನೀಡಿ ಕೇಳಿಕೊಳ್ಳುವೆನು. ರಮಾ . . ."

ಈ ಬಗೆಯಾದ ಉತ್ತರಪ್ರತ್ಯುತ್ತರಗಳು ಮಧುಕರನಿಗೂ, ಆತನ

ಪತ್ನಿ ಮನೋರಮೆಗೂ ನಡೆಯುತ್ತಿದ್ದುವು. ಇಬ್ಬರೂ ದುರ್ಗಾಪ್ರಸಾದ ಠಾಕೂರನ ಮನೆಯ ಒಂದು ಕಿರುಮನೆಯೊಳಗೆ ಕುಳಿತಿದ್ದರು. ಮನೋರಮೆ ಗೋಡೆಗೆ ಒರಗಿ ಸೀರೆಯ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಅಳುತ್ತಿದ್ದಳು. ಮಧುಕರನು ನೀರವುಂಡಿಯೂರಿ ಕುಳಿತು, ಎಡಗಯ್ಯನ್ನು ಪತ್ನಿಯ ಭುಜದ ಮೇಲಿರಿಸಿ, ಬಲಗೈಯಿಂದ ಅವಳ ಗಲ್ಲವನ್ನು ಹಿಡಿದೆತ್ತಿ, ದೈನ್ಯದಿಂದ ಮತ್ತೆ ಬೇಡಿದನು–'ಮನೋರಮೆ, ನಾನು ನಿನ್ನನ್ನು ಏನೆಂದು ಸಂಬೋಧಿಸಲಿ? ಮರೆತೊಮ್ಮೆಯಾದರೂ ನಾನು ನಿನ್ನಲ್ಲಿ ವಿನೋದವಾಡಿರುವ ದಿನವಿಲ್ಲ, ನಿನ್ನ ಸೇವಾಪರತೆಯನ್ನು ನೋಡಿ ಒಂದುಬಾರಿಯಾದರೂ ಸಂತೋಷವನ್ನು ಸೂಚಿಸಿಲ್ಲ. ಹೆಚ್ಚೇಕೆ, ದೇವಿ! ನೀನೇ ನಿನ್ನ ದುರದೃಷ್ಟವೇ, ನನ್ನ ಮನೋಗತದ ಅಪ್ರಾಪ್ತಿಗೆ ಹೇತುವೆಂಬ ಮೂರ್ಖಭಾವನೆಯಿಂದ ನಿನ್ನನ್ನು ತೊತ್ತಿನಂತೆ, ವಿಷದಂತೆ, ನೀಚವಾಗಿ ನೋಡುತ್ತ ಬಂದೆನು . ..'

**ಮನೋ:—** (ಕಂಪಿತಸ್ವರದಿಂದ) "ಹೀಗೇಕೆ ಹೇಳುವುದು? ನನ್ನನ್ನು ತಾವೆಂದೂ ಕಷ್ಟಪಡಿಸಿದುದಿಲ್ಲ ತಾವು ನನ್ನಲ್ಲಿ ಉದಾಸೀನರಾಗಿದ್ದ ಮಾತ್ರದಿಂದ ನಾನೇನೂ ಅಸುಖಿಯಾಗಿರಲಿಲ್ಲ. ನಾನು ಕೋರುತ್ತಿದ್ದ ಸುಖವು ನನಗೆ ಯಥೇಷ್ಟವಾಗಿಯೇ ದೊರೆದಿರುತ್ತದೆ. ಆದರೆ ಭಗವಂತನು ಎಂದಾದರೂ ನನ್ನ ಮೊರೆಯನ್ನು ಕೇಳಿ, ತಮ್ಮನ್ನು ಸಂಭಾವಿತಾಗ್ರಣಿಗಳಲ್ಲಿ ಒಬ್ಬರನ್ನಾಗಿ ಮಾಡಲೆಂದು ತ್ರಿಕಾಲದಲ್ಲಿಯೂ ಪ್ರಾರ್ಥಿಸುತ್ತಿದ್ದೆನು, ಕುಲರಂಜನರಾದ ಸತ್ಪುತ್ರರೆನ್ನಿಸುವಂತೆ ತಮ್ಮನ್ನು ಅನುಗ್ರಹಿಸುವನೆಂದೂ ನಂಬಿದ್ದೆನು. ಆ ನನ್ನ ಭರವಸೆ ಹೀಗೆ ತಿರುಗಬೇಕಾದರೆ ನನ್ನ ದುರದೃಷ್ಟವಲ್ಲದೆ ಮತ್ತಾರಲ್ಲಿ ಆರೋಪಿಸಲಿ? ಆಗ್ರಹಿಸಬೇಡಿರಿ, ನಾನು ತಮ್ಮಲ್ಲಿ ನಿಷ್ಠುರೋಕ್ತಿಯನ್ನಾಡಲು ಯತ್ನಿಸಿದೆನೆಂದು ಸ್ವಪ್ನದಲ್ಲಿಯೂ ಭಾವಿಸಲಾಗದು. ತಾವೇನೋ ನನ್ನನ್ನು ಬಿಟ್ಟು, ದೇಶಾಂತರಗಮನದಿಂದ ದೇಹಾಂತಶಿಕ್ಷೆಯನ್ನು ಮಾಡಿಕೊಳ್ಳಲು ನಿರ್ಧರಿಸಿರುವಿರಿ. ನಾನು ಮಾಡಬೇಕೆಂದರೆ ನನಗದು ಅಸಾಧ್ಯವಾಗಿರುವುದಿಲ್ಲ. ಈ ಕ್ಷಣವೇ-ಇಲ್ಲಿಯೇ-ಬೇಕಾಗಿ ಬಂದರೆ, ಮಾಡಿಕೊಳ್ಳಲು ಅಡ್ಡಿಯಿರುವುದಿಲ್ಲ; ಸಾಧನವು ನನ್ನಲ್ಲಿಯೇ ಇರುವುದು. ಆದರೆ ನಾನು ಸತ್ಕುಲಪ್ರಸೂತರಾದ

ಆ ಗರ್ಭಶ್ರೀಮಂತರ ಹೊಟ್ಟೆಯಲ್ಲಿ ಹುಟ್ಟಿ, ಅವರ ನೈತಿಕಶಿಕ್ಷಣದಿಂದ ಬೆಳೆದಿರುವುದರಿಂದ ಪ್ರಾಪಂಚಿಕ ಸ್ಥಿತಿಗತಿಗಳು ಅಷ್ಟಿಷ್ಟಾಗಿ ತಿಳಿಯಬರುತ್ತಿರುವುವು. ಆತ್ಮಹತ್ಯೆ ಪಾಪಕೃತ್ಯವೆಂದು ಕೇಳಿ ತಿಳಿದಿರುವುದರಿಂದ ನಾನಿಂದಿನವರೆಗೆ ತಡೆದಿದ್ದೆನು. ಅಲ್ಲದೆ, ಜೀವಿಸಿದ್ದರೆ ಇಂದಿಲ್ಲ,-ಎಂದಾದರೂ ಸ್ವಾಮಿಯ ಚರಣಾನುಗ್ರಹದಿಂದ ಇಹಜನ್ಮಧಾರಣೆಯ ಕೃತಾರ್ಥತೆಯನ್ನು ಕಾಣುವೆನೆಂಬ ಭವಿತವ್ಯತೆಯನ್ನೂ ಚಿಂತಿಸುತ್ತಿದ್ದೆನು. ನನಗೆ ಚರಣಾನುಗ್ರಹವು ಹಾಗಿರಲಿ, ಸಂದರ್ಶನಭಾಗ್ಯವೂ ದೂರವಾಗುವುದಾದರೆ . . " ಮುಂದೆ ಕಂಠಸ್ವರವು ಕಟ್ಟಿ ಮಾತನಾಡಲಾರದೆ ನೆಲವನ್ನೇ ನೋಡುತ್ತ ನಿಟ್ಟುಸಿರುಬಿಡುತ್ತ ಕುಳಿತಳು.

**ಮಧು:—** 'ಪ್ರಾಣೇಶ್ವರಿ! ನಾನು ಮನಃಪೂರ್ವಕವಾಗಿ ನಿನ್ನನ್ನು ಬಿಟ್ಟು ಹೋಗುವವನಲ್ಲ. ಅನಿರ್ವಾಹಪಕ್ಷದಿಂದ ಹೋಗಬೇಕಾಗಿ ಬಂದಿದೆ. ಏನು ಮಾಡಲಿ?' (ಎಂದು ಪತ್ನಿಯ ಗಲ್ಲವನ್ನು ಹಿಡಿದೆತ್ತಿ ಕೇಳಿಕೊಂಡನು.)

**ಮನೋ:—** (ಉಗುಳುನುಂಗುತ್ತ ಮೆಲ್ಲನೆ) ಅಂತಹ ಅನಿರ್ವಾಹವೇನು ಬಂದಿರುವುದು? ಎಂದಳು.

**ಮಧು:—** ನೀನೇ ವಿಚಾರಮಾಡಿ ನೋಡು? ನಾನು ಇದುವರೆಗೆ ಅಧಿಕಾರದಲ್ಲಿ ಮೆರೆದು, ಈಗ ಅಪರಾಧಿಯೆಂದೂ ಹೇಯಕಾರ್ಯದಲ್ಲಿ ಪ್ರವರ್ತಕನಾದ ಅತ್ಯಾಚಾರಿಯೆಂದೂ ಸ್ಪಷ್ಟಪಟ್ಟು, ಅಧಿಕಾರಗೌರವವನ್ನು ಹೋಗಲಾಡಿಸಿಕೊಂಡುದು ಹಾಗಿರಲಿ, ಸಮಾಜದ ದಯಾಭಿಕ್ಷೆಯಿಂದ ಈ ಭಂಡಜೀವವನ್ನುಳಿಹಿಕೊಂಡು, ಜೀವನ್ಮೃತನಂತೆ ನಿಷ್ಪ್ರಯೋಜಕನಾಗಿರುವ ನನ್ನನ್ನು ಸೇರಿ ನೀನಾವ ಸುಖಪಡುವೆ? ಮನೋರಮೆ, ಮುಂದೆ ನನ್ನ ಕರ್ಮಫಲದಿಂದ ನೀನು ಪಡುವ ಕಷ್ಟವನ್ನು ನೋಡಿ, ಸಹಿಸುವುದಾದರೂ ನನ್ನಿಂದಾಗದು! ಇದಕ್ಕೆಂದೇ ನನ್ನ ದೇಶಾಂತರ .. ..."

**ಮನೋ —** (ಸ್ಥಿರಭಾವದಿಂದ) ಅಪರಾಧ ಮಾಡದೆಯೇ ಇರುವುದು ಉತ್ತಮಪುರುಷರ ಲಕ್ಷಣವು! ಮಾಡಿದುದನ್ನು ಒಪ್ಪಿಕೊಳ್ಳುವುದು ಮಧ್ಯಮರ ಲಕ್ಷಣವು. ಮಾಡಿದುದು ತಪ್ಪಿತವೆಂದು ತಿಳಿದೂ, ಮತ್ತೆಮತ್ತೆ ಮಾಡುವುದಾಗಲಿ, ಮಾಡಿದುದಕ್ಕೆ ಪಶ್ಚಾತ್ತಾಪಗೊಳ್ಳದೆ ಅದನ್ನೇ ಉತ್ತಮ

ಗುಣವೆಂದು ವಾದಿಸುವುದಾಗಲೀ ಆತ್ಮಘಾತಕರ ವರ್ತನವು. ಮಾಡಿದ ತಪ್ಪಿತವನ್ನು ಮನಸ್ಸಾಕ್ಷಿಯಾಗಿ ಮುಂದಿರಿಸಿ, ಅಪಚಾರ ಕ್ಷಮಾಪಣೆಯನ್ನು ಕೇಳಿದರೆ, ಪಾಪವಿಮೋಚನವೂ ತನ್ಮೂಲಕ ಮನಶ್ಶಾಂತಿಯೂ ಉಂಟಾಗುವುದು.

ನಾಥ ! ತಾವು ಗುರು, ನಾನು ಶಿಷ್ಯಳು. ಹೀಗಿದ್ದು ತಮಗೆ ನಾನು ಇದನ್ನು ಬೋಧಿಸುತ್ತಿರುವುದು ಅನುಚಿತವು. ಆದರೂ ಸತೀಕರ್ತವ್ಯ ಕ್ಕೊಳಪಟ್ಟಿರುವ ನಾನು ವಿಚಾರಗ್ರಸ್ತರಾಗಿರುವ ತಮ್ಮನ್ನು ಎಚ್ಚರಿಸುವ ದಕ್ಕೆಂದಿಷ್ಟು ಹೇಳುತ್ತಿರುವೆನಲ್ಲದೆ ಅಹಂಕಾರದಿಂದ ಹೇಳಿದುದಲ್ಲ. ಅಧಿಕಾರವು ಹೋದರೆ ನಷ್ಟವಾದುದೇನು ? ತಮ್ಮ ಬುದ್ಧಿಬಲವನ್ನು ಯಾರೂ ನಷ್ಟಪಡಿಸಲಿಲ್ಲ ಬುದ್ಧಿಸಂಪನ್ನರಾದ ಉದ್ಯೋಗನಿರತರಿಗೆ ಲಕ್ಷ್ಮೀಪ್ರಸನ್ನತೆ ಸ್ವತಸ್ಸಿದ್ಧವೆಂಬುದು ಚಿತ್ತಕ್ಕೆ ತಿಳಿದಿದೆಯಷ್ಟೆ ? ಹಾಗಿದ್ದರೆ ಸ್ವತಂತ್ರ ಜೀವಿಗಳಾದ ಜನರಿಗೆ ಹಿತಕರವಾದ ಆವುದಾದರೂ ಒಂದು ಉತ್ತಮತರದ ವೃತ್ತಿಯನ್ನು ಅವಲಂಬಿಸುವುದಕ್ಕೆ ಅಭ್ಯಂತರವೇ ? ಹಾಗೆ ಮಾಡುವುದರಿಂದ ಹಿರಿಯರ, ಗುರುಗಳ ಮತ್ತು ನಮ್ಮ ಹಿತಚಿಂತಕರ ಮನಸ್ಸಿಗೂ ಸಂತೋಷವನ್ನುಂಟುಮಾಡಿದಂತಾಗದೇ ? ಸನಾತನ ಧರ್ಮಪರಿಪಾಲನವೇ ಮುಖ್ಯಗುರಿಯಾಗಿರುವ ಸಮಾಜದ ದಯಾಭಿಕ್ಷೆಯೆಂದು ಅಲ್ಲಗಳೆವುದಾದರೆ ನಮ್ಮ ಅಪಚಾರಕ್ಕೆ ಪ್ರಾಯಶ್ಚಿತ್ತವೂ, ಅಂತಸ್ತಾಪಕ್ಕೆ ಶಾಂತಿಯೂ ಎಲ್ಲಿಯದು ?

**ಮಧು —** (ಪತ್ನಿಯನ್ನಪ್ಪಿ ಪ್ರೇಮವ್ಯಂಜಕಸ್ವರದಿಂದ–) ‘ ಪ್ರಾಣೇಶ್ವರಿ ! ಈವರೆಗೆ ಮೂರ್ಖಭಾವನೆಯಿಂದ ನಾನು ಮಾಡಿದ್ದ ಆಲೋಚನೆಗಳೆಲ್ಲವನ್ನೂ ಒಂದು ನಿಮಿಷಾರ್ಧದಲ್ಲಿ ತಲೆಕೆಳಗುಮಾಡಿ, ನನ್ನ ಅಂಧಹೃದಯದಲ್ಲಿ ವಿಚಾರಪ್ರಕಾಶದ ನವಶಕ್ತಿಯನ್ನುಂಟುಮಾಡಿದೆ. ಈ ದೇಹವೂ ಈ ಆತ್ಮನೂ ಸರ್ವವೂ ನಿನ್ನ ಅಧೀನವು, ಇನ್ನುಮುಂದೆ ಈ ನಿನ್ನ ಸಹಚರ್ಯೆಯನ್ನುಳಿದು ನಾನೆಲ್ಲಿಗೂ ಹೋಗಬೇಕೆನ್ನುವದಿಲ್ಲ. ಇದು ಸತ್ಯವು, ಆದರೆ ನಿನ್ನ ಮಾತಿನಂತೆ ಸಮಾಜಕ್ಕೂ, ಗುರುಹಿರಿಯರಿಗೂ ವಿಧೇಯನಾಗಿದ್ದೂ ನನ್ನ ಅಪರಾಧಕ್ಕೆ ಪ್ರಾಯಶ್ಚಿತ್ತವಾಗಿ ಅವರ ದಾಸ್ಯವೃತ್ತಿಯನ್ನೂ ಅವಲಂಬಿಸುವೆನು. ಆದರೆ, ಇನ್ನುಮುಂದೆ ನಾನು ಪ್ರಾಯಶ್ಚಿತ್ತವಾದ ಬಳಿಕ

ನನ್ನ ಮಾತುಲನ ಮನೆಯಲ್ಲಾಗಲೀ, ಮಧುಸೂದನಶರ್ಮರ ಮನೆಯಲ್ಲಾಗಲೀ, ಅರೆಗಳಿಗೆಯೂ ನಿಲ್ಲಲಾರೆನು. ಹೆಚ್ಚೇಕೆ, ಈ ನಗರಿಯಲ್ಲಿಯೇ ಇನ್ನು ಮುಖವನ್ನು ತೋರಿಸಲಾರೆನು. ಹೀಗಿರುವ ನನಗಿನ್ನು ಸ್ವಾತಂತ್ರ್ಯವೃತ್ತಿಯಾವುದು ?

**ಮನೋ**·— ಮಧುಕರನ ಕೊರಳನ್ನು ತನ್ನ ನಳಿದೋಳ್ಗಳಿಂದ ಸುತ್ತಿ–' ಅಷ್ಟೇನೂ ಆಲೋಚಿಸಬೇಕಾಗಿಲ್ಲ. ತಮ್ಮ ಇಷ್ಟಕ್ಕೆ ವಿರೋಧವಾಗಿ, ಮೇಲೆ ಹೇಳಿದವರ ಬಳಿಯಲ್ಲಿರಬೇಕೆಂದು ನಾನೂ ಹೇಳುವಳಲ್ಲ. ತಮ್ಮ ಸ್ವತಂತ್ರಜೀವನಕ್ಕೆ ಭಗವಂತನು ಮಾರ್ಗವನ್ನು ಕಲ್ಪಿಸದೆ ಇರುವನಲ್ಲ. ತಮ್ಮ ಅರ್ಧದೇಹವೆನ್ನಿಸಿದುದರ ಸತ್ವಕ್ಕೊಳಪಟ್ಟ ಒಡವೆಗಳೂ ತಮ್ಮದಲ್ಲವೇ ? ಅದರಿಂದ ಆರಂಭದಲ್ಲಿ ಬೇಕಾಗುವ ಸಾಧನಗಳನ್ನು ಕಲ್ಪಿಸಿಕೊಂಡರೆ ಸಾಗುವದಿಲ್ಲವೆ ? ಸಹಾಯಕ್ಕೆ ಬೇಕೆಂದರೆ, ನಮ್ಮ ಇಷ್ಟದೇವತಾಸ್ವರೂಪರಾದ ಅನಾಥಬಂಧು– ವಿಕ್ರಮಸೇನಠಾಕೂರರೂ, ಭಗವತಿಭವಾನೀದೇವಿಯೂ ಇಲ್ಲವೇ ?

**ಮಧು:**— (ಗದ್ಗದಸ್ವರದಿಂದ–) "ದೇವಿ ! ನಿನ್ನ ಸ್ವರ್ಗೀಯ ಪ್ರೇಮಕ್ಕೆ ನಾನು ಆವ ಬೆಲೆಯನ್ನು ಕಟ್ಟಲಿ ? ಹತಭಾಗ್ಯನಾದ ನಾನು ನಿನ್ನ ತಂದೆ ನಿನಗೆ ಕೊಟ್ಟಿರುವ ಒಡವೆಗಳಿಂದ ಹೊಟ್ಟೆಹೊರೆಯಬೇಕಾಗಿ ಬಂದಿತೇ ? . . ."

ಅಷ್ಟರಲ್ಲಿ ಬಾಗಿಲು ತೆರೆಯಲ್ಪಟ್ಟು, ಭವಾನೀವಿಕ್ರಮರು ಪ್ರವೇಶಿಸಿ, ಸ್ನೇಹವ್ಯಂಜಕಸ್ವರದಿಂದ– ಮಧುಕರ ! ನಾವು ನಿಮ್ಮ ಸಂವಾದವೆಲ್ಲವನ್ನೂ ಕೇಳಿದೆವು. ನಿನ್ನ ಪತ್ನಿಯ ಪ್ರೇಮವು ಸ್ತುತ್ಯರ್ಹವಾದ ಸ್ವರ್ಗೀಯ ವಸ್ತು. ನಿನ್ನ ಜೀವನ ನಿರ್ವಾಹಕ್ಕೆ ನೀನೇನೂ ಆಲೋಚಿಸಬೇಕಾಗಿಲ್ಲ; ಮತ್ತು ನೀವಿಬ್ಬರೂ ನಮಗೆ ಸಹಜಾನುಜಾತರಂತೆ ನಮ್ಮ ಒಡನಿದ್ದು, ನಮಗೆ ಸಹಾಯಕರಾಗಿರತಕ್ಕದ್ದು. ನೀವೇನೂ ಚಿಂತಿಸಬೇಕಾಗಿಲ್ಲ. ಮಧುಕರ ! ಸಾರಿಸಾರಿ ಹೇಳುವೆನು–ನಿಶ್ಚಿಂತನಾಗಿರು !! ಏಳು ? ತಂಗೀ–ಮನೋರಮೆ ! ಅಣ್ಣನೆಂದು ತಿಳಿದು ನನ್ನಲ್ಲಿ ಸಂಕೋಚಭಾವವನ್ನಿಡದೆ ಸಮಾಧಾನದಿಂದಿರು." ಎಂದು ಹೇಳಿ, ಸಂತೈಸಿ ಹೊರಟುಹೋದರು.

**ಶ್ರೀ:**

# ಅಷ್ಟಮ ಪರಿಚ್ಛೇದ.

(ಚರಿತಾರ್ಥತೆ.)

ಅನ್ನಪೂರ್ಣಾವಿವಾಹಮಹೋತ್ಸವ ನಿಶ್ಚಯದ ಶುಭದಿನವು; ಭಟ್ಟಾಚಾರ್ಯನ ಮನೆಯಲ್ಲಿ ಲಕ್ಷ್ಮೀದೇವಿ ತಾಂಡವವಾಡುತ್ತಿದ್ದಳು. ಬಂಧುಮಿತ್ರರೆಲ್ಲರೂ ಸಪರಿವಾರರಾಗಿ ಬಂದಿದ್ದರು. ಕಲ್ಯಾಣನಗರಿಯ ಅಶೇಷ ಬ್ರಾಹ್ಮಣರೂ, ಬ್ರಾಹ್ಮಣಿಯರೂ ಆಮಂತ್ರಿತರಾಗಿ ಬಂದು, ದೇವತಾರಾಧನ, ಅನ್ನಸಂತರ್ಪಣೆಗಳಿಂದ ತೃಪ್ತರಾಗಿ ಕುಳಿತಿದ್ದರು. ದಯಾನಾಥ, ದುರ್ಗಾಪ್ರಸಾದ, ಮಧುಸೂದನಭಟ್ಟಾಚಾರ್ಯ, ಧನ್ವಂತರಿಯರು ಶಾಸ್ತ್ರವಿಚಾರದಲ್ಲಿ ನಿರತರಾಗಿದ್ದರು. ಸಭೆಯ ಮಧ್ಯದಲ್ಲಿ, ಒಂದು ಕಂಬದ ಮರೆಯಲ್ಲಿ ಕುಮಾರಶೇಖರ–ಮಧುಕರರು ಕಳೆಗುಂದಿದ ಮುಖಗಳನ್ನು ತಗ್ಗಿಸಿ, ದೈನ್ಯಭಾವದಲ್ಲಿ ನಿಂತಿದ್ದರು ಕಮಲಾಕಾಂತನೊಡನೆ ವಿಕ್ರಮಕುಮಾರನು ಸಭಾಮಧ್ಯದಲ್ಲಿ ಉತ್ಸಾಹದಿಂದ ಕುಮಾರಶೇಖರನ ಪ್ರಮಾಣಪತ್ರವನ್ನು ಹಿಡಿದು ನಿಂತಿದ್ದನು. ಸಭೆಯ ಒಂದು ಕಡೆಯಲ್ಲಿ ಭವಾನೀದೇವಿಯೇ ಮೊದಲಾದ ಮಹಿಳೆಯರೂ, ಮತ್ತೊಂದು ಕಡೆಯಲ್ಲಿ ಆಬಾಲವೃದ್ಧರಾದ ಲೌಕಿಕ, ವೈದಿಕ ಪುರುಷರೆಲ್ಲರೂ ಕುಳಿತು ಪ್ರಮಾಣಪತ್ರದ ವಿಚಾರವನ್ನು ಪ್ರಸ್ತಾಪಿಸುತ್ತಿದ್ದರು. ವಿಕ್ರಮಸೇನನು ಬಹಳಹೊತ್ತು ಸಭಿಕರನ್ನೇ ನೋಡುತ್ತಿದ್ದು ಆ ಬಳಿಕ ತನ್ನ ಸ್ವಾಭಿಮಾನಪೂರ್ವಕವಾದ ಭಾಷಣಕ್ಕೆ ಮೊದಲು ಮಾಡಿದನು.

"ಆರ್ಯಕುಲೋತ್ಪನ್ನರಾದ ನನ್ನ ಪರಮಪ್ರಿಯ ದೇಶಬಾಂಧವರೇ !

ಮೇಲೆ ವಿವರಿಸಿದ ಪ್ರಮಾಣಪತ್ರವಿಚಾರದಲ್ಲಿ ನಿಮ್ಮ ನಿಜವಾದ ಅಭಿಪ್ರಾಯವನ್ನು ನೀವು ಕೊಡಲಾರದಿರುವಿರಿ; ಕಾರಣವೇನಿರಬೇಕು ? ನಮ್ಮ ಆರ್ಯಧರ್ಮರಹಸ್ಯವನ್ನು ಸನಾತನ ತತ್ವಸಾರವನ್ನು ಮರೆತವರಾಗಿಯೋ–ಇಲ್ಲವೇ ಅವುಗಳ ವಿಷಯದಲ್ಲಿ ನಿಶ್ಚಯಜ್ಞಾನವಿಲ್ಲದೆ ಕೇವಲ ವಿಷಯಭ್ರಾಂತಿ ಸಂಬಂಧವಾದ ಚಾಂಚಲ್ಯದಿಂದ ಮುಗ್ಧರಾಗಿಯೋ ಇರ

ಬಹುದೆಂದು ಭಾವಿಸುವೆನು. ಹಾಗಾಗಿದ್ದರೆ ದಯೆಯಿಟ್ಟು ನನ್ನ ವಿಜ್ಞಾಪನ ವಿದನ್ನು ಅವಧರಿಸಲು ಕೋರುವೆನು.

ಪ್ರಿಯಬಾಂಧವರೇ !

ನಮ್ಮ ಆರ್ಯಧರ್ಮಶಾಸ್ತ್ರವು, ಯಾವ ಅಪರಾಧಿಯಾದವನಿಗೆ ಅವನು ತನ್ನ ಅಕಾರ್ಯಕ್ಕಾಗಿ ಪಶ್ಚಾತ್ತಾಪಹೊಂದಿ ಸಮಾಜಕ್ಕೆ ದಂಡವನ್ನೊಪ್ಪಿಸಿ, ಅವರು ನ್ಯಾಯಸಮ್ಮತವಾಗಿ ವಿಧಿಸುವ ಪ್ರಾಯಶ್ಚಿತ್ತದಿಂದ ಅವನು ಮಾನವಕೋಟಿಯಲ್ಲಿ ಮತ್ತೆ ಪರಿಗಣಿತನಾಗುವುದಕ್ಕೂ, ಮತ್ತು ಅವ ನಿಂದಲೇ ಅವನ ಆ ಅನುತಪ್ತಹೃದಯದ ಪರಿಪಕ್ವಬುದ್ಧಿಯಿಂದಲೇ ದೇಶಕ್ಕೂ ಸಮಾಜಕ್ಕೂ ಅತ್ಯುಪಯುಕ್ತಗಳಾದ ಹಲವು ಅಸಾಧ್ಯಕಾರ್ಯ ಗಳನ್ನು ಮಾಡಿ ಧನ್ಯನಸ್ನಾಗಿ ಮಾಡುವುದಕ್ಕೂ ಅವಕಾಶವನ್ನು ಕಲ್ಪಿಸಿ ಕೊಟ್ಟಿರುವುದು. ಅದಕ್ಕೆ ತಕ್ಕಂತೆಯೇ ಭೂತದಯೆ, ಅನುಕಂಪನ, ಕ್ಷಮಾ, ಔದಾರ್ಯಾದಿ ಗುಣಗಳನ್ನು ಭಗವಂತನು ನಮ್ಮವರಿಗೆ ಸ್ವರ್ಗೀಯ ವಸ್ತುಗಳಾಗಿ ಅನುಗ್ರಹಿಸಿರುವನು. ಅಂತಹ ಸ್ವರ್ಗೀಯವಾದ ಗುಣ ವಿಶೇಷಗಳನ್ನು ನಾವು ಸರ್ವಪ್ರಕಾರದಿಂದಲೂ ಕಾರ್ಯಕಾರಿಯಾಗಿ ಮಾಡಿ ಕೊಳ್ಳಬೇಕೆಂಬ ಉದ್ದೇಶದಿಂದ ನಮಗೆ ಭಗವಂತನು ಪ್ರಜ್ಞೆಯನ್ನೂ ಅನುಗ್ರಹಿಸಿರುವನು. ಅದನ್ನು ನಾವು ಸಾರ್ಥಕಪಡಿಸಿಕೊಳ್ಳಬೇಕಾದರೆ ಮಾಡತಕ್ಕುದೇನು ?

ನಮ್ಮ ಪರಮವಿಶ್ವಸನೀಯರೇ !

ಅವಧರಿಸಿರಿ, ಅನುಗ್ರಹಪೂರ್ವಕವಾಗಿ ಆಜ್ಞಾಪಿಸಿರಿ ? ನಮ್ಮ ಸನಾತನ ಧರ್ಮದ ಭದ್ರತೆಯನ್ನು ಕಾಪಾಡುವಭಾರವು ನಮ್ಮ ಸಮಾಜದ ಮೇಲಿರುವುದು. ನಮ್ಮ ಸಮಾಜವೂ ತನ್ನ ಘನತೆಯನ್ನು ಹಾಗೆಯೇ ಇದುವರೆಗೆ ತಕ್ಕಮಟ್ಟಿಗೂ ಉಳಿಹಿಕೊಂಡು ಬಂದಿರುವುದು. ಆದರೆ, ಈ ನಮ್ಮ ಸಮಾಜದ ಮೊದಲಿನ ಸ್ಥಿತಿಗೂ, ಈಗಾಗಿರುವ ಸ್ಥಿತಿಗೂ ತುಲನ ಮಾಡಹೋದರೆ ಕನಕಗಿರಿಗೂ, ಕಾಡಗುಡ್ಡಕ್ಕೂ ಇರುವಷ್ಟು ಅಂತರವೇ ಕಾಣುತ್ತಿರುವುದು. ಇದಕ್ಕೆ ಕಾರಣವೇನೆಂದರೆ, ಸಮಾಜದಲ್ಲಿ ಮೊದಲಿನ ಕಾರ್ಯದಕ್ಷತೆಯ ಅಭಾವವೊಂದೇ ನಾಕಾದಷ್ಟು ಕೊರತೆಯಾಗಿ ಕಾಣುತ್ತಿರು ವುದು. ಆದುದರಿಂದಲೇ ಈಗಿನ ನಮ್ಮ ಸಮಾಜದಲ್ಲಿ, ಮೊದಲು ತೋರು

ತ್ತಿದ್ದ ಸ್ಥೂಲಸೂಕ್ಷ್ಮವಿಚಾರಜ್ಞಾನವೂ, ನ್ಯಾಯಸ್ಥಾಪನೆಯಲ್ಲಿ ಸತ್ಯದ ಏಕನಿಷ್ಠೆಯೂ, ನಿಷ್ಪಕ್ಷಪಾತವಾದ ಗುಣಗ್ರಹಣ ತತ್ಪರತೆಯೂ, ಪವಿತ್ರತಮವಾದ ದೇಶವಾತ್ಸಲ್ಯವೂ ಈಗ ಎಷ್ಟು ಮಟ್ಟಿಗೆ ತೋರುತ್ತಿರುವುವು? ಒಬ್ಬ ಸಾಮಾನ್ಯಸಾಮಾಜಿಕನಿಂದ ಮೊದಲು, ಸಮಾಜದಲ್ಲಿ ಪರಿಗಣಿತರಾಗಿ ಧರ್ಮಸಂಸ್ಥಾಪನಾ ಕರ್ತರೆನ್ನಿಸಿರುವ ಮಹನೀಯರವರೆಗೆ............ಪ್ರತಿಯೊಬ್ಬರೂ-ಲೋಭ ಮಂತ್ರವೊಂದರಲ್ಲಿಯೇ ಮುಗ್ಧರಾಗಿ, ಪರೋತ್ಕರ್ಷವನ್ನು ಸಹಿಸದೆ, ಪರಸ್ಪರ ಅಂತಃಕಲಹಗಳನ್ನು ಹೆಚ್ಚಿಸಿಕೊಂಡು, ನಿಷ್ಕಾರಣವಾಗಿ ತಮ್ಮ ಕಷ್ಟಾರ್ಜಿತವಾದ ಸಂಪತ್ತನ್ನು ರಾಜಕೀಯ ನ್ಯಾಯಸಭೆಯಲ್ಲಿ ದೂರುವುದಕ್ಕಾಗಿಯೂ, ತಮ್ಮ ದ್ವೇಷಸಾಧನೆಗಾಗಿ ನ್ಯಾಯವಾದಿಗಳೆಂಬವರ ತಂತ್ರಜಾಲದಿಂದ ಮುಗ್ಧರಾಗಿ, ಹಲವು ವ್ಯವಹಾರಗಳಿಗಾಗಿಯೂ, ದುರುಪಯೋಗಪಡಿಸುತ್ತ ಬಂದಿರುವರು. ಹೀಗಾದ ಒಳಿಕ ಸಮಾಜದ ಗತಿಯೇನಾಗಬೇಕು? ಅದರ ಶಾಸನವು ಯಾರ ಮೇಲೆ ತಿರುಗಬೇಕು? ಅನಾಥರ, ಭೀರುಗಳ, ವಿಧೇಯರಮೇಲೆ ಬಿದ್ದು, ತನ್ನ ಕ್ರೌರ್ಯವನ್ನು ಹೆಚ್ಚಿಸಿಕೊಳ್ಳುವ ಸ್ಥಿತಿಗಲ್ಲವೇ ಬಂದಿರುವುದು? ಹೀಗೆ ಮಾಡುವುದರಿಂದ ನಮ್ಮ ದೇಶದ ಸಂಪತ್ತಿ ಅಭಿವೃದ್ಧಿಯಾಗುವ ಬಗೆ ಹೇಗೆ?

ಪೂಜ್ಯರೇ! ಇನ್ನು ತಾವೇ ವಿಚಾರಮಾಡಿ ಹೇಳಿರಿ. ನಮ್ಮ ಕುಮಾರಶೇಖರ-ಮಧುಕರರನ್ನು ನಮ್ಮ ಸಮಾಜದಲ್ಲಿ ಮತ್ತೆ ಸೇರಿಸಿಕೊಳ್ಳಬೇಕೆಂಬುದೇ ನಮ್ಮ ಇಂದಿನ ಉದ್ದೇಶವಾಗಿರುವುದು. ಇವರೂ, ತಮ್ಮ ಅವಿಚಾರಾಂಧತೆಯ ಅಪಕೃತ್ಯಕ್ಕಾಗಿ ಪಶ್ಚಾತ್ತಾಪಗೊಂಡು, ಸಮಾಜಕ್ಕೂ, ಆರ್ಯಧರ್ಮಶಾಸ್ತ್ರಕ್ಕೂ ವಿಧೇಯರಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಸಿದ್ಧರಾಗಿ ನಿಂತು, ತಮ್ಮ ಅಪ್ಪಣೆಯನ್ನು ಪ್ರಾರ್ಥಿಸುತ್ತಿರುವರು. ಅದಕ್ಕಾಗಿ ಇದುವರೆಗೆ ತಮ್ಮ ಸ್ವಾರ್ಜಿತವಾಗಿರುವ ಸ್ಥಿರ-ಚರಸ್ವತ್ತುಗಳೆಲ್ಲವನ್ನೂ ಇದೋ ಇಲ್ಲಿ, ದೇಶಕ್ಕೆ ಹಿತಕರವಾದ ಕ್ರಿಯೆಗಳಿಗಾಗಿ ಮೂಲಧನವೆಂದು ಅರ್ಪಿಸಿರುವರಲ್ಲದೆ, ತಮ್ಮ ಮುಂದಿನ ಜೀವಮಾನವನ್ನು ಸಾರ್ವಜನಿಕ ಹಿತಕಾರ್ಯದಲ್ಲಿಯೇ ವಿನಿಯೋಗಿಸುವುದಾಗಿ ಪ್ರತಿಜ್ಞೆಯನ್ನು ಮಾಡುವುದಕ್ಕೂ ನಿಶ್ಚಯಿಸಿರುವರು. ಹೀಗಿರುವದರಿಂದ ತಾವು ಭಗವದನುಗ್ರಹಲಬ್ಧವಾಗಿರುವ ಭೂತದಯಾಗುಣದಿಂದ, ತಮ್ಮಲ್ಲಿ ನಿಸರ್ಗಸಿದ್ಧವಾಗಿ

ರುವ ಪುತ್ರವಾತ್ಸಲ್ಯದಿಂದ, ಇವರ ಸರ್ವಾಪರಾಧಗಳನ್ನೂ ಕ್ಷಮಿಸಿ, ಪುನೀತರನ್ನಾಗಿ ಮಾಡಬೇಕೆಂಬುದೇ ನನ್ನ ನಮ್ರಪ್ರಾರ್ಥನೆ" ಎಂದಾಡಿ ಸಭಿಕರ ಉತ್ತರನಿರೀಕ್ಷೆಯಿಂದ ಕೈಕಟ್ಟಿಕೊಂಡು ನಿಂತನು

ಸಭಿಕರ ಮುಖಗಳಲ್ಲಿ ವಿಸ್ಮಯ, ಕೌತುಕ, ಅತೃಪ್ತಿ, ಅಸೂಯೆ, ಆಗ್ರಹ, ಅನುಕಂಪನಗಳೇ ಮೊದಲಾದ ಭಿನ್ನಭಾವಗಳು ಕಂಡುಬಂದುವು. ಅಷ್ಟಲ್ಲದೆ ಆರೂ ಉತ್ತರವನ್ನು ಕೊಡಲಾರದವರಾಗಿ, ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತ ಕುಳಿತರು. ಕಮಲಾಕಾಂತನು ನೋಡಿ ಮಂದಹಾಸದಿಂದ ಹೇಳಿದನು– "ಮಹಾಶಯರೇ! ಏಕೆ, ಚಿತ್ರದ ಪುತ್ಥಳಿಗಳಂತೆ ಕುಳಿತಿರುವಿರಿ? ನಮ್ಮ ಸಮಾಜದ ಘನತೆಯನ್ನು ಕಾಪಾಡುವ ಧರ್ಮಬುದ್ಧಿಯನ್ನು ಈಗ ಪ್ರದರ್ಶಿಸಬಾರದೇ? ನಿಮ್ಮ ಶಾಸ್ತ್ರ ಪಾಂಡಿತ್ಯವೂ, ವಾಗ್ವೈಖರಿಯೂ, ವಿವಾಹಪರಿಷ್ಕರಣ ಮತಖಂಡನಾದಿ ವಾದವಿವಾದಗಳಲ್ಲಿಯೂ, ಅಸಾರವಸ್ತುವನ್ನು ಸಾರಭೂತವೆಂದೂ, ಸಾರವತ್ತಾದುದನ್ನು ಅಸಾರವೆಂದೂ ಸ್ಥಾಪಿಸುವ ನವನವೀನ ಮತಪ್ರಸಾರದಲ್ಲಿಯೂ ಉಪಯೋಗಿಸಬೇಕೆಂಬ ಒಂದೇ ಉದ್ದೇಶದಿಂದಲೋ? ಹೇಗೆ? ನಾವೇನೋ ಇವರನ್ನು ನಮ್ಮಸಮಾಜಕ್ಕೆ ಸೇರಿಸಿಕೊಳ್ಳಲು ಸಿದ್ಧರಾಗಿರುವೆವು. ಆದರೆ, ಹಿರಿಯರೂ, ಗುರುಜನರ ವರ್ಗದಲ್ಲಿ ಪರಿಗಣಿತರೂ ಆದ ತಮ್ಮೆಲ್ಲರ ಸಮಕ್ಷಮದಲ್ಲಿಯೇ, ತಮ್ಮ ಅನುಗ್ರಹಪೂರ್ವಕವಾದ ಆಜ್ಞೆಯ ಮೇಲೆಯೇ ಈ ಕೆಲಸವನ್ನು ಮಾಡಿ, ನಮ್ಮ ನಿಮ್ಮಲ್ಲಿ ಐಕ್ಯಮತಸ್ಥಾಪನೆಯ ಬಾಂಧವ್ಯವನ್ನು ಭದ್ರಪಡಿಸಿಕೊಂಡು, ದೇಶದ ಮತ್ತು ನಮ್ಮ ಸಮಾಜದ ಸಂಪದಭ್ಯುದಯಗಳಿಗೆ ಸಿದ್ಧರಾಗಿ ನಿಲ್ಲಬೇಕೆಂಬ ಸಂಕಲ್ಪದಿಂದ ಇಷ್ಟು ದೈನ್ಯವಾಗಿ ಪ್ರಾರ್ಥಿಸಿದೆವು. ತಾವು ಇನ್ನೂ ತಮ್ಮ ಸಹೃದಯಭಾವವನ್ನು ವ್ಯಕ್ತಪಡಿಸುವಷ್ಟು ಶಕ್ತರಾಗಿಲ್ಲ. ಮಾಡುತಕ್ಕುದೇನು?

"ಬಾಂಧವರೇ! ಮತ್ತೊಂದು ಮಾತು– ನಾವು ಇವರನ್ನು ಸಮ್ಮತಿ ಸರಕಾರಕ್ಕೊಪ್ಪಿಸಿ, ದೊಡ್ಡದಾದ ವ್ಯವಹಾರವೊಂದನ್ನು ಹೂಡಬೇಕೆಂದು ಇಚ್ಛಿಸಿದ್ದರೆ ನಮಗೇನೂ ಅಗಾಧವಾಗಿರಲಿಲ್ಲ; ಎಲ್ಲವೂ ಕೈಗೂಡಿ, ದಿಗಂತವಾದ ಕೀರ್ತಿಗೂ ಭಾಜನರಾಗಬಹುದಾಗಿತ್ತು; ಆದರೆ ನಮ್ಮ ಗುರಿ ಕೇವಲ ಬಾಹ್ಯಾಡಂಬರದ ಮೇಲಿಲ್ಲ. ಪರಮಾತ್ಮನ ಪ್ರೀತ್ಯರ್ಥದ

ಮೇಲೆಯೇ ನಮ್ಮ ಗುರಿ! ಆದುದರಿಂದಲೇ ನಮ್ಮ ಸಮಾಜದಿಂದ ಇವರನ್ನು ನೂಕಿ, ನಷ್ಟವುಂಟುಮಾಡಲೊಲ್ಲದವರಾಗಿರುವೆವು. ಇನ್ನಿದಕ್ಕೆ ತಮ್ಮ ಅನುಮತಿ ನೆವಮಾತ್ರಕ್ಕೆ ನಿರೀಕ್ಷಿಸಲ್ಪಟ್ಟಿರುವುದು. ”

ಆದರೂ ಸಭಿಕರಿಂದ ಉತ್ತರವೇನೂ ದೊರೆಯಲಿಲ್ಲ. ಇದೆಲ್ಲವನ್ನೂ ನೋಡುತ್ತಿದ್ದ ಧನ್ವಂತರಿ ಎದ್ದುನಿಂತು, ಸಭೆಗೆ ಕೈಮುಗಿದು, ನ್ಯಾಯಮೂರ್ತಿ ದಯಾನಾಥಠಾಕೂರನನ್ನುದ್ದೇಶಿಸಿ– “ ಧರ್ಮಾವತಾರವೆನ್ನಿಸಿರುವ ನ್ಯಾಯಮೂರ್ತಿ ದಯಾನಾಥಠಾಕೂರರೇ! ವಿಕ್ರಮಸೇನಕುಮಾರನ ಮತ್ತು ಕಮಲಾಕಾಂತಕುಮಾರನ ನ್ಯಾಯಸಮ್ಮತವಾದ ಭಾಷಣಗಳಿಗೆ ಇಲ್ಲಿ ನೆರೆದಿರುವ ಸಭಿಕರಲ್ಲಿ ಲೌಕಿಕರಾಗಲೀ, ವೈದಿಕರಾಗಲೀ ಉತ್ತರವನ್ನು ಕೊಡಲಾರದಿರುವುದರಿಂದ ಇವರ ಪರವಾಗಿ ನಾನೇ ಸನ್ನಿಧಾನಕ್ಕೆ ಒಂದೆರಡು ಅಂಶಗಳನ್ನು ನಿವೇದಿಸಲು ನಿಂತಿರುವೆನು. ಯುಕ್ತವಾಗಿದ್ದರೆ ಅಂಗೀಕರಿಸಲು ಪ್ರಾರ್ಥಿಸುವೆನು. ಮಹನೀಯರೇ! ಇಂದಿನ ಈ ಸಭೆಗೆ ತಾವೇ ನಾಯಕರತ್ನದಂತೆ ಪ್ರಕಾಶಿಸುತ್ತಿರುವಿರಿ. ರಾಜಕೀಯದೃಷ್ಟಿಯಿಂದಲೂ ಸಾರ್ವಜನಿಕದೃಷ್ಟಿಯಿಂದಲೂ ಧರ್ಮನೀತಿ ನ್ಯಾಯಶಾಸ್ತ್ರಗಳ ಜ್ಞಾನಾನುಭವವು ತಮ್ಮಲ್ಲಿ ಅದ್ವಿತೀಯವಾಗಿರುವುದೆಂದು ಪ್ರಮಾಣವಾಗಿ ಹೇಳಬಲ್ಲೆನು. ಆದುದರಿಂದ ಇಂದಿನ ಈ ಸಮಸ್ಯೆಯಲ್ಲಿ ದುರ್ಬಲಸ್ಥಿತಿಗಿಳಿಯುತ್ತಿರುವ ಸಮಾಜಶಾಸನದ ಘನತೆಯನ್ನು ಊರ್ಜಿತಪಡಿಸುವುದಕ್ಕಾಗಿ ಸಮಾಜಧರ್ಮಕರ್ತರಾಗಿಯೂ, ಪ್ರಜಾಪರಿಪಾಲಕರ ರಾಜನೀತಿಯ ಮಹತ್ವವನ್ನು ಪ್ರದರ್ಶಿಸುವ ಪ್ರಭುಗಳಾಗಿಯೂ ತಾವೇ ನಿಂತು ಅಪರಾಧಿಗಳಿಗೆ ಸರಿಯಾದ ಶಾಸನವನ್ನು ವಿಧಿಸಬೇಕಾಗಿ ಕೋರುವೆವು ” ಎಂದು ಸರಿದುನಿಂತನು.

ಧನ್ವಂತರಿಯ ಮಾತಿಗೆ ಎಲ್ಲರೂ ಮುಗ್ಧರಾಗಿ ನೋಡತೊಡಗಿದರು. ನ್ಯಾಯಮೂರ್ತಿ ಎದ್ದುನಿಂತು ಗಂಭೀರಮುದ್ರೆಯಿಂದ ಹೇಳಿದನು. “ ಧನ್ವಂತರೀ ಮಹಾಶಯರ ಅಭಿಪ್ರಾಯವೂ, ವಿಕ್ರಮಸೇನ–ಕಮಲಾಕಾಂತರ ನಮ್ರಪ್ರಾರ್ಥನೆಯೂ ನಮಗೆ ಹೃದಯಂಗಮವಾಗಿವೆ. ಅದರಂತೆ ನ್ಯಾಯಸಮ್ಮತವಾದ ತೀರ್ಮಾನವನ್ನು ಹೇಳುವುದು ನನ್ನನ್ನು ಸೇರಿರುವುದಾಗಿಯೂ ಸೂಚಿಸಲ್ಪಟ್ಟಿದೆ. ಆಗಲಿ, ನಿರ್ವಹಿಸುವೆನು. ಅಪರಾಧಿಗಳಿಗೆ

ಅನುತಾಪವೇ ಪ್ರಾಯಶ್ಚಿತ್ತವಾಗಿರುವುದು. ಅನುತಾಪದಿಂದಲೇ ಅವರ ಅಂತರಾತ್ಮವು ಉತ್ತಮ ಸಂಸ್ಕಾರ ಹೊಂದಬೇಕು. ಆದರೂ ಅವರಿಂದ ಮೊದಲು ಸಮಾಜದ ಘನತೆಗೆ ಅಗೌರವವನ್ನುಂಟುಮಾಡುವ ಕೆಲಸವು ನಡೆಯಿಸಲ್ಪಟ್ಟು, ಭಗವದಾಜ್ಞೆಗೆ ಅವಿಧೇಯರಾದ ಅಪರಾಧಕ್ಕಾಗಿ, ಮುಂದಿನ ತಮ್ಮ ಜೀವಮಾನವನ್ನು ಸಾರ್ವಜನಿಕ ಹಿತದಲ್ಲಿಯೇ ವಿನಿಯೋಗಿಸುವುದಕ್ಕೆ ಹೊಣೆಬೇಕಾಗಿರುವುದು. ಇದಕ್ಕಾಗಿ ಇವರ ಹಿಂದಿನ ಆಚರಣೆಗೆ ದಂಡವಾಗಿ, ಇವರು ಒಪ್ಪಿಸಲಿರುವ ದ್ರವ್ಯವು ಚಿರಸ್ಮಾರಕವಾದ ಕೆಲಸಗಳಿಗ ನಿರ್ದೇಶಿಸಲ್ಪಡಬೇಕಲ್ಲದೆ, ಮುಂದೆ ಇವರ ಪ್ರಾಮಾಣಿಕತೆಯ ಮೇಲೆ ಬಲವಾದ ಹೊಣೆಯನ್ನು ಕೊಡುವುದಾದರೆ ಇವರಿಗೆ ಸಮಾಜದಲ್ಲಿ ಮತ್ತೆ ಸ್ಥಾನವನ್ನು ಕೊಡಬಹುದು."

ದಯಾನಾಥನ ಆಜ್ಞೆಯನ್ನು ಕೇಳಿದೊಡನೆಯೇ ಭಟ್ಟಾಚಾರ್ಯನು ಎದ್ದುನಿಂತು, ವಿನೀತನಾಗಿ–" ಮಹಾಪ್ರಭುವೇ ? ಇವರಿಬ್ಬರನ್ನೂ ನಾನು ಭ್ರಾತೃಸ್ನೇಹದಿಂದ ಪ್ರೀತಿಸಿರುವೆನು. ಇವರ ಪ್ರಾಮಾಣಿಕತನದಮೇಲೆ ನಾನೂ, ಮತ್ತು ನಮ್ಮ ವಿಕ್ರಮಸೇನನೂ ನಮ್ಮ ಸರ್ವಸ್ವವನ್ನೂ ಹೊಣೆಯಾಗಿ ಕೊಡಲು ಒಪ್ಪಿರುವವು. ಅಲ್ಲದೆ ಇವರಿಂದ ಇದುವರೆಗೆ ಸಂಪಾದಿಸಲ್ಪಟ್ಟುದೆಂದು ಇಲ್ಲಿ ಒಪ್ಪಿಸಲ್ಪಟ್ಟ ದ್ರವ್ಯದಿಂದ ಗತಿಸಿದ ನಮ್ಮ ಹಿರಿಯರ ಹೆಸರಿನಲ್ಲಿ ಒಂದು ಪ್ರಾಥಮಿಕ ವಿದ್ಯಾಶಾಲೆಯನ್ನೂ, ಮತ್ತು ಕುಮಾರಶೇಖರನ ಪತ್ನಿಯ ಹೆಸರಿನಲ್ಲಿ– ಸ್ತ್ರೀಯರ ಗೃಹಶಿಕ್ಷಣ, ನೈತಿಕಶಿಕ್ಷಣಗಳಿಗಾಗಿ ಉತ್ತಮ ಶಿಕ್ಷಣಶಾಲೆಯೊಂದನ್ನೂ ನಿರ್ಮಿಸಲು ನಿಶ್ಚಯಿಸಿ ಮೂಲಧನವಾಗಿ ಅದಕ್ಕೆ ನಮ್ಮ ನ್ಯಾಯಾರ್ಜನದಲ್ಲಿ ನಾಲ್ಕನೆಯ ಒಂದು ಪಾಲನ್ನು ಸಮರ್ಪಿಸುವುದಕ್ಕೂ ಸಿದ್ಧರಾಗಿರುವೆವು. ಪ್ರಭುಗಳು ಅನುಗ್ರಹಿಸಬೇಕು." ವಿಕ್ರಮಕುಮಾರನೂ ಮುಂದೆ ಬಂದು–" ಮಹಾಮಹೋಪಾಧ್ಯಾಯರ ಪ್ರಮಾಣವಚನವನ್ನು ನಾನು ತ್ರಿಕರಣಸಾಕ್ಷಿಯಾಗಿ ಅನುಮೋದಿಸಿರುವೆನು. ಈ ವಿಷಯದಲ್ಲಿ ಯಾವ ಸಂದೇಹವೂ ಇರುವುದಿಲ್ಲ." ಎಂದನು.

ಈ ಸಂದರ್ಭದಲ್ಲಿಯೇ ಕಮಲಾಕಾಂತನ ಸೂಚನೆಯಂತೆ, ಹಿಂದೆ ನಿಂತು ಕೇಳುತ್ತಿದ್ದ ಕುಮಾರಶೇಖರನು ತನ್ನ ಮಕ್ಕಳನ್ನು ಕರೆತಂದು,

ದಯಾನಾಥನ ಕಾಲಮೇಲೆ ಕೆಡಹಿ, ತಾನೂ ನಮಸ್ಕರಿಸಿ, ಎದ್ದುನಿಂತು ಕಂಪಿತಸ್ವರದಿಂದ ಹೇಳಿದನು–“ ಧರ್ಮದೇವ ! ಸ್ವಯಂಕೃತಾಪರಾಧ ದಿಂದ ಸಂತಪ್ತನಾಗಿರುವ ಸುಖಬಾಹಿರನಾದ ನಾನು ವಿಜ್ಞಾಪಿಸುವದಿಷ್ಟೆ– ಇದುವರೆಗೆ ಮಾಡಿದ ಅಪಕೃತ್ಯಕ್ಕಾಗಿ ತಮ್ಮಲ್ಲಿ ಕ್ಷಮೆಯನ್ನು ಬೇಡುವುದು; ನನ್ನ ಜೀವಮಾನವನ್ನು ಈ ನಮ್ಮ ಏಕಮಾತ್ರಬಂಧುವಾಗಿರುವ ಭಟ್ಟಾ ಚಾರ್ಯರ ಪಾದಸೇವೆಯ ಏಕನಿಷ್ಠೆಯಲ್ಲೇ ಕಳೆವೆನೆಂದು ಪಂಚಭೂತಸಾಕ್ಷಿ ಯಾಗಿ ಪ್ರಮಾಣಮಾಡುವುದು, ಇವೆರಡೇ ಅಲ್ಲದೆ ಮತ್ತಾವುದಕ್ಕೂ ನಾನು ಪಾತ್ರನಾಗಿಲ್ಲ ನನ್ನ ಮದಾಂಧತೆಯ ಫಲವಾಗಿ ಮಾತೃವಿಹೀನರಾಗಿ, ದೀನರಾದ ಈ ಅವಿವಾಹಿತೆಯಾಗಿರುವ ಸುಕುಮಾರಿಯನ್ನೂ ಮತ್ತೂ ಈ ಕುಮಾರನನ್ನೂ ತಮ್ಮ ಪಾದದಲ್ಲಿ ಒಪ್ಪಿಸಿ ನಿಶ್ಚಿಂತನಾಗಿರುವೆನು. ಇವ ರನ್ನು ಕಾಪಾಡುವುದಾಗಲೀ, ಕೈಬಿಡುವುದರಿಂದ ಕೊಲ್ಲುವುದಾಗಲೀ ತಮ್ಮನ್ನೇ ಸೇರಿರುವುದು.” ಎಂದು ಮತ್ತೊಮ್ಮೆ ದಯಾನಾಥನಿಗೂ, ಸಭೆಗೂ ಕೈಮುಗಿದನು.

ಕುಮಾರಶೇಖರನ ಪ್ರಾರ್ಥನೆಯೂ ಅನ್ನಪೂರ್ಣೆಯ ದೈನ್ಯವೂ ಸಭಿಕರ ಮನಸ್ಸನ್ನು ಕರಗುವಂತೆ ಮಾಡಿ ಎಲ್ಲರ ಮುಖದಲ್ಲಿಯೂ, ಸಹಾನು ಭೂತಿಯ ಚಿಹ್ನೆಯನ್ನು ತೋರಿಸಿತು. ದಯಾನಾಥನು ನೋಡಿ ಸಂತೋಷ ದಿಂದ ಅನ್ನಪೂರ್ಣಾ ಕೃಪಾದೇವರ ತಲೆಯಮೇಲೆ ತನ್ನ ವರದಹಸ್ತ ವನ್ನಿರಿಸಿ, ಹೇಳಿದನು–“ ಇಲ್ಲಿ ನೆರೆದಿರುವ ನಮ್ಮ ಪರಮಪೂಜ್ಯರಾದ ದೇಶಬಾಂಧವರೆಲ್ಲರಿಗೂ ನನ್ನ ನಿಶ್ಚಿತಾರ್ಥವನ್ನು ನಿವೇದಿಸಲಿರುವೆನು. ಏನೆಂದರೆ, ಆಶ್ರಿತಪರಿಪಾಲನವು ನಮ್ಮ ಆರ್ಯರಿಗೆ ಮುಖ್ಯ ಧರ್ಮವು. ಈ ಮಾತೃವಿಹೀನರಾದ ಬಾಲ–ಬಾಲೆಯರು ನನಗೆ ಒಪ್ಪಿಸಲ್ಪಟ್ಟಿರುವುದರಿಂದ ಇವರು ನನ್ನ ಆಶ್ರಿತವರ್ಗದಲ್ಲಿ ಸೇರಿದವರಾಗಿರುವರು. ಇವರ ಶಿಕ್ಷಾ ರಕ್ಷಣದ ಸರ್ವಸ್ವಾತಂತ್ರ್ಯವೂ ಇನ್ನು ನನ್ನನ್ನೇ ಸೇರಿರುವುದು ಹೀಗಿರು ವುದರಿಂದ ನನ್ನ ಬಾಂಧವರೇ ! ಈಗ ನಾನು ಪ್ರಭುತ್ವದ ದರ್ಪವನ್ನು ತೋರದೆ ಸಾಮಾನ್ಯ ಸಾಮಾಜಿಕನೆಂಬ ಭಾವನೆಯಲ್ಲಿ ಈ ಕನ್ಯೆಯ ಮುಂದಿನ ಅಭ್ಯುದಯಚಿಂತನೆಯಿಂದ ಇವಳನ್ನು ನನ್ನ ಸಹಜಾತನಾದ ಕಮಲಾಕಾಂತಕುಮಾರನಿಗೆ ಧರ್ಮಪತ್ನಿಯನ್ನಾಗಿ ಮಾಡುವುದಕ್ಕೂ, ಮತ್ತು

ಈ ಕುಮಾರನ ಪುರೋವೃದ್ಧಿಚಿಂತನೆಯಿಂದ ಇವನಿಗೆ ನನ್ನ ಜ್ಞಾತಿಬಂಧುಗಳೂ, ನನ್ನ ಪರಮಪ್ರೀತಿಪಾತ್ರರೂ ಆದ ವಿಕ್ರಮಸೇನ–ದುರ್ಗಾಪ್ರಸಾದರ ಸುಶಿಕ್ಷೆಗೊಪ್ಪಿಸುವುದಕ್ಕೂ ಮುಂದೆ ಇವನಿಗೆ ದುರ್ಗಾಪ್ರಸಾದನ ಸುಕುಮಾರಿ, ಈ ಪುಟ್ಟ ಹುಡುಗಿಯನ್ನು ಕೊಟ್ಟು, ಇವನನ್ನು ಜಾಮಾತನನ್ನಾಗಿ ಮಾಡಿಕೊಳ್ಳುವುದಕ್ಕೂ ನಿಶ್ಚಯಿಸಿರುವೆನು. ಇದಕ್ಕೆ ತಮ್ಮೆಲ್ಲರ ಅನುಮೋದನವನ್ನೂ ಅಪೇಕ್ಷಿಸುವೆನು." ಎಂದು ಹೇಳಿ ಒವ್ಮೆ ಎಲ್ಲರನ್ನೂ ನೋಡಿದನು.

ದಯಾನಾಧನು ಮೊದಲು ಪ್ರಭುವಾಗಿ ನ್ಯಾಯಸ್ಥಾಪನೆಮಾಡಿ, ಬಳಿಕ ಆಶ್ರಿತವಾತ್ಸಲ್ಯದಿಂದ ಸಾಮಾನ್ಯನಂತೆ ನ್ಯಾಯಸಮ್ಮತವೂ, ಗಂಭೀರವೂ, ಮೋಹಕರವೂ ಆದ ಭಾಷಣದಿಂದ ತಮ್ಮ ಅನುಮೋದನವನ್ನು ಕೋರಲು ಸಭಿಕರೆಲ್ಲರೂ ದಯಾನಾಧನ ಕೋರಿಕೆಗೆ ಮನವೊಲಿದು ಏಕವಾಕ್ಯತೆಯಿಂದ ಹೇಳಿದರು– "ನಮ್ಮೆಲ್ಲರಿಗೂ ಸಮ್ಮತಿಯುಂಟು. ನ್ಯಾಯಮೂರ್ತಿಯವರ ನಿರೂಪವು ನಮ್ಮೆಲ್ಲರಿಗೂ ಮಾನ್ಯವಾಗಿರುವುದು. ಈ ಉತ್ಸವವನ್ನು ನೋಡಲು ನಾವೇ ಮುಂದಾಗಿ ನಿಲ್ಲಲು ತ್ವರೆಗೊಂಡಿರುವೆವು.. " ಎಂದು ಮೊದಲಾಗಿ ಹೇಳತೊಡಗಿದರು. ಆಗ ಉಂಟಾದ ಸಂಭ್ರಮವನ್ನು ಕೇಳಬೇಕೇ ?......

ವಿಕ್ರಮಕುಮಾರನು ಕಮಲಾಕಾಂತನನ್ನು ಕೈಹಿಡಿದು ಕರೆತಂದು ಹಸೆಯಮೇಲೆ' ಕುಳ್ಳಿರಿಸಿದನು. ಭಟ್ಟಾಚಾರ್ಯನು ಲಲಿತಾದೇವಿಯೊಡನೆ ಬಂದು ವರಪೂಜಾಮಹೋತ್ಸವದಲ್ಲಿ ನಿಂತನು. ಮತ್ತೊಂದು ಕಡೆಯಲ್ಲಿ ದಯಾನಾಧನ ಪತ್ನಿ ಅನ್ನಪೂರ್ಣೆಯನ್ನು ಕುಳ್ಳಿರಿಸಿ, ತನ್ನ ಸಖೀವರ್ಗದೊಡನೆ ಮಂಗಳಕಾರ್ಯಕ್ಕೆ ಮೊದಲು ಮಾಡಿದಳು. ಅಷ್ಟೇ ಅಲ್ಲ! ವಿಕ್ರಮಕುಮಾರನು ಕುಮಾರಶೇಖರ–ಮಧುಕರರನ್ನು ನಲವೇರಿಸಿ, ಕೃಪಾದೇವನನ್ನೂ ದುರ್ಗಾಪ್ರಸಾದನ ಪುಟ್ಟಹುಡಿಗಿಯಾದ ಲಾವಣ್ಯಮಯಿಯನ್ನೂ ಹಸೆಯಮೇಲೆ ಕುಳ್ಳಿರಿಸಿ, ದುರ್ಗಾಪ್ರಸಾದ ಹೇಮಲತಾದೇವಿಯವರನ್ನು ಆರತಕ್ಷತೆಯ ಕೆಲಸದಲ್ಲಿ ನಿಯಮಿಸಿದನು.

ವಿಶೇಷವಿವರಣವೇಕೆ ? ಆ ವೇಳೆಯಲ್ಲಿ ಭೂಸುರರ ವೇದಮಂತ್ರಘೋಷವೂ, ಸುವಾಸಿನಿಯರ ಮಂಗಳಗೀತೆಯ ಮಂಜುಳಸ್ವರವೂ, ವಿವಿಧ ವಾದ್ಯಗಳ ಭೋಂಕಾರವೂ, ಪ್ರೇಕ್ಷಕರ ಧನ್ಯವಾದಪೂರ್ವಕವಾದ ಕೋಲಾಹಲವೂ, ದಶದಿಕ್ಕುಗಳನ್ನೂ ವ್ಯಾಪಿಸುವಂತೆ ಮಾಡಿದವೆಂದರೆ ಸಾಕು!

# ಉಪಸಂಹಾರ.

ಇನ್ನು ಕಥೆಗೆ ಸಂಬಂಧಪಟ್ಟ ಒಂದೆರಡು ಮಾತುಗಳು ಉಳಿದಿರುವುವು. ಅವನ್ನೂ ವಿವರಿಸಿ ವಿರಮಿಸುವುದು ನಮ್ಮ ಕರ್ತವ್ಯವು. ವಿವಾಹವು ಸಾಂಗವಾಗಿ ಸಕಲ ಸಂಭ್ರಮದಿಂದ ನೆರವೇರಿತೆಂದೂ, ವಿವಾಹದೊಡನೆಯೇ ಅನ್ನಪೂರ್ಣೆಯನ್ನು ಕಮಲಾದೇವಿ ತನ್ನ ಅಕ್ಕರೆಯ ತಂಗಿಯೆಂದು ಭಾವಿಸಿ, ಮನೆಗೆ ಕರೆತಂದು ಮನೆಗೆ ಕಿರಿಯ ಒಡತಿಯನ್ನಾಗಿ ನಿಯಮಿಸಿಕೊಂಡಳೆಂದೂ ಇಲ್ಲಿ ಬೇರೆ ಹೇಳಬೇಕಾಗಿಲ್ಲವಷ್ಟೆ ?

ಭಟ್ಟಾಚಾರ್ಯನು ಲಲಿತಾ – ಪ್ರಮದಾದೇವಿಯರೊಡಗೊಂಡು ರುಕ್ಮಿಣೀ ಸತ್ಯಭಾಮಾ ಸಮೇತನಾದ ಶ್ರೀಕೃಷ್ಣನಂತೆ, ಪ್ರದ್ಯುಮ್ನ ಕುಮಾರನಿಂದಲೂ, ಸಾತ್ಯಕಿಯಂತೆ ವಿಧೇಯನೂ, ಸೇವಾನಿರತನೂ ಆಶ್ರಿತನೂ ಆದ ಕುಮಾರಶೇಖರನಿಂದಲೂ ಕೂಡಿ, ಮತ್ತೆ ವಿದ್ಯಾರ್ಥಿಗಳಿಗೆ ಕಲ್ಪತರುವಾಗಿ ನಿಂತನು.

ಪ್ರಮದೆಯ ತಾಯಿತಂದೆಗಳು, ಪಶ್ಚಾತ್ತಾಪಹೊಂದಿ, ತಮ್ಮ ಸ್ಥಿತಿಗತಿಗಳೆಲ್ಲವನ್ನೂ ಮಧುಕರನಿಗೊಪ್ಪಿಸಿ, ಪುತ್ರವಾತ್ಸಲ್ಯದಿಂದ ಆತನೊಡಗೂಡಿರಲು ನಿಶ್ಚಯಿಸಿದರು. ಮಧುಕರನು ಕೂಡ, ಅವರು ಒಲಿದಿತ್ತ ಆಸ್ತಿಯನ್ನು ಶುದ್ಧಭಾವನೆಯಿಂದ ಮೊದಲಿನ ಕಪ್ಪಕಾಣಿಕೆಯೊಡನೆ ಸೇರಿಸಿ, ಪತ್ನಿಯಾದ ಮನೋರಮೆಯೊಡನೆಯೂ, ಪಾಲಕಮಾತಾಪಿತೃಗಳೊಡನೆಯೂ, ವಿಕ್ರಮಕುಮಾರ–ಭವಾನೀದೇವಿಯರ ಸಹಚರ್ಯೆಯಿಂದ ಶಾಂತಹೃದಯನಾಗಿ ಅವರ ದೇಶಸೇವೆಯಲ್ಲಿ ಸಹಾಯಕನಾಗಿ ನಿಂತನು.

ವಿಕ್ರಮಕುಮಾರನು, ತನ್ನ ಭುಜಬಲದಂತೆ ಸಹಕರಿಸಿದ ಧನ್ವಂತರಿಯನ್ನು ಆತನ ವೈದ್ಯಶಾಲೆಯೊಡನೆ ತನ್ನ ಗ್ರಾಮದಲ್ಲಿಯೇ ಇರಬೇಕೆಂದು ಪ್ರಾರ್ಥಿಸಿ ಅದರಂತೆ ಒಪ್ಪಿದ ಧನ್ವಂತರಿಯನ್ನು ತನ್ನ ಹಿತಚಿಂತಕನಾದ ಗುರುವಾಗಿಯೂ, ಮಧುಕರನನ್ನು ತನ್ನ ಕಾರಖಾನೆಯ ಕಾರ್ಯನಿರ್ವಾಹದಲ್ಲಿ ಸಹಾಯಕನನ್ನಾಗಿಯೂ ನಿಯಮಿಸಿಕೊಂಡನು. ಮತ್ತೂ ಈತನು ಸಾಹಸ ಕೌಶಲ್ಯಗಳಿಂದ ಸುಪ್ರೀತರಾದ ರಾಜಪ್ರತಿನಿಧಿಗಳ ಬಹುಮಾನಗಳಿಗೆ ಧನ್ಯವಾದವನ್ನೊಪ್ಪಿಸಿ, ತನ್ನ ದೇಶ ಮತ್ತು ಸಮಾಜಗಳನ್ನು ನಿರ್ವಂಚನೆ

ಯಿಂದ ಸೇವಿಸಿ, ಆತ್ಮಾನಂದಕ್ಕೆ ಭಾಗಿಯಾಗಬೇಕೆಂಬ ಒಂದೇಗುರಿಯನ್ನು ಹಿಡಿದಿದ್ದರೂ, ಕಮಲಾಕಾಂತ, ದುರ್ಗಾಪ್ರಸಾದ, ದಯಾನಾಥರಾಕೂರರ ನಿರ್ಬಂಧದಿಂದಲೂ, ಸರಕಾರದವರ ಬಲವತ್ತರವಾದ ನಿರೂಪದಿಂದಲೂ, ದಯಾನಾಥನ ನ್ಯಾಯಪೀಠಕ್ಕೆ ಸನ್ಮಾನಿತಸಹಾಯಕ ನ್ಯಾಯದರ್ಶಿಯಾಗಿ ನಿಂತನು. ಮತ್ತೇನು ? ಗಡಿಯ ಕಳ್ಳರ ವಿಚಾರವೊಂದುಳಿಯಿತು.

ಹೊಟ್ಟೆಗಿಲ್ಲದೆ ಕೊಲೆ-ಸುಲಿಗೆಗಳಿಂದ ಜೀವಿಸಬೇಕಾಗಿದ್ದ ಕಳ್ಳರಿಗೆ ಕಾಲಜ್ಞನಾದ ವಿಕ್ರಮಕುಮಾರನು ನಯಭಯದಿಂದಲೂ, ಶಾಸನದ ನಿರ್ಬಂಧದಿಂದಲೂ ತಿಳಿವುಂಟುಮಾಡಿ, ಎಲ್ಲರನ್ನೂ ಅಕ್ಷರಸ್ಥರನ್ನಾಗಿಯೂ, ಉದ್ಯೋಗದಲ್ಲಿ ನಿರಲಸರನ್ನಾಗಿಯೂ ಮಾಡಿ, ಹದಕ್ಕೆ ತಂದು, ಬೇರೆಬೇರೆ ಕಾರಖಾನೆಗಳಲ್ಲಿಯೂ, ಕೃಷಿ, ಕೈಗಾರಿಕೆ, ನೇಯ್ಗೆಯೇ ಮೊದಲಾದ ಇತರ ಜೀವನೋಪಾಯ ಕಾರ್ಯಗಳಲ್ಲಿಯೂ ನಿಯಮಿಸಿ, ತನ್ನ ಗ್ರಾಮದ ಸಾಂಪತ್ತಿಕಸ್ಥಿತಿಯನ್ನು ಊರ್ಜಿತಾವಸ್ಥೆಗೆ ತಂದನು. ಕಳ್ಳರಲ್ಲಿ ಹೆಗ್ಗಡೆಗೂ ಮತ್ತು ಗಡಿಯ ಮಲ್ಲಯ್ಯನಿಗೂ ಅವರ ದುರಾಗ್ರಹದ ಫಲವಾಗಿ ಅಂದೇ ದೇಹಾಂತಶಿಕ್ಷೆಯಾಯ್ತು. ಉಳಿದ ಕಾರಾಗೃಹದ ಕಾಳಮುಖರಿಗೆ ಒಂದೆರಡು ವರ್ಷಗಳ ಕಾಲ ಕಾರಾಗೃಹ ಶಿಕ್ಷೆಯಲ್ಲಿಯೇ ಪರ್ಯವಸಾನವಾಯಿತು.

ಮತ್ತೇನು ? ಎಲ್ಲವೂ ವಿವರಿಸಲ್ಪಟ್ಟಿತು. ಉದ್ಯೋಗನಿರತರಿಗೆ ಅಸಾಧ್ಯವಾದುದಿಲ್ಲವೆಂದೂ, ಸತ್ಯಸಂಕಲ್ಪಕ್ಕೊಳಪಟ್ಟ ಕಾರ್ಯವು ಉತ್ತರೋತ್ತರಾಭಿವೃದ್ಧಿದಾಯಕವಾದ ಉತ್ತಮಫಲವನ್ನೇ ಹೊಂದುವದೆಂದೂ, ಸುಶಿಕ್ಷಣೆಯೇ ಮೇಲಿನ ಎರಡು ವಿಷಯಕ್ಕೂ ಆಧಾರವಾದುದೆಂದೂ ನಿರವಿಸುವ ವಿಕ್ರಮ-ಭವಾನಿಯರ ಉದ್ಯೋಗತತ್ಪರತೆ, ಸತ್ಸಂಕಲ್ಪಗಳು ಲೋಕಾದರ್ಶವಸ್ತುವೆಂದು ಸಾರಿ, ಕಥಾರಂಭದ ಮಂಗಳ ಶ್ಲೋಕವನ್ನು ನೆನೆನೆನೆಯುತ್ತ ಮಂಗಳಪ್ರದನಾದ ರಮಾಧವನನ್ನು ಕುರಿತು ಮಂಗಳಾಶಾಸನವನ್ನು ಮಾಡೆಂದು ಪ್ರಾರ್ಥಿಸುತ್ತ ವಿರಮಿಸುವುದಲ್ಲವೆ ?

(ಆಸ್ತು)

“ಸಿದ್ಧಿಂ ಸರ್ವಾಣಿ ಭೂತಾನಿ ಭೂತಾನಾಂಚ್ಛೈವ ಯಃ ಪ್ರಭುಃ ।
ದಾಸ್ಯಂತಿ ಮಮಯೋಽಚಾನ್ಯೆ ಹ್ಯದೃಷ್ಟಾಃ ಪಥಿಗೋಽಚರಾಃ॥
ಸರ್ವೇಽಜನಾಃಸ್ಸುಖಿನೋಽಭವಂತು। ಸಮಸ್ತಸನ್ಮಂಗಲಾನಿಸಂತು!।

ತಥಾಸ್ತು ! ತಥಾಸ್ತು !! ತಥಾಸ್ತು!!!

॥ ಶ್ರೀಕೃಷ್ಣಾರ್ಪಣಮಸ್ತು ॥



## ಸತೀಹಿತೈಷಿಣಿಗೆ ಬಂದ ಅಭಿಪ್ರಾಯಗಳಲ್ಲಿ--

---

**ಸದ್ಧರ್ಮಸೋದರಿಯಲ್ಲಿ,**

.... ..........ಪುಸ್ತಕಗಳೆಲ್ಲವನ್ನೂ ಒಂದೆರಡಾವರ್ತಿ ಓದಿದೆನು. ಒಟ್ಟಿನಲ್ಲಿ ಎಲ್ಲವೂ ಶ್ಲಾಘ್ಯವಾಗಿದೆ.

೧. ಮಾತೃನಂದಿನಿ.— ಸಾಂಸಾರಿಕ, ಸಾಮಾಜಿಕ, ಧರ್ಮನಿರೂಪಣದ ಮೂಲಕ ಸ್ವದೇಶಾಭಿಮಾನವನ್ನು ಸೂಚಿಸುವ ಈ ಕಥೆಯನ್ನು ವಿಚಾರಜ್ಞರು ನೋಡತಕ್ಕುದಾಗಿದೆ. ಸ್ತ್ರೀಜನೋದ್ದೇಶವಾದ ಈ ಪುಸ್ತಕವು ಇನ್ನೂ ಸುಲಭ ಶೈಲಿಯಲ್ಲಿದ್ದರೂ ಇರಬಹುದಾಗಿದ್ದಿತು. ವಿಷಯ ಗೌರವವು ಜನಾದರಣೀಯವೆನಿಸಿದೆ.

೨ ಸೇವಾವಿಚಾರ.— ಮಾನವಜನ್ಮಧನ್ಯತೆಗೆ ವಿಶ್ವಸೇವೆಯೇ ಅಗತ್ಯವೆಂದು ತೋರಿಸುವ ಈ ಪ್ರಬಂಧವು ಸ್ತ್ರೀಪುರುಷರ ಆಲಸಭಾವವನ್ನು ಹೋಗಲಾಡಿಸತಕ್ಕುದಾಗಿದೆ.

೩ ದಕ್ಷಕನ್ಯಾ.— ಲೌಕಿಕ ವ್ಯವಹಾರದ ಚಾತುರ್ಯವನ್ನು ಉಪಯೋಗಿಸುವುದರಲ್ಲಿ ಮಾನವನ ಮನಸ್ಸು ಹೇಗೆಹೇಗೆ ಪ್ರವರ್ತಿಸಬಹುದೋ, ಅದೆಲ್ಲವನ್ನೂ, ಈ ಚನ್ನಾದ ಕಾದಂಬರಿಯಲ್ಲಿ ಬಗೆಗಾಣಬಹುದು.

೪ ರಮಾನಂದ:— ಪರಸ್ತ್ರೀಯೋಽಸಹಿಷ್ಣುತೆಯು ಭ್ರಾತೃವಾತ್ಸಲ್ಯವನ್ನೂ ಲೆಕ್ಕಿಸುವದಿಲ್ಲವೆಂಬದನ್ನು ಈ ಕಥೆಯಲ್ಲಿ ತಿಳಿಯಬಹುದಾಗಿದೆ. ಇದರೊಳಗೆ ಆರಿಸಿರುವ ನೀತಿಪದ್ಯಗಳು ಮಾನವನ ಜನ್ಮಜನ್ಮಕ್ಕೂ ಮರೆಯುಕೂಡದವುಗಳಾಗಿವೆ.

೫ ಭದ್ರಗೀತಾವಲಿ — ಶುದ್ಧವಿಷಯ, ಮುದ್ದುಮಾತು, ಛಂದೋಬದ್ಧ—ಇಂತಹ ಭದ್ರಗೀತಾವಲಿಯನ್ನು ಬದ್ಧಾದರರು ಶ್ರದ್ಧೆಯಿಂದಾದರಿಸುವದರಲ್ಲಿ ಉದ್ದಂಡಕವಿಕುಲತಿಲಕರೂ ಮೆಚ್ಚುವಂತಿದೆ.

**ದೇವನಹಳ್ಳಿ.** }

ಇತಿ—ಹಿತಚಿಂತಕಭ್ರಾತೃ,
**ಆರ್. ಶ್ರೀನಿವಾಸರಾವ್.**

॥ ಶ್ರೀಃ ॥

## ಸತೀಹಿತೈಷಿಣೀ-ಕರ್ನಾಟಕ ನಂದಿನಿಯರ ಪೋಷಕ ಪ್ರೋತ್ಸಾಹಕರಾದ-ಕರ್ನಾಟಕ ಭಾಷಾಭಿಮಾನಿಗಳಾದ-ಮಹಾಜನರಲ್ಲಿ

# ನಿವೇದನವು.

---

ಈಗ ೧೦ ವರ್ಷಗಳಿಂದ ಸತೀಹಿತೈಷಿಣೀ ನಂದಿನಿಯರಿಗೆ ಉಂಟಾಗಿದ್ದ ಋಣಬಾಧೆಯು ದೈವಕೃಪೆಯಿಂದ ಈಗ ನಿವಾರಣೆಯಾಗುತ್ತ ಬಂದಿರುವದೆಂದು ತಿಳಿಸಲು ಸಂತೋಷಿಸುವೆವು. ಮತ್ತು ಮಾತೃಮಂದಿರದಲ್ಲಿ ಪ್ರಕಟವಾಗಿರುವ ಪುಸ್ತಕಗಳೆಲ್ಲವನ್ನೂ ಮಾರಾಟಕ್ಕಾಗಿ ಘನವಾದ ಮೈಸೂರ ಸರ್ಕಾರದವರ ಅಪ್ಪಣೆ ಪಡೆದು, ಸರ್ಕಾರದ ಬುಕ್‌ಡಿಪೋವಿಗೆ ಒಪ್ಪಿಸಿರುವೆವಾದುದರಿಂದ ಇನ್ನು ಮುಂದೆ ಸತೀ-ಹಿತೈಷಿಣೀ-ನಂದಿನಿಯರ ಹಿತೈಷಿಗಳಾದವರೆಲ್ಲರೂ ಕ್ಯೂರೇಟರ್ ಗವರ್ನಮೆಂಟ್ ಸೆಂಟ್ರಲ್ ಬುಕ್‌ಡಿಪೊ, ಬೆಂಗಳೂರು ಇವರಿಗೆ ಬರೆದು ಪುಸ್ತಕಗಳನ್ನು ತರಿಸಿಕೊಳ್ಳಬೇಕೆಂದೂ ಚಂದಾದಾರರಿಗೆ ಮುಂದೆ ಪ್ರಕಟವಾಗುವ ಹೊಸಪುಸ್ತಕಗಳು ಮಾತ್ರ ಕಳುಹಲ್ಪಡುವವಲ್ಲದೆ ಈವರೆಗೆ ಪ್ರಕಟವಾಗಿರುವ ಪುಸ್ತಕಗಳು ಬೇಕಾಗಿದ್ದರೆ ಅವರು ಮೇಲೆ ಹೇಳಿದಂತೆ ಕ್ಯೂರೇಟರ್ ಕಡೆಯಿಂದಲೇ ವಿ. ಪಿ. ಪಿ. ದ್ವಾರಾ, ಸೆಟ್ ಪುಸ್ತಕಗಳನ್ನು ತರಿಸಿಕೊಂಡು ನಮಗೆ ತಿಳಿಸಿದರೆ ಅವರಿಗೆ ಬಹುಮಾನದ ಪುಸ್ತಕಗಳನ್ನು ಉಚಿತವಾಗಿ ಕಳುಹಿಸಿ ಕೊಡುವೆವು, ಅವರು ತೆಗೆದುಕೊಂಡ ಪುಸ್ತಕಗಳ ಪಟ್ಟಿಯನ್ನು ನಮಗೆ ಬರೆಹದಲ್ಲಿ ತಿಳಿಸಬೇಕೆಂದೂ ಹಿತೈಷಿಗಳಾದ ಮಹಾಜನರೆಲ್ಲರೂ ಹೀಗೆ ಮಾಡುವದಾದರೆ ಮಣಿಮಾಲೆಯ ಮಾರ್ಗವನ್ನನುಸರಿಸಿ ಆನಂದಮಯಿ- ಬ್ರಹ್ಮಚಾರಿಣಿಯರೂ ಜಾಗ್ರತೆಯಾಗಿ ಪ್ರಕಟರಾಗುವರೆಂದೂ ಪೂರ್ಣ ಭರವಸೆಯಿಂದ ನಿವೇದಿಸುತ್ತಿರುವೆವು.

ಇಂತು, ಸತೀ-ಹಿತೈಷಿಣೀ-ನಂದಿನಿಯರಿಗಾಗಿ ನಿವೇದಿಸುವ

ಮುಕ್ಕಾಂ-ಧಾರವಾಡ
೭-೮-೧೯೩೧.

ಹಿತೈಷಿಣೀ ತಿರುಮಲಾಂಬಾ
ಮಾತೃಮಂದಿರಂ, ನಂಜನಗೂಡು.

# ಸತೀ ಹಿತೈಷಿಣೀ

---

## ( ತ್ರೈಮಾಸಿಕ ಗ್ರಂಥಮಾಲಾ )

ಹರಿಣಿ (ವಿದ್ಯುಲ್ಲತಾ) ಭಾಗ II ನೆಯದಾದ **ಮಣಿಮಾಲೆ** ಮುದ್ರಣ ದಲ್ಲಿದೆ ಬೆಲೆ ೧–೦–೦ ಆನಂದಮಯಿ-ಬಹುವಿಸ್ತೃತಗ್ರಂಥ ಮುದ್ರಣದಲ್ಲಿದೆ, ಬ್ರಹ್ಮಚಾರಿಣಿ ಆನಂದಮಯಿಾ ಸಹ ಇದೇ ವರ್ಷದ ಪುಷ್ಯ–ಫಾಲ್ಗುನಗಳ ಲ್ಲಿಯೂ ಪ್ರಕಟವಾಗುವವು. ಮೂರು ಪುಸ್ತಕಗಳಿಂದ ಒಟ್ಟು ೫–೦–೦ ಟಪಾಲ ಹಾಸಲು ಬೇರೆ. ಮುಂಗಡವಾಗಿ ಕಳುಹಿಸಿ ಚಂದಾದಾರರಾದರೆ ಒಟ್ಟು ಹಾಸಲು ಸೇರಿ ೪–೦–೦ ಮಾತ್ರ ಅಪೇಕ್ಷಕರು **ಕೆಳಗಿನ ವಿಳಾಸಕ್ಕೆ** ಬರೆದು ವಿಶೇಷ ವಿಷಯವನ್ನು ತಿಳಿದುಕೊಳ್ಳಬಹುದು.

ಸಂಪಾದಿಕಾ

**ಸತೀಹಿತೈಷಿಣಿ ನಂಜನಗೂಡು**

ಅಥವಾ

ಮ್ಯಾನೇಜರ್

ಶ್ರೀಕೃಷ್ಣ ಮುದ್ರಾಶಾಲಾ,

ಧಾರವಾಡ.

---